# ಶಾಸನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿರುವ
ಪಿಎಚ್.ಡಿ. ಮಹಾಪ್ರಬಂಧ)


ಶೋಭನಾ ಎಸ್.
ಸಂಶೋಧನಾ ವಿದ್ಯಾರ್ಥಿ

ಡಾ. ಕಲವೀರ ಮನ್ವಾಚಾರ
ಮಾರ್ಗದರ್ಶಕರು





ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩. ೨೭೬
೨೦೧೫

# ಶಾಸನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿರುವ
ಪಿಎಚ್.ಡಿ. ಮಹಾಪ್ರಬಂಧ)



**ಶೋಭನಾ ಎಸ್.**
ಸಂಶೋಧನಾ ವಿದ್ಯಾರ್ಥಿ

**ಡಾ. ಕಲವೀರ ಮನ್ವಾಚಾರ**
ಮಾರ್ಗದರ್ಶಕರು




**ಶಾಸನಶಾಸ್ತ್ರ ವಿಭಾಗ**
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೫

## ಸಂಶೋಧಕರ ಪ್ರಮಾಣ ಪತ್ರ

'ಶಾಸನಗಳಲ್ಲಿ ಸ್ತ್ರೀ ಪ್ರತಿನಿಧಿಕರಣ' ಎಂಬ ವಿಷಯದಲ್ಲಿ ಮಹಾಪ್ರಬಂಧವನ್ನು ಡಾ. ಕಲವೀರ ಮನ್ವಾಚಾರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ.

ದಿನಾಂಕ:

ಶೋಭನಾ ಎಸ್.
ಸಂಶೋಧನಾ ವಿದ್ಯಾರ್ಥಿ
ಶಾಸನ ಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

## ಮಾರ್ಗದರ್ಶಕರ ದೃಡೀಕರಣ ಪತ್ರ

'ಶಾಸನಗಳಲ್ಲಿ ಸ್ತ್ರೀ ಪ್ರತಿನಿಧಿಕರಣ' ಎಂಬ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಮಹಾಪ್ರಬಂಧವನ್ನು ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ ಶೋಭನಾ ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಡೀಕಸಿದ್ದೇನೆ.

ಸ್ಥಳ : ವಿದ್ಯಾರಣ್ಯ.

ದಿನಾಂಕ:

ಡಾ. ಕಲವೀರ ಮನ್ವಾಚಾರ
ಮಾರ್ಗದರ್ಶಕರು
ಶಾಸನ ಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

**ಪರಿವಿಡಿ** ಪುಟ ಸಂಖ್ಯೆ

# ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ ಹಾಗೂ ಸ್ವರೂಪ

**ಪೀಠಿಕೆ**

ಭಾರತೀಯ ಪರಂಪರೆಯಲ್ಲಿ ಸ್ತ್ರೀಯರಿಗೆ ಪ್ರಾಚೀನ ಕಾಲದಿಂದಲೂ ವಿಶೇಷವಾದ ಗೌರವವಿದೆ. ಆ ಗೌರವ ಅವಳು ಪಡೆದದ್ದಲ್ಲ ಅವಳಿಗೆ ಹುಟ್ಟಿನೊಂದಿಗೆ ಬಂದದ್ದು. ಯಾಕೆಂದರೆ ಅವಳು ತನ್ನಲ್ಲಿ ಅಂಥ ಶಕ್ತಿಯನ್ನು ಪಡೆದೆ ಜನಿಸಿದ್ದಾಳೆ. ಇಂದಿಗೂ ಸ್ತ್ರೀ ಅಷ್ಟೇ ಮಾನ್ಯತೆಗೆ ಅರ್ಹಳೆಂದರೆ ಅವಳಲ್ಲಿರುವ ಆ ಶಕ್ತಿಯೆ ಕಾರಣ. ಅವಳು ಸೃಷ್ಟಿ ಮೂಲ, ಆ ಕಾರಣಕ್ಕೆ ಅವಳ ಸ್ಥಾನ ಭದ್ರವಾಗಿದೆ. ಸೃಷ್ಟಿ ವಿಕಾಸ ತತ್ವದ ಚರಿತ್ರೆಯ ಸಂಕಥನದಲ್ಲಿ ಸ್ತ್ರೀ ಪ್ರಧಾನ ಸ್ಥಾನ ಹೊಂದಿರುವಳು, ಅಲ್ಲಿ ಅವಳು ಏಕಮೇವ ಅದ್ವಿತೀಯಳು, ಪುರುಷ ಗೌಣ, ಸ್ತ್ರೀ ಪ್ರಧಾನ. ಅವಳ ವ್ಯಕ್ತಿತ್ವ ರಚನೆಯೇ ಹಲವು ಪಾತ್ರಗಳನ್ನು ನಿರ್ವಹಿಸುವಂತೆ ಅಂಶಗಳಿಂದ ಕೂಡಿರುವುದರುವಂತದ್ದು, ಆದ್ದರಿಂದ ಕುಟುಂಬ ಮತ್ತು ಸಮಾಜದಲ್ಲಿ ತನ್ನ ಮೌಲ್ಯವನ್ನು ಯಶಸ್ವಿಯಾಗಿ ಉಳಿಸಿಕೊಂಡು ಬಂದಿರುವುದು. ಅವಳು ಪ್ರಧಾನವಾಗಿದ್ದ ಕಾಲಕ್ಕೂ ಅಷ್ಟೆ, ಅಪ್ರಧಾನವಾದ ಕಾಲದಲ್ಲಿಯೂ ಅಷ್ಟೆ, ಸ್ತ್ರೀ ತನ್ನ ಸ್ತ್ರೀತ್ವದ ಗುಣಗಳಿಂದ ಗೌರವ ಹೊಂದಿದ್ದಾಳೆ.

ನಮ್ಮ ಪ್ರಾಚೀನ ಇತಿಹಾಸ ರಚನೆಯಲ್ಲಿ ಸಾಹಿತ್ಯಕ್ಕಿಂತ ಮೊದಲು ಶಾಸನೋಕ್ತ ಆಧಾರಗಳಿಗೆ ನಾವು ಹೆಚ್ಚಿನ ಆದ್ಯತೆಯನ್ನು ಕೊಟ್ಟಿದ್ದೇವೆ. ಅವುಗಳಿಗಿರುವ ಇತಿಹಾಸ ಕೂಡ ಅಷ್ಟೇ ಪುರಾತನವಾದುದು. ದೊರೆತ ಆಧಾರಗಳಿಂದ ಇತಿಹಾಸ ರಚಿಸಿದ ನಂತರ ನಮ್ಮ ಹಿಂದಿನ ಸಮಾಜದ ಕಲ್ಪನೆ ನಮಗೆ ದೊರೆತಿದೆ. ಆ ಸಮಾಜದಲ್ಲಿದ್ದ ಒಂದೊಂದು ಸಂಗತಿಗಳು ಸಂಶೋಧನೆಗೆ ನಮ್ಮನ್ನು ಒಳಗುಮಾಡುತ್ತವೆ. ಅದರಲ್ಲಿ ಸ್ತ್ರೀಯರ ಬಗ್ಗೆ ಅಧ್ಯಯನ ಮಾಡುವುದು ಒಂದು ಮಹತ್ವದ ಸಂಗತಿಯಾಗಿದೆ. ಪುರುಷ ನಿರ್ಮಿಸಿದ ಈ ಸಮಾಜದಲ್ಲಿ ಅವನೇ ಇರುವನು. ಹಾಗಾಗಿ ಅವನ ಬಗ್ಗೆ ಅಧ್ಯಯನ ಮಾಡುವುದೆಂದರೆ ಇಡೀ ಇತಿಹಾಸವನ್ನು ಮತ್ತೆ ಮತ್ತೆ ಅಧ್ಯಯನ ಮಾಡಿ ಮತ್ತದೇ ಇತಿಹಾಸವನ್ನು ರಚಿಸಿದಂತೆ. ಪುರುಷನನ್ನು ಕುರಿತು ಶಾಸನಗಳು ಮಾಹಿತಿಯನ್ನು ದಾಖಲಿಸಿದಂತೆ ಸ್ತ್ರೀಯರನ್ನು ಕುರಿತು ದಾಖಲಿಸಿಲ್ಲ. ದೊರೆತ ಶಾಸನಗಳಲ್ಲಿ ಸ್ತ್ರೀಯರ ಕುರಿತು ಮಾಹಿತಿ ನೀಡುವ ಶಾಸನಗಳು ಪುರುಷನಿಗೆ ಹೋಲಿಸಿಕೊಂಡಾಗ ತುಂಬಾ ವಿರಳ ಮತ್ತು ನಿರ್ಲಕ್ಷಿತರಾಗಿರುವರೆಂದು ಇದರಿಂದ ತಿಳಿದುಬರುತ್ತದೆ. ಇವರ ಬಗ್ಗೆ ಶಾಸನೋಕ್ತವಾಗಿ ದೊರೆವ ಅಲ್ಪ ಮಾಹಿತಿಯನ್ನು ಪ್ರಧಾನವಾಗಿ ಸಾಹಿತ್ಯವನ್ನು ಪೂರಕ ಮಾಹಿತಿಯಾಗಿರಿಸಿಕೊಂಡು ಸ್ತ್ರೀಯರ ಜೀವನ ಅವರು ಬಾಳಿ ಬದುಕಿದ ರೀತಿಯನ್ನು ಪುರುಷ ಪ್ರಧಾನ ಸಮಾಜದಲ್ಲಿ ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಲಾಗಿದೆ.

## ಅಧ್ಯಯನದ ಉದ್ದೇಶ

ಇತಿಹಾಸ ಪುರುಷಮುಖಿಯಾಗಿರುವುದು. ಶಾಸನಗಳ ವಿಚಾರದಲ್ಲಾಗಲೀ, ಸಾಹಿತ್ಯದ ವಿಚಾರದಲ್ಲಾಗಲೀ ಅವಳನ್ನು ಪುರುಷನ ಸಮಾನವಾಗಿರಿಸಿಕೊಂಡು ರಚನೆಯಾಗಿಲ್ಲ. ಸ್ತ್ರೀ ಪುರುಷನಷ್ಟು ಏಕೆ ಪ್ರಾಮುಖ್ಯತೆಯನ್ನು ಪಡೆಯಲಿಲ್ಲ? ಗತಕಾಲದ ಇತಿಹಾಸದಲ್ಲಿ ಅವಳ ಸ್ಥಾನ ಏನು? ಈ ಜಗತ್ತಿನ ಗತಿ ಚಲನೆಯಲ್ಲಿ ಇಬ್ಬರ ಪಾತ್ರವೂ ಮುಖ್ಯವೇ. ಆದರೆ ಸ್ತ್ರೀ ಏಕೆ ಮುಖ್ಯಳಾಗಲಿಲ್ಲ? ಇತಿಹಾಸ ರಚನೆಯಲ್ಲಿ ಪ್ರಧಾನವಾಗಿಲ್ಲದಿರುವುದಕ್ಕೆ ಕಾರಣವೇನು? ಅವಳ ಬದುಕಿನ ಸುತ್ತ ಶಾಸನಗಳು ಅಸ್ಪಷ್ಟ ಮತ್ತು ಅಪೂರ್ಣವಾಗಿರುವುದೇಕೆ? ಈ ರೀತಿ ಹಲವಾರು ಪ್ರಶ್ನೆಗಳು ನಮ್ಮಲ್ಲಿ ಏಳದೆ ಇರವು. ದೊರತಷ್ಟೇ ಮಾಹಿತಿಯನ್ನಿಟ್ಟುಕೊಂಡು ಕೆಳ ಸಮುದಾಯದ ಮತ್ತು ನಿರ್ಲಕ್ಷಿತ ಸ್ತ್ರೀಯರನ್ನು ಕುರಿತು ಅಧ್ಯಯನ ಮಾಡುವುದು ಮತ್ತು ಇಂಥ ಹಲವು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ನನ್ನ ಉದ್ದೇಶವಾಗಿದೆ.

ಶಾಸನೋಕ್ತ ಮಾಹಿತಿಗಳನ್ನಿಟ್ಟುಕೊಂಡು ಸ್ತ್ರೀಯರನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದ್ದರೂ ಪ್ರಾಚೀನ ಕಾಲದ ಮಾತೃಪ್ರಧಾನ ನೆಲೆಯಿಂದ ಸ್ತ್ರೀಯರನ್ನು ಕುರಿತು ಅಧ್ಯಯನವನ್ನು ಆರಂಭಿಸಲಾಗಿದೆ. ಈ ಅಧ್ಯಾಯನದಲ್ಲಿ ಮಾತೃದೇವತಾ ಆರಾಧನೆ ಕುರಿತು ಚರ್ಚಿಸುವ ಉದ್ದೇಶವೇನೆಂದರೆ ನಮಗೆ ದೊರೆತ ಕುರುಹಗಳ ಆಧಾರದ ಮೇಲಿಂದ ಹೇಳುವುದಾದರೆ ಹೆಣ್ಣು ಆರಾಧನೆ, ಆಚರಣೆ, ಮತ್ತು ಅವಳ ಜೀವನದ ನಡುವೆ ತುಂಬಾ ಸಾಮಿಪ್ಯವನ್ನು ಕಾಣುತ್ತೇವೆ. ಅಂದರೆ ಮಾತೃ ಸ್ವರೂಪ ಸೃಷ್ಟಿಕರ್ತ ದೇವತೆಯಂತೆಯೂ ಆಕೆಯ ಪರ್ಯಾಯ ರೂಪವಾಗಿ ಸ್ತ್ರೀ ಬಿಂಬಿತವಾಗಿದ್ದಾಳೆ. ಅದೇ ನಾವು ರಾಜಪ್ರಭುತ್ವದ ಕಾಲಕ್ಕೆ ಬಂದಾಗ ಧರ್ಮ, ಆರಾಧನೆ, ಬದಲಾವಣೇಯ ಸ್ವರೂಪ ಪಡೆದುಕೊಂಡಿತು. ವೈಭವದ ಪುರುಷ ದೈವಗಳ ಆಚರಣೆ ಕಾಣುತ್ತೇವೆ. ಇಲ್ಲಿ ಸ್ತ್ರೀ ದೈವ ಮತ್ತು ಸ್ತ್ರೀ ಜೀವನ ಕೂಡಾ ನಿರ್ಲಕ್ಷಕ್ಕೆ ಒಳಗಾಗಿತು. ಅಂದರೆ ಮಾತೃದೇವತೆಯ ಆರಾಧನೆ ಕಾಲದಲ್ಲಿ ಸ್ತ್ರೀಯರಿಗಿದ್ದ ಸ್ಥಾನಕ್ಕೂ, ರಾಜಪ್ರಭುತ್ವದ ಕಾಲಕ್ಕೆ ಸ್ತ್ರೀಯರಿಗೆ ದೊರೆತ ಸ್ಥಾನದಲ್ಲಿ ವ್ಯತ್ಯಾಸವನ್ನು ಕಾಣುತ್ತೇವೆ. ಇಲ್ಲಿ ಸ್ತ್ರೀಯರ ಸ್ಥಾನದಲ್ಲಿ ಅವನತಿಯನ್ನು ಕಾಣುತ್ತೇವೆ. ಈ ಕಾರಣದಿಂದ ಆರಂಭಿಕ ಕಾಲಘಟ್ಟದ ಸ್ತ್ರೀ ಪ್ರಧಾನವ್ಯಸ್ಥೆಯನ್ನು ಹೇಳುವುದು ನನ್ನ ಉದ್ದೇಶವಾಗಿದೆ.

ಸ್ತ್ರೀ ತಾನು ಪ್ರಧಾನವಾಗಿದ್ದ ಕಾಲದಲ್ಲಿ ವ್ಯವಸ್ಥೆ ಅವಳ ಸುತ್ತ ರಚನೆಯಾಗಿತ್ತು. ಸ್ತ್ರೀ ಯಾಜಮಾನ್ಯವನ್ನು ಸಾಧಿಸಿದ್ದಳು. ಇಂದು ಜಾರಿಯಲ್ಲಿರುವ ಸಾಮಾಜಿಕ ವಲಯದ ಪತ್ರಿಯೊಂದು ಕ್ಷೇತ್ರಗಳು ಅವಳ ಹಿಡಿತದಿಂದ ಪುರುಷನ ಕೈಗೆ ವರ್ಗಾವಣೆಯಾಗಿರುವಂಥವು. ಕೃಷಿ, ಉಪಕಸುಬು, ಪಶುಪಾಲನೆ, ಅವಳ ಸಂಶೋಧನೆಯ ಫಲ, ಸಮಾಜ ನಿರ್ಮಾಣದ ಹಿಂದಿರುವ ಚಿಕ್ಕ ಘಟಕ ಕುಟುಂಬ. ಅವಳು ನೆಲೆ ನಿಂತ ಕಾರಣಕ್ಕೆ ರಚನೆಯಾದಂತಹದು. ಮುಂದೊಂದು ದಿನ ಎಲ್ಲ ಅಧಿಕಾರಗಳು ಪುರುಷನ ಕೈಗೆ ಹಸ್ತಾಂತರವಾಗಿ ಸ್ತ್ರೀ ಅಧೀನವಾದುದನ್ನು ಅಧ್ಯಯನ ಮಾಡುವುದು ಮುಖ್ಯ ಉದ್ದೇಶವಾಗಿದೆ.

ಮಾತೃಪ್ರಧಾನ ವ್ಯವಸ್ಥೆಯ ಕುರುಹುಗಳನ್ನು ನಾವು ಸಿಂದೂ ತೀರದ ನಾಗರಿಕತೆಯಲ್ಲಿ ಸ್ಪಷ್ಟವಾಗಿ ಗುರುತಿಸುತ್ತೇವೆ. ಇಲ್ಲಿ ದೊರೆತಿರುವವು ಅವಶೇಷಗಳೇ ಇರಬಹುದು. ಜನರ ಜೀವನದ ಮಾಹಿತಿಯನ್ನು ನೀಡುವಲ್ಲಿ ಸೋತಿಲ್ಲ. ಅವಶೇಷಗಳನ್ನೇ ಒಂದು ಮಾಹಿತಿಯಂತೆ ಬಳಕೆ ಮಾಡಿಕೊಂಡಿರುವುದರಿಂದ ಈ ನಾಗರಿಕತೆಯಲ್ಲಿ ಸ್ತ್ರೀಯರಿಗೆ ಪ್ರಾಧಾನ್ಯತೆ ಇದ್ದ ಅಂಶಗಳು ಮತ್ತು ಸ್ತ್ರೀ ದೈವಗಳ ಆರಾಧನೆಯ ರೂಪ ನಮ್ಮ ಗಮನಕ್ಕೆ ಬಂದಿರುವುದರಿಂದ ಸಿಂಧೂ ನದಿ ನಾಗರಿಕತೆಯನ್ನು ಅಧ್ಯಯನಕ್ಕೆ ತೆಗೆದುಕೊಂಡಿರುವುದು ಸಕಾರಣವಾಗಿದೆ.

ನಂತರ ಬಂದ ವೈಧಿಕ ಯುಗದಿಂದ ನನ್ನ ಅಧ್ಯಯನ ಹೊರತಾಗಿದೆ. ವೈಧಿಕ ಯುಗ ಮಾತೃಸಂಸ್ಕೃತಿಯಿಂದ ತೀರಾಭಿನ್ನವಾಗಿದ್ದು, ಸಾಹಿತ್ಯಿಕ ಆಧಾರವೇ ಪ್ರಧಾನವಾಗಿರುವ ಕಾರಣಕ್ಕೆ ಅಧ್ಯಯನದಿಂದ ಕೈಬಿಡಲಾಗಿದೆ. ಆದರೂ ಪೂರ್ವವೇದಗಳ ಕಾಲದಲ್ಲಿ ಸ್ತ್ರೀಯರು ಉನ್ನತ ಜೀವಮಟ್ಟ ಹೊಂದಿದ್ದು ನಂತರ ಉತ್ತರ ವೇದಗಳ ಕಾಲದಲ್ಲಿ ಸ್ತ್ರೀಯರ ಸ್ಥಾನಗಳು ಕುಸಿದವು. ಸ್ತ್ರೀ ಮತ್ತು ಸ್ತ್ರೀ ದೈವಗಳ ಸ್ಥಾನ ದ್ವಿತಿಯ ಸ್ಥಾನಕ್ಕೆ ಬಂದವು. ಇಲ್ಲಿ ಸ್ತ್ರೀಯರ ಮೌಲ್ಯಗಳು ಕುಸಿದು ಅವರ ಅಸ್ತಿತ್ವವನ್ನು ಅಲುಗಾಡಿಸುವಂತಹ ಆಚರಣೆಗಳು ಹುಟ್ಟಿಕೊಂಡವು. ಮುಂದೆ ಬಂದ ದ್ರಾವಿಡ ಸಂಸ್ಕೃತಿಯ ಮೇಲೂ ವೈಧಿಕರ ಆಚರಣೆಗಳು ಪ್ರಭಾವ ಬೀರಿದ್ದನ್ನು ಕಾಣಬಹುದು.

ಅಶೋಕ ದಕ್ಷಿಣ ಭಾರತಕ್ಕೆ ಪ್ರವೇಶ ಮಾಡಿದ ಅವಧಿ ಮತ್ತು ಅದಕ್ಕೂ ಪೂರ್ವದಲ್ಲಿ ದಕ್ಷಿಣ ಭಾರತದಲ್ಲಿ ನೆಲೆಸಿದ್ದ ಮಹಿಳೆಯರ ಬಗ್ಗೆ ತಿಳಿದುಕೊಳ್ಳದೇ ಆರಂಭಿಕ ಕಾಲಘಟ್ಟದ ರಾಜಪ್ರಭುತ್ವ ಮತ್ತು ಆ ಕಾಲದಲ್ಲಿ ಬಾಳಿದ ಸ್ತ್ರೀಯರ ಬಗ್ಗೆ ಅಧ್ಯಯನ ಮಾಡಿದರೆ ದಕ್ಷಿಣದ ದ್ರಾವಿಡ ಮಹಿಳೆಯರ ಬಗ್ಗೆ ಪೂರ್ವಜ್ಞಾನವಿಲ್ಲದಂತಾಗುತ್ತದೆ. ಈ ಕಾರಣದಿಂದ ತಮಿಳಿನ ಸಂಗಂ ಸಾಹಿತ್ಯವನ್ನು ತೆಗೆದುಕೊಂಡಿರುವುದಲ್ಲದೇ ಇದಕ್ಕೆ ಅಶೋಕನ ಶಾಸನಗಳು ಪೂರಕ ಆಧಾರವಾಗುವುದರಿಂದ ಸ್ತ್ರೀಯರ ಬದುಕಿನ ರೀತಿ ನೀತಿ ಬಗ್ಗೆ ತಿಳಿದುಕೊಳ್ಳಲು ಸಾಧ್ಯವಾಗಿದೆ. ಇದರಿಂದ ಶಾತವಾಹನದ ಕಾಲದ ಮಹಿಳೆಯರ ಜೀವನಕ್ಕೆ ಪೂರ್ವ ಪೀಠಿಕೆಯನ್ನು ಒದಗಿಸಿದಂತಾಗುತ್ತದೆ. ಈ ಕಾರಣದಿಂದ ಸಂಗಂ ಸಾಹಿತ್ಯವನ್ನು ಅಧ್ಯಯನ ಮಾಡುವುದು ಅವಶ್ಯವಾಗಿದೆ.

ಶಾತವಾಹನರ ಕಾಲದಿಂದ ಗಂಗರ ಆಳ್ವಿಕೆಯ ಅವಧಿಯವರೆಗೂ ಮಹಿಳೆಯರನ್ನು ಕುರಿತಾಗಿ ದೊರೆಯುವ ಶಾಸನಗಳು ವಿರಳ. ಮತ್ತು ಸ್ತ್ರೀಯರನ್ನು ಕುರಿತು ಪ್ರತಿಯೊಂದು ಕ್ಷೇತ್ರಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವುದಕ್ಕಿಂತ ದೊರೆತ ಶಾಸನಗಳನ್ನೇ ಆಧಾರವಾಗಿಟ್ಟುಕೊಂಡು ಮಹಿಳೆಯ ಜೀವನದ ಬಗ್ಗೆ ಒಟ್ಟಾರೆ ಚರ್ಚಿಸಲಾಗಿದೆ.

ನನ್ನ ಅಧ್ಯಯನದ ಪ್ರಮುಖ ಕಾಲ ರಾಷ್ಟ್ರಕೂಟರಿಂದ ಹೊಯ್ಸಳರ ಆಳ್ವಿಕೆಯವರೆಗೆ ಈ ಕಾಲಾವಧಿಯನ್ನು ಆಯ್ಕೆ ಮಾಡಿಕೊಳ್ಳಲು ಪ್ರಮುಖ ಕಾರಣ ಸ್ತ್ರೀಯರು ಸಮಾಜದ

ಪ್ರತಿಯೊಂದು ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅದು ಅವಕಾಶ ದೊರೆತ ಕಾರಣಕ್ಕೋ ಅಥವಾ ಅನಿವಾರ್ಯ ಕಾರಣಕ್ಕೋ, ಸ್ತ್ರೀಯರಿಗೆ ಉನ್ನತ ಸ್ಥಾನಗಳು ದೊರೆತ ವಿಚಾರವನ್ನು ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಕಾಲಾವಧಿಯಲ್ಲಿ ಮಹಿಳೆಯರ ಸಾಮಾಜಿಕ ಸಹಭಾಗಿತ್ವ ಕಂಡುಬಂದಷ್ಟು ಹಿಂದಿನ ಕಾಲಘಟ್ಟದಲ್ಲೂ ಕಂಡುಬರುವುದಿಲ್ಲ ಮತ್ತು ಮುಂದಿನ ಕಾಲದಲ್ಲೂ ಕಾಣಸಿಗುವುದಿಲ್ಲ. ಇದೊಂದು ಉತ್ತುಂಗದ ಹಂತವೆನ್ನಬಹುದು. ನಂತರ ಬಂದ ವಿಜಯನಗರ ಸಾಮ್ರಾಜ್ಯದಲ್ಲಿ ಆಗಲೇ ಸ್ತ್ರೀಯರ ಸ್ಥಾನದಲ್ಲಿ ಅವನತಿಯನ್ನು ಕಾಣುತ್ತೇವೆ. ಹಾಗಾಗಿ ವಿಜಯನಗರ ಕಾಲದ ಸ್ತ್ರೀಯರನ್ನು ಕುರಿತು ಸಂದರ್ಭಕ್ಕೆ ತಕ್ಕಂತೆ ಅಧ್ಯಯನದಲ್ಲಿ ತೆಗೆದುಕೊಳ್ಳಲಾಗಿದೆ. ಸ್ತ್ರೀಯರ ಜೀವನದಲ್ಲಿ ಆರಂಭಿಕ ಹಂತ, ನಂತರ ಉನ್ನತಿ ಮತ್ತು ಅವನತಿಯನ್ನು ಈ ಕಾಲಾವಧಿಯಲ್ಲಿಯೇ ಚರ್ಚಿಸಿದ್ದೇನೆ.

ನನ್ನ ಅಧ್ಯಯನದ ಉದ್ದೇಶ ರಾಜಪ್ರಭುತ್ವದ ಬಗ್ಗೆ ಹೇಳುವುದಲ್ಲ. ರಾಜಪ್ರಭುತ್ವದ ಕಾಲದಲ್ಲಿ ಬಾಳಿದ ಸ್ತ್ರೀಯರ ಬಗ್ಗೆ ಅಧ್ಯಯನ ಮಾಡುವುದಾಗಿದೆ. ಹಾಗಾಗಿ ನಾನು ರಾಜಮನೆತನಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡದೇ ಆಯಾ ಕಾಲಘಟ್ಟದ ಸ್ತ್ರೀಯರನ್ನು ಕುರಿತಾಗಿ ಅಧ್ಯಯನ ಮಾಡಿದ್ದೇನೆ. ಆಯಾ ಕಾಲದಲ್ಲಿ ಸ್ತ್ರೀಯರ ಬದುಕಿಗೆ ಇದ್ದ ಸ್ವಾತಂತ್ರ್ಯ ಸಮಾನತೆ, ಹಕ್ಕುಬಾಧ್ಯತೆ, ಒಟ್ಟಾಗಿ ರಾಜಪ್ರಭುತ್ವದ ಕಾಲಕ್ಕೆ ಪುರುಷ ಪ್ರಧಾನ ಸಮಾಜದಲ್ಲಿ ಅವರ ಸ್ಥಿತಿಗತಿ, ನೀತಿನಿಯಮ ಮತ್ತು ಅವರನ್ನು ಬಾಳಿಸಿದ ರೀತಿ ಮತ್ತು ಅವರು ಹೊಂದಿದ್ದ ಅಸ್ತಿತ್ವವನ್ನು ಕುರಿತು ಚರ್ಚಿಸಲಾಗಿದೆ. ಈ ರೀತಿಯ ಮೌಲ್ಯಗಳನ್ನು ಇಟ್ಟುಕೊಂಡು ಚರ್ಚಿಸುವಾಗ ರಾಣಿಯರು, ಸಾಮಾನ್ಯ ಮಹಿಳೆಯರೆಂದು ಪ್ರತ್ಯೇಕಿಸುವುದಾಗಲೀ ಭಿನ್ನ ದೃಷ್ಟಿಕೋನದಿಂದ ನೋಡುವುದಾಗಲೀ ನನ್ನ ಉದ್ದೇಶವಾಗಿಲ್ಲ. ಹಕ್ಕು ಬಾಧ್ಯತೆಗಳು ಎಲ್ಲರಿಗೂ ಒಂದೇ ಅರಮನೆಯಲ್ಲಿರಲಿ, ಮಹಲ್‌ಗಳಲ್ಲಿರಲೀ, ಸಾಮಾನ್ಯರೇ ಆಗಿರಲೀ ಒಂದಲ್ಲ ಒಂದು ರೀತಿಯಿಂದ ಪುರುಷ ಪ್ರಧಾನ ಸಮಾಜದಲ್ಲಿ ನಿರ್ಲಕ್ಷಿತರು, ವಂಚಿತರು ಮತ್ತು ಸ್ವತಂತ್ರ ರಹಿತರು. ರಾಣಿಯಾಗಿ ಹುಟ್ಟಿ ಸಕಲ ವಿದ್ಯೆ ಪಡೆದು ರಾಜನನ್ನು ವಿವಾಹವಾದರೂ ತಮ್ಮ ಸ್ವಂಥ ಅಸ್ತಿತ್ವವಿಲ್ಲದೇ ರಾಜ ನೇಮಿಸಿದ ಕಾವಲುಗಾರರ ಕಾವಲಿನಲ್ಲಿ ಜೀವಿಸಬೇಕಿತ್ತು. ಸಾಮಾನ್ಯ ಮಹಿಳೆಯಾದರೂ ಶಿಕ್ಷಣ ಸೌಲಭ್ಯವಿಲ್ಲದೇ ಕುಟುಂಬದ ಯಜಮಾನನ ಆಜ್ಞೆಯಂತೆ ಬದುಕು ಸಾಗಿಸಬೇಕಿತ್ತು. ಇಲ್ಲಿ ವಾಸಿಸುವ ಸ್ಥಳ ಬೇರೆಯಾದರೂ ಎದುರಿಸುವ ಸಮಸ್ಯೆ ಮತ್ತು ಸವಾಲುಗಳು ಒಂದೇ ಆಗಿರುತ್ತಿದ್ದವು. ಹಾಗಾಗಿ ನನ್ನ ಅಧ್ಯಯನದಲ್ಲಿ ಎಲ್ಲ ವರ್ಗದ ಮಹಿಳೇಯರ ಬಗ್ಗೆ ಪೂರ್ಣವಾಗಿ ತೆಗೆದುಕೊಂಡಿದ್ದೇನೆಯೇ ಹೊರತು ಮೇಲ್ವರ್ಗ ಕೆಳವರ್ಗದ ಭಿನ್ನ ದೃಷ್ಟಿಕೋನವಿಲ್ಲ. ಹಾಗಾಗಿ ರಾಣಿಯರ ಮತ್ತು ಸಾಮಾನ್ಯ ಮಹಿಳೆಯರ ಆಡಳಿತ ಮತ್ತು ದಾನ ನೀಡಿದ ಕುರಿತಾಗಿ ಪ್ರತ್ಯೇಕವಾಗಿ ಹೇಳಲಾಗಿದೆಯಾದರೂ ನನ್ನ ಅಧ್ಯಯನದ ವಿಧಾನ ಮತ್ತು ಉದ್ದೇಶದ ದೃಷ್ಟಿಯಿಂದ ಎರಡೂ ವರ್ಗದವರಿಗೂ ಆಡಳಿತ ಮತ್ತು ಹಕ್ಕು ಬಾದ್ಯತೆ ವಿಚಾರದಲ್ಲಿ ಇದ್ದ ಸ್ವಾತಂತ್ರ್ಯ ಸೀಮಿತವಾಗಿತ್ತೆಂದು ಆಧಾರ ಸಹಿತ ಹೇಳಿದ್ದೇನೆ.

ಮೇಲ್ವರ್ಗದ ಸ್ತ್ರೀಯರ ಅಧ್ಯಯನ ಎಷ್ಟು ಮುಖ್ಯವೋ ಸಾಮಾನ್ಯ ವರ್ಗದವರ, ಮತ್ತು ಕೆಳವರ್ಗದವರ ಅಧ್ಯಯನವೂ ಅಷ್ಟೇ ಮುಖ್ಯವಾಗಿದೆ. ಒಂದು ಸಮಾಜದ ನಿರ್ಮಾಣ ಅಥವಾ ರಚನೆಯೆಂದರೆ ಅದು ಬರೀ ಮೇಲ್ವರ್ಗದವರಿಂದ ಮಾತ್ರ ಕೂಡಿರುವುದಿಲ್ಲ. ಅಲ್ಲಿರುವುದು ಜನಸಾಮಾನ್ಯರೇ. ಆದರೆ ಅಂಥ ಜನಸಾಮಾನ್ಯರ ಇತಿಹಾಸವನ್ನು ನಾವು ಅಧ್ಯಯನ ಮಾಡಬೇಕೆಂದರೆ ಅವರ ಬಗ್ಗೆ ಶಾಸನಗಳು ನೀಡುವ ಮಾಹಿತಿ ಅಲ್ಪ. ಸ್ತ್ರೀಯರ ಬಗ್ಗೆ ಅಧ್ಯಯನ ಮಾಡಲು ನಮಗೆ ದೊರೆವ ಶಾಸನ ಮಾಹಿತಿ ಎಂದರೆ, ಕೆಳ ವರ್ಗದ ಸ್ತ್ರೀಯರಿಂದ ಸೇವೆಯನ್ನು ಬಯಸಿ ಅದಕ್ಕೆ ಪ್ರತಿಯಾಗಿ ಅವರಿಗೆ ದಾನ ದತ್ತಿಗಳನ್ನು ಕೊಟ್ಟಾಗ ಮತ್ತು ಸತಿ ಹೋದವರು, ಆತ್ಮಬಲಿ, ವೀರಮರಣ ಇಂಥ ವಿಚಾರಗಳನ್ನು ಕುರಿತಾಗಿ ಇರುವ ಶಾಸನಗಳ ದಾಖಲೆಯೇ ಕೆಳ ಸಮುದಾಯಗಳ ಬಗ್ಗೆ ತಿಳಿದುಕೊಳ್ಳಲು ಇರುವ ಒಂದು ಸಣ್ಣ ಅವಕಾಶವಾಗಿದೆ. ಆದರೆ ಅಲ್ಲಿ ದಾಖಲೆಯಾಗಿರುವಂಥವೆಲ್ಲ ಸಕಾರಾತ್ಮಕವಾದ ಮಾಹಿತಿಯನ್ನೇ ನೀಡುತ್ತವೆ. ಶಾಸನಗಳು ಎಲ್ಲೂ ಕೆಳ ಸಮುದಾಯದವರ ಆರ್ಥಿಕ ಸ್ಥಿತಿ ಮತ್ತು ಸಾಮಾಜಿಕ ಸ್ಥಾನಮಾನಗಳ ಬಗ್ಗೆ ಮಾಹಿತಿಯನ್ನು ನೀಡುವುದಿಲ್ಲ. ಅಂಥ ವಿಚಾರಗಳನ್ನು ಅವು ಹೇಳದೇ ಹೋದರೂ ಮೇಲೆ ಉಲ್ಲೇಖಿಸಲಾದ ಶಾಸನಗಳು ಅಪ್ರತ್ಯಕ್ಷವಾಗಿ ನಮಗೆ ಮಾಹಿತಿಯನ್ನು ನೀಡುತ್ತವೆ. ಆದರೆ ನಾವು ಅವುಗಳನ್ನು ವಿಮರ್ಶಾತ್ಮಕ ಅಧ್ಯಯನಕ್ಕೆ ಒಳಪಡಿಸಿದಾಗ ಸಮಾಜದ ಹಲವು ಮುಖಗಳನ್ನು ಕುರಿತು ನಮಗೆ ಮಾಹಿತಿ ದೊರಕದೇ ಇರುವುದಿಲ್ಲ.

ಆರನೇ ವಿಕ್ರಮಾದಿತ್ಯ ಹಲವು ಪತ್ನಿಯರನ್ನು ಹೊಂದಿದ್ದು ಅವರಿಗೆ ಅಧಿಕಾರ ನೀಡುವ ನೆಪದಲ್ಲಿ ಪ್ರತ್ಯೇಕವಾಗಿರುವಂತೆ ನೋಡಿಕೊಂಡಿದ್ದ. ಅಕ್ಕಾದೇವಿಯನ್ನು ಶಾಸನದಲ್ಲಿ ದಾನ, ಧರ್ಮ, ಶೌರ್ಯ, ಧೈರ್ಯ, ರಣಭೈರವಿ,(ಕ.ವಿ.ಶಾ, ಸಂ–೯, ಹುನಗುಂದ, ೧೬)ಎಂದು ಹೇಳಲಾಗಿದ್ದರೂ ರಾಜರಂತೆ ಪರಮಾಧಿಕಾರ ಹೊಂದಿರಲಿಲ್ಲ. ಆಕೆ ಯುದ್ಧ ಮಾಡಿದ ವಿವರಣೆಗಳಾಗಲೀ, ಆಡಳಿತ ನಡೆಸಿದ ರೀತಿಯನ್ನು ಕುರಿತಾಗಲೀ, ಯಾವುದೇ ಮಾಹಿತಿ ದೊರೆಯುವುದಿಲ್ಲ. ಹೀಗೆ ಅಧಿಕಾರಗಳು ಸೀಮಿತವಾಗಿದ್ದವು. ಸಾಮಾನ್ಯ ಮಹಿಳೆಯಾದರೆ ಪತಿ ಮರಣದ ನಂತರ ಅಧಿಕಾರಗಳು ವಂಶಪರಂಪರವಾಗಿ ಮುಂದುವರೆಯುವ ಕಾರಣಕ್ಕೆ ಗಂಡುಮಕ್ಕಳು ಇಲ್ಲದೇ ಇದ್ದಾಗ ಹಸ್ತಾಂತರವಾಗುತ್ತಿದ್ದವು. ಜಕ್ಕಿಯಬ್ಬೆ ಪತಿಯ ಮರಣದ ನಂತರ ಗಂಡು ಮಗು ಇಲ್ಲದ ಕಾರಣಕ್ಕೆ ಅಧಿಕಾರಕ್ಕೆ ಬಂದಿದ್ದಳು. ಅವಳು ಆ ಸಂದರ್ಭದಲ್ಲಿ ನಾಡು ಎದುರಿಸುತ್ತಿದ್ದ ಸಾಲದಂತಹ ಸಮಸ್ಯೆಗಳನ್ನು ಎದುರಿಸಿ ಯಶಸ್ವಿಯಾಗಿ ಆಡಳಿತ ನಡೆಸಿದಳು. ಅಂದರೆ ಹೆಣ್ಣಿಗೆ ಯಾವುದೇ ಪೂರ್ವ ತರಬೇತಿ ಇಲ್ಲದೇ ಆಡಳಿತ ನಡೆಸುವಂತ ಸಾಮರ್ಥ್ಯ ಹೊಂದಿದ್ದಾಗ್ಯೂ ಅಧಿಕಾರಗಳು ಸಹಜವಾಗಿ ಹಸ್ತಾಂತರವಾಗುತ್ತಿರಲಿಲ್ಲ ಎಂಬುದು ಇಲ್ಲಿ ತಿಳಿದುಬರುತ್ತದೆ. ಕೆಲವೊಮೆ ಅಧಿಕಾರಗಳನ್ನು ಸಹಜವಾಗಿ ಕೊಟ್ಟಿದ್ದರೂ ಅವರ ಮೇಲೆ ನಿಯಂತ್ರಣವನ್ನು ಹೊಂದುವುದಕ್ಕಾಗಿ ಬಲಿಷ್ಠ ಅಧಿಕಾರಿಗಳನ್ನು ನೇಮಕ ಮಾಡುತ್ತಿದ್ದರು.

ಅಕ್ಕಾದೇವಿಗೆ ಅಜ್ಜರ ಭೂಮಿ ನಾಗದೇವಯ್ಯ ಎಂಬ ಅಧಿಕಾರಿಗಳಿದ್ದರು(SII.XI, 91). ಭಾಗಲಮಹಾದೇವಿಗೆ ಮಾಂಡಳಿಕ ಮಾರ್ತಾಂಡಯ್ಯ ಸೇನಬೋವನಿದ್ದ(SII. XI, 206). ಹೀಗೆ ಉನ್ನತ ಸ್ಥಾನಗಳನ್ನು ಕೊಟ್ಟಾಗಲೂ ಅವರ ಮೇಲೆ ಹಿಡಿತ ಹೊಂದಿದ್ದರು.

ಸ್ತ್ರೀಯರು ನೀಡುವ ದಾನದತ್ತಿ ವಿಚಾರದಲ್ಲೂ ಅಷ್ಟೇ ಆರ್ಥಿಕ ಸ್ವಾತಂತ್ರ್ಯವಿತ್ತೆಂಬಂತೆ ಅವರೇ ದಾನದತ್ತಿಗಳನ್ನು ನೀಡುತ್ತಿದ್ದರು ಎಂಬಂತೆ ಉಲ್ಲೇಖಿಸುತ್ತವೆಯಾದರೂ ಪುರುಷನ ಯಜಮಾನಿಕೆಯಲ್ಲಿ ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯ ಅಸಾಧ್ಯವಾದ ಮಾತು. ದಾನ ನೀಡುವುದಕ್ಕೆ ಯಜಮಾನನ ಒಪ್ಪಿಗೆ ಬೇಕಿತ್ತು. ದಾನ ನೀಡಲು ಅವರಿಗೆ ತಮ್ಮದೇ ಆದ ಖಾಸಗೀ ಆಸ್ತಿಯ ಒಡೆತನವಾಗಲೀ, ತಂದೆ ಮತ್ತು ಗಂಡನ ಕಡೆಯಿಂದ ಆಸ್ತಿಯ ಹಕ್ಕಾಗಲೀ, ಇರದೇ ಇರುವುದರಿಂದ ದಾನದ ಒಡೆತನ ಸ್ತ್ರೀಯರದ್ದಾಗಲು ಹೇಗೆ ಸಾಧ್ಯ. ಲಕ್ಷ್ಮೀದೇವಿ ಭಿನ್ನವಿಸಿಕೊಂಡಾಗ ಆಕೆಯ ಬಿನ್ನಪದ ಮೇರೆಗೆ ಜಗದೇಕ ಮಲ್ಲನ ಒಪ್ಪಿಗೆಯಂತೆ ಅಜ್ಜಡಿಯ ಸಹದೇವೇಶ್ವರ ದೇವರಿಗೆ ಶ್ರೀಕಂಠಭಟ್ಟಾರಕರಿಗೆ ಪೂರ್ವವೃತ್ತಿ ಬಿಡುತ್ತಾಳೆ.(SII. XVIII 50). ರಾಣಿಯಾಗಿರಲೀ, ಸಾಮಾನ್ಯ ಮಹಿಳೆಯಾಗಿರಲೀ, ಸ್ವಾತಂತ್ರದ ವಿಚಾರದಲ್ಲಿ ಒಂದೇ ಆಗಿದ್ದರು.

ವಿಮರ್ಶಾತ್ಮಕ ದೃಷ್ಟಿಕೋನವನ್ನಿಟ್ಟುಕೊಂಡು ಶಾಸನಗಳನ್ನು ಅಧ್ಯಯನ ಮಾಡಲಾಗಿದೆ. ಉದಾಹರಣೆಗೆ, ಹನ್ನೆರಡನೇ ಶತಮಾನದ ಬಾಗಳಿ ಶಾಸನದಲ್ಲಿ ಮಾಹಿತಿ ಹೀಗಿದೆ. ಬಾಳ್ಗುಳಿಯ ೫೦ ಮಹಾಜನರ ಮತ್ತು ಹೆಗ್ಗಡೆ ಮಲ್ಲಯ್ಯ, ಗೋಪಯ್ಯನ ಸಮ್ಮುಖದಲ್ಲಿ ಅಂಗಡಿ ಕಾಳಯ್ಯ ಎಂಬುವನು ತನ್ನ ಮಗಳು ಜಾತಿ ಸಂಕರವಾದಾಗ ಕಲಿದೇವರಿಗೆ ದಂಡವಾಗಿ ಭೂದಾನ ನೀಡುತ್ತಾನೆ.(ಕನ್ನಡ ವಿ. ವಿ. ಶಾ. ಸಂಪುಟ–೧, ಹರಪನಹಳ್ಳಿ, ೧೩೫). ಮೇಲ್ನೋಟಕ್ಕೆ ಈ ಶಾಸನ ಮಾಹಿತಿ ಸಾಮಾಜಿಕ ಮುಖಂಡರು ಸಮಾಜದಲ್ಲಿ ನೈತಿಕ ಸ್ವಾಸ್ಥ್ಯವನ್ನು ಕಾಪಾಡುವುದಕೋಸ್ಕರ ಇಂಥ ನಿಯಮವನ್ನು ಮಾಡಿದರು ಎಂದೆನಿಸಿದರೂ ಅಲ್ಲಿ ಹೆಣ್ಣು ಜಾತಿ ಕೆಟ್ಟಿರುವುದು ಯಾರಿಂದ ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಅವಳ ಜಾತಿ ಕೆಡುವುದಕ್ಕೆ ಕಾರಣವಾದ ಗಂಡಿಗೆ ಯಾವ ದಂಡವನ್ನು ವಿಧಿಸದೆ ಹೆಣ್ಣಿಗೆ ಮಾತ್ರ ವಿಧಿಸಿದ್ದು ಎಷ್ಟು ಸರಿ? ಅಂದರೆ ತಪ್ಪು ಯಾರೇ ಮಾಡಿದರೂ ಶಿಕ್ಷೆ ಅನುಭವಿಸುವುದು ಹೆಣ್ಣೇ ಆಗಿರುತ್ತಾಳೆ. ಗಂಡು ಏನು ಮಾಡಿದರೂ ಮಾನ್ಯನಾಗಿದ್ದನು. ಸಮಾಜದಲ್ಲಿ ಹೀಗೆ ಬಹಿರಂಗವಾಗಿ ಅವಳಿಗೆ ಶಿಕ್ಷೆ ವಿಧಿಸುವುದರಿಂದ ಅವಳ ವೈಯಕ್ತಿಕ ಬದುಕು ಸಮಾಜದಲ್ಲಿ ಮಾನ್ಯವಾಗುವುದಿಲ್ಲ. ಈ ನಿಯಮ ಅಂದು ಆ ಸಮಾಜದಲ್ಲಿ ಪ್ರಸ್ತುತವಾಗಿತ್ತೆಂದರೆ ಅದಕ್ಕೆ ಎಂದೋ ಧರ್ಮ ಸೂತ್ರಗಳು ಮಾನ್ಯತೆ ನೀಡಿರುವುದು ಮೂಲ ಕಾರಣವಾಗಿದೆ. ಸ್ತ್ರೀ ನೈತಿಕ ಚೌಕಟ್ಟನ್ನು ಮೀರುವುದು ಅಪರಾಧವಾದರೆ, ಪುರುಷನಿಗೆ ಅದು ಸಾಮಾನ್ಯ ವಿಚಾರವಾಗಿತ್ತು. ಇಂಥ ಅಸಮಾನತೆ ವಿಚಾರಗಳನ್ನಿಟ್ಟುಕೊಂಡು ಅಧ್ಯಯನ ಮಾಡುವುದು ಪ್ರಮುಖ ಉದ್ದೇಶವಾಗಿದೆ.

ದೇವಾಲಯಗಳು ಈ ಕಾಲಾವಧಿಯಲ್ಲಿ ಸಮಾಜದ ಕೇಂದ್ರ ಬಿಂದುವಾಗಿದ್ದವು. ಶಿಕ್ಷಣ, ದಾನ, ಧರ್ಮ, ದಂಡ, ಹಣಕಾಸು ಇಂಥ ಹಲವಾರು ಚಟುವಟಿಕೆಗಳನ್ನು ಒಳಗೊಂಡಿದ್ದವು. ಅದರಲ್ಲಿ ರಂಗಭೋಗ ಮತ್ತು ದೇವಾಲಯದ ಸೂಳೆಯರು ಎಂದು ಹೇಳುವ ಕೆಳವರ್ಗದ ಸ್ತ್ರೀ ಸಮುದಾಯವು ಒಂದಿತ್ತು ಎಂಬುದನ್ನು ಶಾಸನಗಳೇ ಹೇಳುತ್ತವೆ. ದೇವಾಲಯಗಳಲ್ಲಿ ಸೇವೆಯ ಹೆಸರಿನಲ್ಲಿ ಇಂಥ ಕೆಳವರ್ಗದ ಸ್ತ್ರೀಯರನ್ನೇ ಏಕೆ ಬಳಕೆ ಮಾಡಿಕೊಳ್ಳುತ್ತಿದ್ದರು? ಬಾಹ್ಯವಾಗಿ ದೇವಾಲಯದಲ್ಲಿ ದೇವರ ಪ್ರೀತ್ಯರ್ಥವಾಗಿ ಎಂದು ಹೇಳುವ ನೃತ್ಯ ಸೇವೆಯ ಹಿಂದೆ ಬಯಸುವ ಸ್ವಾರ್ಥಗಳು ಏನಿದ್ದವು? ಶಾಸನಗಳು ಈ ವಿಷಯದಲ್ಲಿ ಮಾಹಿತಿ ನೀಡುವಾಗ ಒಂದು ಸಾಲಿನಲ್ಲಿ ದೇವರ ರಂಗಭೋಗಕ್ಕೆ, ಪಾತ್ರಪಾವುಳಕ್ಕೆ ನೀಡಿದ ದಾನ ಎಂದು ಉಲ್ಲೇಖಿಸುತ್ತವೆ. ಆದರೆ ಆ ಪಾತರದವರೆಂದರೆ ಯಾರು? ಅವರು ದೇವಾಲಯದಲ್ಲಿ ಯಾವ ನಿಯಮಗಳಿಗೆ ಕಟ್ಟುಬಿದ್ದು ಎಂಥ ಕಾರ್ಯಗಳನ್ನು ನಡೆಸಿಕೊಡಬೇಕಿತ್ತು? ಅವರ ಹಿನ್ನೆಲೆ ಏನು? ಮೇಲ್ವರ್ಗದವರ ಆಜ್ಞೆ ಪಾಲನೆಗೆ ಅನಿವಾರ್ಯವಾಗಿರುವ ಅವರ ದೌರ್ಬಲ್ಯವೇನು? ದೇವರ ಸೇವೆಯ ಹೆಸರಲ್ಲಿ ಅವರನ್ನು ಬಳಕೆ ಮಾಡಿಕೊಂಡು, ತಾವೇ ಅವರ ವೈಯಕ್ತಿಕ ಬದುಕನ್ನು ಕಿತ್ತುಕೊಂಡು, ತಾವೇ ಸಮಾಜದಲ್ಲಿ ಅವರನ್ನು ಕೀಳು ಮನೋಭಾವದಿಂದ ಗುರುತಿಸಿದ್ದು ಏಕೆ? ತಮ್ಮದು ಸ್ವಾಸ್ಥ್ಯ ಸಮಾಜ, ಅವರು ನೈತಿಕವಾಗಿ ಸ್ವಾಸ್ಥ್ಯರಲ್ಲವೆಂದು ದೂರವಿರಿಸಿದ ರೀತಿ ಹೇಗಿತ್ತು ಎಂಬುದನ್ನು ಅಧ್ಯಯನ ಮಾಡುವುದು ಮುಖ್ಯವಾಗಿದೆ.

ಪುರುಷರು ತಮ್ಮ ಸ್ವೇಚ್ಛಾಚಾರಕ್ಕೆ ಕೆಳವರ್ಗದ ಸ್ತ್ರೀ ಸಮುದಾಯವನ್ನೇ ಆಯ್ಕೆ ಮಾಡಿಕೊಂಡಿತು. ತಮ್ಮ ಸಮುದಾಯಕ್ಕೆ ಸೇರಿದ ಸ್ತ್ರೀಯರಿಗೆ ಕೌಟುಂಬಿಕ ಗೌರವದ ಹೆಸರಿನಲ್ಲಿ ಬಂಧನದಲ್ಲಿರಿಸಿ, ಕೆಳವರ್ಗದವರನ್ನು ಗೌರವ, ಆದರ್ಶಗಳ ಆಚೆ ನಿಂತು ನೋಡುವ ಕೊಳಕು ಭಾವನೆಗಳಿಂದ ತಮ್ಮ ಸ್ವಾರ್ಥಕ್ಕೆ ಬಳಕೆ ಮಾಡಿಕೊಂಡರು. ಧರ್ಮ ಸೂತ್ರಗಳೆನಿಸಿಕೊಂಡಂಥವೇ ಅವರಿಗೆ ಅಂಥ ಕೃತ್ಯಕ್ಕೆ ಒಪ್ಪಿಗೆ ಕೊಟ್ಟಿವೆ. 'ಎಂಥ ಅನಿವಾರ್ಯ ಸಂದರ್ಭದಲ್ಲೂ ಬ್ರಾಹ್ಮಣ ಹಾಗು ಕ್ಷತ್ರಿಯ ವರಗಳು ಶೂದ್ರ ಸ್ತ್ರೀಯನ್ನು ಪ್ರಥಮ ಹೆಂಡತಿ ಎಂದು ವಿವಾಹ ಮಾಡಿಕೊಳ್ಳಬಾರದು'(ಶೇಷ ನವರತ್ನ; ಮನುಸ್ಮೃತಿ, ಅಧ್ಯಾಯ-೩, ಪುಟ ೮೨). ಕೆಳವರ್ಗದವರ ಶೋಷಣೆಗೆ ನಮ್ಮ ಧರ್ಮಗ್ರಂಥಗಳು ಹೀಗೆ ಪುಷ್ಟಿ ಕೊಟ್ಟಿವೆ. ಅದರಿಂದಲೇ ಮುಂದಿನ ಶತಮಾನಗಳಲ್ಲಿ ಕೆಳವರ್ಗದ ಸ್ತ್ರೀಯರನ್ನು ವಿವಾಹಬಾಹಿರವಾಗಿ, ಅವರ ಜೊತೆ ಸಂಬಂಧವನ್ನು ಹೊಂದುವುದಕ್ಕೆ ಪುರುಷರನ್ನು ಪ್ರೋತ್ಸಾಹಿಸಿವೆ. ಇದು ಕೆಳ ಸಮುದಾಯದ ಹೆಣ್ಣುಮಕ್ಕಳ ವೈಯಕ್ತಿಕ ಬದುಕಿಗೆ ಕೊಟ್ಟ ದೊಡ್ಡ ಪೆಟ್ಟು. ಆದರೆ ಅದು ಬಾಹ್ಯನೋಟಕ್ಕೆ ಅಸಮ್ಮತವೆನಿಸದಂತೆ ಧಾರ್ಮಿಕ ನಂಬಿಕೆಗಳ ನೆಪದಲ್ಲಿ ಪುರುಷಸಮಾಜ ಆಯ್ಕೆ ಮಾಡಿಕೊಂಡದ್ದು ಎಲ್ಲರೂ ನಂಬಲರ್ಹವಾದಂತಹ ಸ್ಥಳವನ್ನು. ಅದು (ದೇವಾಲಯ) ಮೇಲ್ವರ್ಗದವರಿಗೆ ಸ್ವಾಗತಾರ್ಹವಾಗಿದ್ದರೆ, ಕೆಳಸಮುದಾಯಕ್ಕೆ ನಿಷೇಧಿಸಲಾಗಿತ್ತು. ಅಲ್ಲಿ

ಸ್ತ್ರೀಯರನ್ನು ದೇವರ ಹೆಸರಿನಲ್ಲಿ ಹೇಗೆ ಬಳಕೆ ಮಾಡಿಕೊಂಡಿತು? ಅದರ ಹಿಂದಿರುವ ಮೂಲ ಉದ್ದೇಶವೇನಾಗಿತ್ತು ಎಂಬುದನ್ನು ಅಧ್ಯಯನ ಮಾಡುವುದು ಮುಖ್ಯ ಉದ್ದೇಶವಾಗಿದೆ.

ಶಾಸನಗಳು ನೀಡುವ ವರದಿಯು ಮೇಲ್ನೋಟಕ್ಕೆ ಸಕಾರಾತ್ಮಕವಾಗಿಯೇ ಇದೆ ಎಂದೆನಿಸಿದರೂ ಪುರುಷಪ್ರಧಾನ ಸಮಾಜದಲ್ಲಿ ಸ್ತ್ರೀಯರ ಮೇಲೆ ಅವು ಬೀರಿದ ಪರಿಣಾಮ ಎಂತಹ ವೈರುಧ್ಯವನ್ನುಂಟುಮಾಡಿವೆ ಎಂಬುದು ಮುಖ್ಯವಾಗುತ್ತದೆ. ಸಮಾಜದಲ್ಲಿ ಜಾರಿಯಲ್ಲಿದ್ದ ಯಾವುದೇ ಕ್ಷೇತ್ರ ತೆಗೆದುಕೊಂಡರೂ ಶಾಸನಗಳು ಸ್ತ್ರೀಯರನ್ನು ಪ್ರಧಾನಪಾತ್ರ ವಹಿಸಿದ್ದಳೆಂದೇ ಉಲ್ಲೇಖಿಸುತ್ತವೆ. ನಿಜವಾಗಿಯೂ ಅವಳು ಪ್ರಧಾನಳಾಗಿದ್ದಳೆ? ಎಂಬುದು ಪ್ರಮುಖವಾಗಿ ಎತ್ತುವ ಪ್ರಶ್ನೆಯಾಗಿದೇ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ಪ್ರಧಾನ ನೆಲೆಗಳೆಲ್ಲ ಪುರುಷನ ಹಿಡಿತದಲ್ಲಿರುವಾಗ ಅವಳು ಹೇಗೆ ಪ್ರಧಾನಳಾಗಲು ಸಾಧ್ಯ ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಧರ್ಮದ ವಿಷಯದಲ್ಲಿ ಅವಳು ಶೂದ್ರಳು ದಾನ ಮಾಡಬೇಕಾದರೂ ಗಂಡಸಿನ ಒಪ್ಪಿಗೆಯ ಅವಶ್ಯಕತೆ ಇತ್ತು. ಸ್ತ್ರೀಯರು ನೀಡುವ ದಾನದ ಸಂಪತ್ತಿನ ಒಡತಿ ತಾನೇ ಆಗಿದ್ದಳೆ ಅಥವಾ ದಾನದ ಹಿಂದೆ ಇರುವುದು ಪುರುಷನ ಒಡೆತನವೇ? ದಾನ ಧರ್ಮ ಮಾಡುತ್ತಿದ್ದಳೆಂದರೆ ಆರ್ಥಿಕ ಸ್ವಾತಂತ್ರ್ಯ ಬಹಳ ಮುಖ್ಯವಾಗುತ್ತದೆ. ಆರ್ಥಿಕ ಒಡೆತನವಿತ್ತೇ? ಎಂದು ಇಲ್ಲಿ ಏಳುವ ಮುಖ್ಯ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವುದಾಗಿದೆ.

ಕುಟುಂಬ ಮತ್ತು ಸಮಾಜ ಎರಡೂ ಕಡೆಯಿಂದ ಸ್ತ್ರೀ ನಿರ್ಬಂಧಿತಳಾಗಿರುವುದರಿಂದ, ಕುಟುಂಬದಲ್ಲಿ ಸಂಪ್ರದಾಯದ ಹೆಸರಿನಲ್ಲಿ ಬಂಧಿಸಿಟ್ಟರೆ, ಬೌಧಿಕ ನೆಲೆಯಲ್ಲಿ ತನ್ನನ್ನು ಗುರುತಿಸಿಕೊಂಡ ಪುರುಷ, ಸಮಾಜದ ಸಹಭಾಗಿತ್ವಕ್ಕೆ ಬೌದ್ಧಿಕ ನೆಲೆಯ ಅಗತ್ಯವನ್ನು ಒತ್ತಿ ಹೇಳುವ ಮೂಲಕ ಸ್ತ್ರೀಯನ್ನು ಭಾವನಾತ್ಮಕ ನೆಲೆಯಲ್ಲಿ ಗುರುತಿಸಿ ಸಾಮಾಜಿಕ ಕ್ಷೇತ್ರದಿಂದ ದೂರವೇ ಇರುವಂತೆ ಮಾಡಿದ. ಸಮಾಜದಲ್ಲಿ ಜಾರಿಯಲ್ಲಿದ್ದ ಪದ್ಧತಿಗಳೆಲ್ಲವೂ ದೇವರು ಮಾಡಿದ ನಿಯಮಗಳೇ ಎಂದು ಭಾವಿಸಿದಳು. ಪತಿಯೇ ಪರದೈವ, ಪತಿವ್ರತೆ, ಮುತ್ತೈದೆತನ, ಇಂಥ ವಿಚಾರಗಳನ್ನು ಹೆಣ್ಣಿನ ವಿಚಾರ ಶಕ್ತಿ ಆರಂಭದೊಂದಿಗೆ ಅವಳ ಮನಸ್ಸಿನಲ್ಲಿ ಸಮಾಜದ ಮೂಲಕ ಪ್ರವೇಶ ಪಡೆದವು. ಅವಳನ್ನು ತನ್ನ ಸಾವಿನ ಜೊತೆ ಜೀವಂತವಿರುವಾಗಲೇ ಚಿತೆ ಏರುವಂತೆ ಮಾಡಿದ್ದರ ಹಿಂದಿರುವ ಪುರುಷಸಮಾಜದ ಸ್ವಾರ್ಥಗಳು ಏನಿದ್ದವು? ಪತಿಯ ಮರಣದ ನಂತರ ಸತಿಗೆ ಜೀವಿಸುವ ಹಕ್ಕನ್ನು ಏಕೆ ಕಿತ್ತು ಕೊಳ್ಳಲಾಯಿತು? ಅವಳನ್ನು ಚಿತೆ ಏರುವಂತೆ ಮಾಡಲು ಪುರುಷ ಕಲ್ಪಿಸಿದ ಧಾರ್ಮಿಕ ನಂಬಿಕೆಗಳು ಯಾವುವು? ಅವುಗಳನ್ನು ನಂಬಲು ಅವನು ಅನುಸರಿಸಿದ ಮಾರ್ಗಗಳು ಹೇಗಿದ್ದವು? ಇವೆಲ್ಲ ಪ್ರಮುಖ ವಿಷಯಗಳಾಗಿವೆ. ಸತಿ ಹೋದವರ ವಿಷಯದಲ್ಲಿ ಶಾಸನಗಳ ಉಲ್ಲೇಖ ಹೊಗಳಿಕೆಯ ರೀತಿಯಲ್ಲಿವೆ. ಅದೇ ನಮ್ಮ ಸಂಪ್ರದಾಯವೆಂದು ಆ ಕಾಲದ ಸಮಾಜ ಅದನ್ನು ಹೆಗ್ಗಳಿಕೆಯಿಂದಲೇ ಸ್ವೀಕರಿಸಿತ್ತು. ಇವೆಲ್ಲವುಗಳ ಹಿಂದಿರುವುದು ಪುರುಷನ ಹಿಡಿತವೇ ಆದರೂ ಅದು ಎಲ್ಲೂ ಬೆಳಕಿಗೆ ಬಂದಿಲ್ಲ. ತನ್ನ ಮರಣದ ನಂತರವೂ ಅವಳು ಪುರುಷನ ಹಿಡಿತದಿಂದ ಹೊರ ಬರಬಾರದೆಂಬ

ಸ್ವಾರ್ಥವಿದೆ ಎಂದೆನಿಸದೆ ಇರದು. ಪತಿ ಜೀವಿಸಿದ್ದಾಗ ಅವನ ಹಿಡಿತದಲ್ಲೇ ಇರುತ್ತಾಳೆ. ಅವನ ಮರಣದ ನಂತರವೂ ಹಾಗೇ ಮುಂದುವರಿಯ ಬೇಕೆಂದರೆ ಸತಿ ಹೋಗುವುದೇ ಸರಿ ಎಂದು ಇಂಥ ಪದ್ಧತಿಗಳು ಜಾರಿಗೆ ಬಂದವು.

ಶಾಸನಗಳು ಸ್ತ್ರೀಯರ ಬಗ್ಗೆ ಉಲ್ಲೇಖಿಸುವಾಗ ಅವಳು ಇತಿಹಾಸದಲ್ಲಿ ಪ್ರಾಧಾನ್ಯತೆಯನ್ನು ಹೊಂದಿದ್ದಳೆಂದೇ ವರದಿ ನೀಡುತ್ತವೆ. ಆ ಮೂಲಕ ಪ್ರಾಚೀನ ಕಾಲದಲ್ಲಿ ಸ್ತ್ರೀಯರಿಗೆ ಎಲ್ಲ ಕ್ಷೇತ್ರಗಳಲ್ಲಿ ಪ್ರಾತಿನಿಧ್ಯ ಇತ್ತೆಂದು ನಿರ್ಣಯಕ್ಕೆ ಬರಲಾಗುತ್ತದೆ. ಆದರೆ ಅವು ಮತ್ತಿನ್ನೇನೋ ಸತ್ಯವನ್ನು ಬಚ್ಚಿಟ್ಟುಕೊಂಡಿರುವುದು ತಿಳಿದುಬರುತ್ತದೆ. ಆದರೆ ಶಾಸನಗಳಲ್ಲಿ ಇದು ಅನಾವರಣಗೊಂಡಿಲ್ಲ. ಸ್ತ್ರೀಯರನ್ನು ಕುರಿತು ಶಾಸನಗಳು ಮಾಹಿತಿಯನ್ನು ಉಲ್ಲೇಖಿಸುವಾಗಲೂ ಪುರುಷನದೇ ಪಾರುಪತ್ಯದ ನೆಲೆಯಲ್ಲಿ ಮಾಹಿತಿ ಒದಗಿಸಿರುವುದು. ಆದರೆ ಆ ಕುರಿತು ಉಲ್ಲೇಖಿಸುವಾಗ ಎಲ್ಲೂ ಆಭಾಸವಾಗಿಲ್ಲ ಮತ್ತು ವಿರೋಧಿಭಾವ ಸ್ತ್ರೀಯರ ಮನಸ್ಸಿನಲ್ಲಿ ತಲೆ ಎತ್ತದಂತೆ ದಾಖಲಾಗಿದೆ. ಇಲ್ಲಿ ರಾಚನಿಕರೆಲ್ಲರೂ ಪುರುಷರೆ. ಏನೇ ಹೇಳಬೇಕಾದರೂ ಮತ್ತು ತಾವು ಮಾಡುವ ಕಾನೂನು ಮುಂದಿನ ತಲೆಮಾರಿಗೆ ವರ್ಗಾಯಿಸಬೇಕಾದುದರಿಂದ ಎಲ್ಲೂ ತಮ್ಮ ಹಿತಾಸಕ್ತಿಗೆ ಧಕ್ಕೆ ಬಾರದಂತೆ ನೋಡಿಕೊಂಡಿರುತ್ತಾರೆ.

### ೧. ೨. ವಿಧಾನ

ಹತ್ತರಿಂದ ಹದಿನೈದನೇ ಶತಮಾನದ ಶಾಸನಗಳಲ್ಲಿ ಸ್ತ್ರೀಯರನ್ನು ಕುರಿತಾದ ಅಧ್ಯಯನ ವಿಧಾನವೆಂದರೆ, ಪುರುಷಪ್ರಧಾನ ಕಾಲಘಟ್ಟದಲ್ಲಿ ನಿಂತು ಮಹಿಳಾಪ್ರಧಾನ ನೆಲೆಯಲ್ಲಿ ವಿಮರ್ಶಾತ್ಮಕ ಅಧ್ಯಯನ ಮಾಡುವುದಾಗಿದೆ. ಇದು ಶಾಸನದ ಯಥಾವತ್ ವರದಿ ಒಪ್ಪಿಸುವಿಕೆಯಲ್ಲ. ಶಾಸನೋಕ್ತ ವರದಿಯನ್ನು ವಿವರಣಾತ್ಮಕವಾಗಿ ವಿಮರ್ಶೆಗೊಳಪಡಿಸಿ ಅಧ್ಯಯನ ಮಾಡುವುದಾಗಿದೆ. ಪ್ರಮುಖವಾಗಿ ಮಹಿಳಾ ನೆಲೆಯಲ್ಲೇ ಅಧ್ಯಯನ ಮಾಡುವುದಾಗಿದೆ. ಪ್ರಸ್ತುತ ಕಾಲಘಟ್ಟದಲ್ಲಿ ಅಧ್ಯಯನದ ಶಿಸ್ತು ಬದಲಾಗಿದೆ. ಒಂದು ಶಾಸನವನ್ನು ಕುರಿತು ಹಿಂದಿನವರು ನೋಡುವ ದೃಷ್ಟಿಕೋನ ಅದು ಆ ಕಾಲಕ್ಕೆ ಪ್ರಸ್ತುತವೇ ಸರಿ. ಆದರೆ ಈ ಕಾಲಘಟ್ಟಕ್ಕೆ ತಕ್ಕಂತೆ ಅದನ್ನು ನಾವು ಅರ್ಥೈಯಿಸಿಕೊಂಡಾಗ ಇತಿಹಾಸದಲ್ಲಿ ಮರೆಮಾಚಿದ್ದ ಎಷ್ಟೋ ವಿಷಯಗಳು ಬೆಳಕಿಗೆ ಬರಲು ಸಾಧ್ಯವಾಗುತ್ತದೆ. ನಮ್ಮ ಮುಂದಿನ ದಿನಗಳಲ್ಲಿ ಸಂಭವಿಸಬಹುದಾದ ಎಷ್ಟೋ ತಪ್ಪುಗಳನ್ನು ಸರಿಪಡಿಸಿಕೊಳ್ಳಲು ಅವಕಾಶವಾಗುತ್ತವೆ. ಏಕೆಂದರೆ ಒಂದು ಸಮಾಜ ನಿರಂತರ ಬದಲಾವಣೆಯ ಕ್ರಿಯಾವರ್ತವಾಗಿದೆ. ಅಲ್ಲಿ ಜರುಗಿದ್ದೆಲ್ಲವೂ ಸರಿ ಎಂದು ಒಪ್ಪಿಕೊಳ್ಳುವುದು ಮುಂದಿನ ಆರೋಗ್ಯಕರ ಸಮಾಜ ರಚನೆಗೆ ಪೂರಕವಾಗುವುದಿಲ್ಲ. ಇಂದಿನ ಸಮಾಜದಲ್ಲಿ ಘಟಿಸುವ ಬೇಕು-ಬೇಡಗಳು, ಹಿಂದಿನ(ಇತಿಹಾಸದಲ್ಲಿ) ಸಮಾಜದಲ್ಲಿಯೂ ಘಟಿಸಿವೆ. ಬೇಕೆನಿಸುವ ಒಳಿತನ್ನು ಸ್ವೀಕರಿಸಿ, ಬೇಡವಾದವುಗಳನ್ನು ಧಿಕ್ಕರಿಸಬೇಕೆಂದರೆ, ವಿಮರ್ಶಾತ್ಮಕ ಅಧ್ಯಯನ ಮಾಡಲೇಬೇಕಾಗುತ್ತದೆ. ಸಮಾಜದ ಪ್ರತಿಯೊಂದು

ಕ್ಷೇತ್ರದ ಹಿಂದಿರುವ ಹಿತಾಸಕ್ತಿಗಳ ಕುರಿತಾಗಿ ಅಧ್ಯಯನ ಮಾಡಬೇಕಾಗುತ್ತದೆ. ಅಲ್ಲಿ ಹೆಣ್ಣಿಗೆ ದೊರಕಿಸಿಕೊಡಲಾಗಿರುವ ಸ್ಥಾನ, ಅವರನ್ನು ನೆಡೆಸಿಕೊಂಡ ರೀತಿಯನ್ನು ತಿಳಿದುಕೊಳ್ಳಬೇಕಾಗುತ್ತದೆ. ಇಂದು ಸಮಾಜದಲ್ಲಿ ಜಾರಿಯಲ್ಲಿರುವ ಪದ್ಧತಿಗಳೆಲ್ಲವೂ ಹಿಂದಿನ ಸಮಾಜದ ಕೊಡುಗೆಯಾಗಿದೆ. ಆ ಕೊಡುಗೆಗಳು ನಮ್ಮ ಪ್ರಗತಿಗೆ ಎಷ್ಟು ಪೂರಕ ಎಂಬುದನ್ನು ನಾವು ತಿಳಿದುಕೊಳ್ಳಬೇಕಾದರೆ ಇಂದಿನ ಕಾಲಘಟ್ಟದಲ್ಲಿ ನಿಂತು ಅಧ್ಯಯನ ಮಾಡುವುದು ಮುಖ್ಯವಾಗಿದೆ. ಸ್ತ್ರೀಯರ ವಿಚಾರದಲ್ಲಿ ಯಾವ ಕಾಲಕ್ಕೂ ನಿಯಮಗಳು ಬದಲಾಗಿಲ್ಲ. ಸಮಸ್ಯೆಗಳೂ ಕೂಡ ಅವೇ ಆಗಿವೆ. ಬಲಾತ್ಕಾರ. ಅಪಹರಣ, ಅಧಿಕಾರ ವಂಚನೆ, ಧಾರ್ಮಿಕ ಮಡಿವಂತಿಕೆ ಇಂಥ ಹಲವಾರು ಸಮಸ್ಯೆಗಳು ಹಾಗೆಯೇ ಮುಂದುವರಿಯುತ್ತಿವೆ. ಇವುಗಳ ಮೇಲ್ನೋಟದ ಅಧ್ಯಯನಕ್ಕಿಂತ ಮೂಲ ಕಾರಣವನ್ನು ಹುಡುಕುವುದು ಪ್ರಮುಖವಾಗಿದೆ.

ಹೆಣ್ಣಿನ ಅಸ್ತಿತ್ವ, ಅವಳ ಇರುವಿಕೆಯ ನೆಲೆಯಲ್ಲೇ ಗುರುತಿಸುವುದು ಮುಖ್ಯವಾಗುತ್ತದೆ. ಇತಿಹಾಸದಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಯಾವುದೇ ಕ್ಷೇತ್ರವನ್ನು ತೆಗೆದುಕೊಂಡರೂ ಅವಳು ಅಸಮರ್ಥಳಲ್ಲ. ಆ ಕ್ಷೇತ್ರಗಳಾವೂ ಅವಳಿಗೆ ಅನನುಭವ ಅಥವಾ ಹೊಸಕ್ಷೇತ್ರಗಳಲ್ಲ. ಅವಳಿಗೆ ಕೊಟ್ಟ ಸಣ್ಣ ಪುಟ್ಟ ಅವಕಾಶವನ್ನೇ ಅವಳು ಸಮರ್ಥವಾಗಿ ನಿರ್ವಹಿಸಿರುವಳು. ಆದರೂ ಅವಳಿಗೆ ಅವಕಾಶ ದೊರಕಿಸಿಕೊಟ್ಟಿಲ್ಲ.

ಮಾತೃಪ್ರಧಾನ ವ್ಯವಸ್ಥೆಯಲ್ಲಿ ಈ ಮೇಲೆ ಉಲ್ಲೇಖಿಸಲಾಗಿರುವ ಯಾವ ಕ್ಷೇತ್ರಗಳು ವ್ಯವಸ್ಥಿತವಾಗಿ ಜಾರಿಯಲ್ಲಿರಲಿಲ್ಲ. ಆದರೆ ಅವುಗಳ ಪ್ರಾಥಮಿಕ ಅಥವಾ ಆರಂಭದ ಹಂತ ಅಲ್ಲಿಯೇ ಪ್ರಾರಂಭವಾಗಿದೆ. ಆಗಿಂದಲೇ ಸ್ತ್ರೀಯರು ಅವುಗಳನ್ನು ನಿರ್ವಹಿಸಿದ್ದಲ್ಲದೇ ಮುಂದುವರಿಸಿಕೊಂಡು ಬಂದಿರುವರು. ಆದರೆ ಅವರನ್ನು ಭಾವನಾತ್ಮಕ ವಲಯದಲ್ಲಿ ಗುರುತಿಸಿ ಅಸಮರ್ಥರೆಂದು ಸ್ಥಾನ ವಂಚಿತರನ್ನಾಗಿ ಮಾಡಿದರು. ಸ್ತ್ರೀಯರಿಂದ ಪುರುಷನಿಗೆ ಅಧಿಕಾರ ಹಸ್ತಾಂತರವಾದ ಕಾಲದಿಂದಲೇ ಪುರುಷ ಮೊದಲು ಪ್ರಬಲನಾದದ್ದು ಆರ್ಥಿಕ ಕ್ಷೇತ್ರದಲ್ಲಿ. ಅನಂತರ ಎಲ್ಲ ಕ್ಷೇತ್ರಗಳನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡನು. ಸ್ಥಾನವಂಚಿತಳಾದ ಸ್ತ್ರೀ, ಪುರುಷ ಪ್ರಾಧಾನ್ಯ ವ್ಯವಸ್ಥೆಯಲ್ಲಿಯೇ ಮುಂದುವರಿದುಕೊಂಡು ಬಂದಿದ್ದಾಳೆ.

ಆಡಳಿತ ಮತ್ತು ಅಧಿಕಾರ ವಹಿಸಿಕೊಳ್ಳುವಿಕೆಯಲ್ಲಿ ಸಮಾನತೆ ಇಲ್ಲ. ಮತ್ತು ಸಮಾನಲಿಂಗೀಯ ದೃಷ್ಟಿಕೋನವಿಲ್ಲ. ಅಧಿಕಾರದಂತಹ ವಿಚಾರಗಳು ಬಂದಾಗ ಅವನಷ್ಟೇ ಅವಳು ಬಾಧ್ಯಳು. ಅವಳಿಗೂ ಅವನಷ್ಟೇ ಸಮರ್ಥ್ಯವಿದೆ. ಅವನಿಗೆ ಅಧಿಕಾರಗಳು ಹುಟ್ಟಿನಿಂದ ಕುಟುಂಬದಲ್ಲಿ ಹೇಗೆ ಸಹಜವಾಗಿ ಮುಂದುವರಿಯುತ್ತವೆಯೋ ಹಾಗೆಯೇ ಅವಳಿಗೂ ಸಹಜವಾಗಿ ಹಸ್ತಾಂತರವಾಗಬೇಕು. ಅವಳಿಗೆ ನಿರ್ವಹಣಾ ಸಾಮರ್ಥ್ಯವಿಲ್ಲವೆಂದು ಕಾರಣ ಕೊಡುವುದು ಎಷ್ಟು ಸರಿ? ಅಧಿಕಾರಗಳು ಸಹಜವಾಗಿಯೇ ಹಸ್ತಾಂತರವಾಗಿ, ಅವುಗಳನ್ನು

ಯಶಸ್ವಿಯಾಗಿ ನಿರ್ವಹಿಸಿರುವ ಕಾಲಘಟ್ಟವನ್ನು ಸ್ತ್ರೀ ದಾಟಿ ಬಂದಿರುವಳು. ಅವಳಲ್ಲಿಯೂ ನಿರ್ವಹಣೆ ಮಾಡುವ ವಂಶವಾಹಿನಿ ಮುಂದುವರಿದುಕೊಂಡು ಬಂದಿದೆ. ಅವಳು ಪುರುಷನಿಂದ ಪಡೆದುಕೊಳ್ಳಬೇಕಾದಿಲ್ಲ. ಹಾಗೆ ಅವರು ಅಧಿಕಾರ ನಿರ್ವಹಿಸಿದ್ದಾರೆಂದರೆ, ತಮ್ಮದೇ ಸಾಮರ್ಥ್ಯದಿಂದ. ಮತ್ತು ತಮ್ಮದೇ ಆದ ಕಾರಣಕ್ಕಾಗಿ. ಅವಕಾಶ ದೊರೆತ ಕಾರಣಕ್ಕಲ್ಲ. ಬೇಡಿ ಪಡೆದದ್ದಲ್ಲ. ಆದರೆ ಕುಟುಂಬದಾಚೆ ಸಮಾಜದಲ್ಲಿ ಅವಳ ಪ್ರವೇಶಕ್ಕೆ ಅವಕಾಶ ಕೊಡಲಿಲ್ಲ. ಆಡಳಿತ ಕ್ಷೇತ್ರದಲ್ಲಿ ಮಹಿಳೆಯರು ಎಂದು ನಾವು ಅಧ್ಯಯನ ಮಾಡುವ ಮಹಿಳಾ ಆಡಳಿತಗಾರ್ತಿಯರು ಎಲ್ಲೋ ಬೆರಳೆಣಿಕೆಯಷ್ಟೆ. ಪುರುಷರಂತೆ ಸಾರ್ವತ್ರಿಕವಾಗಿ ಅಲ್ಲ. ಆದರೆ ಇತಿಹಾಸದಲ್ಲಿ ಹೇಳುವುದು ಮಾತ್ರ ಸ್ತ್ರೀಯರು ಅಧಿಕಾರ ಹೊಂದಿದ್ದರು ಎಂಬ ಸಮ್ಮತ ಹೇಳಿಕೆ. ಅದು ಎಷ್ಟು ಪ್ರಮಾಣದಲ್ಲಿ ಎಂದಾಗ ಉತ್ತರ ಹುಡುಕಬೇಕಾಗುತ್ತದೆ.

ಮಹಿಳಾ ಅಧ್ಯಯನದಲ್ಲಿ ಕೇಳಿಬರುವ ಕೂಗು ಹೆಣ್ಣಿನ ಸ್ವತಂತ್ರ ಅಸ್ಥಿತ್ವ ಮತ್ತು ಅಸ್ಮಿತೆ ಈ ಪದಗಳ ಅರ್ಥವನ್ನು ಇತಿಹಾಸದಲ್ಲಿ ಹುಡುಕಿದರೆ ಎಲ್ಲೂ ಅದರ ಸುಳಿವು ಸಿಗುವಂತೆ ಕಾಣುವುದಿಲ್ಲ. ಆದರೆ ಸ್ತ್ರೀ ಸ್ವತಂತ್ರವಾಗಿ ಆಡಳಿತ ನಿರ್ವಹಿಸುತ್ತಿದ್ದಳು ಎಂಬ ಕೂಗು ಎಲ್ಲೆಲ್ಲೂ ಕೇಳಿ ಬರುತ್ತದೆ. ಇತಿಹಾಸವನ್ನು ಅಧ್ಯಯನ ಮಾಡಿದರೆ ಎಲ್ಲೂ ಸ್ತ್ರೀ ಸ್ವತಂತ್ರವಾಗಿ ಆಡಳಿತ ನಿರ್ವಹಿಸಿದ ಉದಾಹರಣೆಗಳಿಲ್ಲ. ಸ್ವತಂತ್ರ ಆಡಳಿತ ಎನ್ನುವುದು ಒಂದು ನೆಪ ಮಾತ್ರ ಆಡಳಿತ ಪುರುಷಮುಖಿಯಾಗಿತ್ತು. ಆಡಳಿತ ಪುರುಷ ಮಾರ್ಗದರ್ಶನದಲ್ಲೇ ಮುಂದುವರಿಯುತ್ತಿತ್ತು. ಒಂದು ರಾಜ್ಯದ ಪರಮಾಧಿಕಾರ ಅವಳ ಕೈಯಲ್ಲಿದ್ದಾಗ ಮಾತ್ರ ಸ್ವತಂತ್ರ ಆಡಳಿತ ನಿರ್ವಹಿಸಿದಂತೆ. ಆದರೆ ಅದು ಸಾಧ್ಯವಿಲ್ಲ. ಏಕೆಂದರೆ ನಮ್ಮ ಪಿತೃಪ್ರಧಾನ ಸಮಾಜ ವಂಶೋದ್ಧಾರಕ್ಕೆ ಪುತ್ರಿಕಾ ಜನನವನ್ನು ಸ್ವಾಗತಿಸುವುದಿಲ್ಲ ಪುತ್ರನೇ ಆಗಬೇಕು. ಒಂದು ಕುಟುಂಬ ಸ್ತ್ರೀ ಸಂತಾನ ಮುಂದುವರಿಕೆಯನ್ನು ಒಪ್ಪುವುದಿಲ್ಲವೆಂದರೆ ಒಂದು ರಾಜ್ಯದ ಪ್ರಶ್ನೆ ಬಂದಾಗ ಪುರುಷನ ಅಧಿಕಾರಕ್ಕೆ ಗಂಡು ಮಗನೇ ಬೇಕು. ಸ್ತ್ರೀ ಅಧಿಕಾರವನ್ನು ಒಪ್ಪಿಕೊಳ್ಳುವುದಿಲ್ಲ.

ಅಧ್ಯಯನದ ಕಾಲಾವಧಿಯಲ್ಲಿ ಸ್ತ್ರೀ ಧಾರ್ಮಿಕ ವಿಚಾರವಾಗಿ ಪುರುಷಸಮಾಜ ಇಬ್ಬಂದಿತನದಿಂದ ನಡೆದುಕೊಂಡಿದೆ. ಸ್ವತಂತ್ರ ರಹಿತಳಾಗಿ ಬಂಧಿಯಾಗಿಯೇ ಇರುವಂತೆ ನಿಯಮ ರೂಪಿಸಿದೆ. ಒಂದು ಕಡೆ ಮಹಾಪತಿವ್ರತೆಯಂತಿರಬೇಕು, ಕುಲಸತಿ, ಮಹಾಸತಿ ಎಂದು ಬಿರುದುಗಳನ್ನು ಕೊಟ್ಟು ಪತಿಯೇ ಪರದೈವವೆಂದು ನಂಬಿಸಿ, ಅವನೇ ಸೌಭಾಗ್ಯ, ಅದೇ ಸತಿಧರ್ಮವೆಂದು ಸಂತಾನ, ಕುಟುಂಬದವರ ಆರೈಕೆ, ಪಾಲನೆ, ಪೋಷಣೆ, ಸವತಿಯರೊಂದಿಗಿನ ಹೆಣಗಾಟ ಇದರಲ್ಲೇ ಆಯುಷ್ಯವನ್ನು ಮುಗಿಯುವಂತೆ ಮಾಡಿದರು. ಇದು ಕುಟುಂಬದಲ್ಲಿ ಹೆಣ್ಣಿನ ಮೇಲೆ ಭಾವನಾತ್ಮಕವಾಗಿ ನಡೆದ ದಬ್ಬಾಳಿಕೆ ಇಲ್ಲವೇ ಕ್ರೌರ್ಯವೆಂದು ಹೇಳಬಹುದು. ಮತ್ತೊಂದು ಕಡೆ ಸಮಾಜದಲ್ಲಿ ಅದೇ ಧರ್ಮದ ಕೇಂದ್ರ ಬಿಂದುವಾದ ದೇವಾಲಯಗಳು ಅಲ್ಲಿರುವ ದೇವರಿಗೆ ಸ್ತ್ರೀಯರನ್ನು ದೇವರ ದಾಸಿಯರು/

ದೇವರ ಸೂಳೆಯರು, ಪಾತರದವರೆಂದು ಪತ್ನಿಯ ನಂತರದ ಸ್ಥಾನವನ್ನು ಸ್ತ್ರೀಯರಿಗೆ ಕೊಟ್ಟು ತಾವು ಅವರಿಂದ ಸೇವೆ ಪಡೆದುಕೊಂಡರು. ದೇವಾಲಯದ ಶಿಲ್ಪಕಲೆಗೆ ಪಾತ್ರದವರ ಮತ್ತು ವೇಶ್ಯೆಯರ ನೃತ್ಯ ಭಂಗಿಗಳೇ ಸ್ಫೂರ್ತಿಯಾದವು. ಇಂತಹ ಅರೆ ನಗ್ನ ನೃತ್ಯ ಶಿಲ್ಪಗಳು ಒಂದು ರೀತಿ ಹೆಣ್ಣಿನ ದೇಹವನ್ನು ಕೇಂದ್ರವಾಗಿರಿಸಿಕೊಂಡು ನೋಡುವ ಅಶ್ಲೀಲ ಪ್ರವೃತ್ತಿ ಎನ್ನಬಹುದು. ಮಾತೃಪ್ರಧಾನ ನೆಲೆಯಲ್ಲಿ ನಿಂತು ನೊಡಿದಾಗ ಸ್ತ್ರೀಯರ ಸ್ಥಾನ ಶೃಂಗದಿಂದ, ಅಧಃಪತನಕ್ಕೆ ಇಳಿಯಿತು. ಪುರುಷನಿಂದಲೇ ಕೀಳುಪವೃತ್ತಿಗಿಳಿಯಿತು. ಆದರೆ ಇತಿಹಾಸದಲ್ಲೆಲ್ಲೂ ಇದು ಅವಳ ಪತನವೆಂದು ಧ್ವನಿಯೆತ್ತಿದ್ದಿಲ್ಲ. ದೇವಾಲಯದಲ್ಲಿ ಅವಳು ಮಾಡುವುದು ದೇವರ ಸೇವೆಯೇ ಎಂದು ನಂಬಿಕೆ. ಸ್ತ್ರೀ ಪೂಜಾರಿಣಿಯಾದ ಕಾಲಕ್ಕೆ ಸ್ತ್ರೀದೈವಗಳು ಬಯಸದ ಸೇವೆಯನ್ನು ಪುರುಷ ದೈವಗಳು ಸ್ತ್ರೀಯರಿಂದಲೇ ಏಕೆ ಬಯಸಿದವು? ಹೆಣ್ಣಿನ ಜನನ ಪ್ರಕ್ರಿಯೆಗೆ ಕಾರಣವಾದದ್ದನ್ನೇ ಮುಟ್ಟು ಮೈಲಿಗೆಯೆಂದು, ದೂರವಿರಿಸಿ, ದೇವರು ಮಡಿ, ಶುದ್ಧತೆ ಬಯಸುತ್ತಾನೆಂದು ನಂಬಿಸಿ, ತಾವು ಪೂಜಾರಿ ಸ್ಥಾನವನ್ನು ಕಿತ್ತುಕೊಂಡು, ಅಂಗಭೋಗ ಹೊರತುಪಡಿಸಿ ದೇವಾಲಯದಲ್ಲಿ ಹೆಜ್ಜೆಗೊಬ್ಬ ವೇಶ್ಯೆಯನ್ನು ನೇಮಕ ಮಾಡಿಕೊಳ್ಳುವಾಗ ದೇವಾಲಯ ಮೈಲಿಗೆಯಾಗಲಿಲ್ಲವೇ? ಎಂಬ ಪ್ರಶ್ನೆ ಮೂಡುವುದು ಸಹಜ. ಇದು ದೇವರ ಹೆಸರಿನಲ್ಲಿ ಸ್ತ್ರೀಯರನ್ನು ದೇಹ ಕೇಂದ್ರಿತವಾಗಿ ನೋಡುವ ದೃಷ್ಟಿ ಎನ್ನಬಹುದು.

ಸ್ತ್ರೀಯರ ಹಕ್ಕು ಭಾಧ್ಯತೆ ವಿಚಾರಕ್ಕೆ ಬಂದಾಗ ಎಲ್ಲೂ ಅವಳಿಗೆ ಪುರುಷರಂತೆ ಸಹಜವಾಗಿ ಸಾಮಾಜಿಕ ಸವಲತ್ತುಗಳನ್ನಾಗಲೀ, ಸೌಲಭ್ಯಗಳನ್ನಾಗಲೀ, ಬಳಕೆ ಮಾಡಿಕೊಳ್ಳುವ ಹಕ್ಕು ದೊರೆಯಲಿಲ್ಲ. ಹಕ್ಕಿನ ವಿಚಾರ ಬಂದಾಗ ಸ್ತ್ರೀಯರು ವಂಚಿತರಾಗಿಯೇ ಉಳಿದಿರುವರು. ಸ್ತ್ರೀಯರ ಶಿಕ್ಷಣ, ಸಾಹಿತ್ಯ, ಮತ್ತು ವೃತ್ತಿ ಇವೆಲ್ಲವುಗಳ ಬಗ್ಗೆ ಮಾಹಿತಿ ನೀಡುವಲ್ಲಿ ಶಾಸನಗಳು ಆಸಕ್ತಿ ತೋರಿಲ್ಲ. ಆದರೆ ಅವಳು ಶಿಕ್ಷಣ ಸಾಹಿತ್ಯದಿಂದ ವಂಚಿತಳಾಗಿರುವಳು. ನಮಗೆ ಶಾಸನಗಳು ಮೇಲ್ವರ್ಗದ ರಾಜಕುಮಾರಿಯರಿಗೆ ದೊರೆತ ಶಿಕ್ಷಣವನ್ನು ಮಾತ್ರ ಉಲ್ಲೇಖಿಸಿ, ಸಮಾಜದಲ್ಲಿ ಕೆಳ ಮತ್ತು ಸಾಮಾನ್ಯವರ್ಗದ ಹೆಣ್ಣು ಮಕ್ಕಳು ವಿದ್ಯೆಯಿಂದ ದೂರವೇ ಉಳಿದರೆನ್ನಬಹುದು. ಕಾರಣ ಅವಳಿಗೆ ಹದಿನೈದನೇ ಚಿಕ್ಕ ಪ್ರಾಯಕ್ಕೆ ವಿವಾಹ ಜರುಗಬೇಕಾಗಿತ್ತು. ಅಷ್ಟು ಸೀಮಿತ ಅವಧಿಯಲ್ಲಿ ಕೌಟುಂಬಿಕ ಕೆಲಸ ಕಾರ್ಯಗಳಲ್ಲಿ ಅನುಭವ ಹೊಂದುವುದು ಅವಶ್ಯವಾಗಿತ್ತು. ಇದು ಹೆಣ್ಣಿನ ಮೇಲೆ ಆರಂಭಿಕ ಹಂತದಲ್ಲೇ ಹಿಡಿತ ಸಾಧಿಸುವ ಒಂದು ಬಗೆ ಎನ್ನಬಹುದು. ಹೆಣ್ಣು ಮಕ್ಕಳಿಗೆ ವಿದ್ಯೆ ಇಲ್ಲದೇ ಜ್ಞಾನದ ಬಾಗಿಲು ತೆರೆಯಲಿಲ್ಲ. ಹಾಗಾಗಿ ಅವಳು ಪಾಪ-ಕರ್ಮ, ಸ್ವರ್ಗ-ನರಕ, ಇಹ-ಪರಗಳ ಮಿಥ್ಯ ಕಲ್ಪನೆಯನ್ನು ಕುರುಡಾಗಿ ನಂಬಿ, ಸತಿಪದ್ಧಂತಿಯಂತಹ ಕೂಪಕ್ಕೆ ತಳ್ಳಲ್ಪಟ್ಟಳು. ವೇದೋಪನಿಷತ್ ಕಾಲಕ್ಕೆ ಇಲ್ಲದ ಸತಿ ಪದ್ಧತಿ ಹತ್ತನೇ ಶತಮಾನದ ಹೊತ್ತಿಗೆ ಸಾರ್ವತ್ರಿಕವಾದುದಕ್ಕೆ ಧರ್ಮದಲ್ಲಿ ಹುಟ್ಟು ಹಾಕಿದ್ದ ಕಾಲ್ಪನಿಕ ನಂಬಿಕೆಗಳೇ ಕಾರಣ.

ಸ್ತ್ರೀ ಜನನದಿಂದ ಆರಂಭವಾದ ಕಟ್ಟುಪಾಡುಗಳು, ಅವಳು ಪತಿ ಜೊತೆಗೆ ಚಿತೆ ಏರುವವರೆಗೂ ಮುಂದುವರಿದಿವೆ. ಮರಣದ ನಂತರವೂ ಮುಂದಿನ ಜನ್ಮಕ್ಕೆ ವರ್ಗಾವಣೆಗೊಂಡವು. ಹೆಣ್ಣಿಗೆ ವಿಧಿಸಿದ ಪ್ರತಿನಿಯಮಗಳೂ ಪುರುಷನ ಸ್ವೇಚ್ಛೆಗೆ ದಾರಿ ಮಾಡಿಕೊಟ್ಟಿವೆ. ಹೆಣ್ಣಿನ ಸ್ಥಾನ ಗಂಡಿನ ಯಜಮಾನಿಕೆಯಲ್ಲಿ ಪ್ರಾಚೀನ ಕಾಲದಿಂದ ಇಂದಿನವರೆಗೂ ಹಂತ ಹಂತವಾಗಿ ಕುಸಿಯುತ್ತಾ ಬಂದವು. ಅವು ಹತ್ತರಿಂದ ಹದಿನೈದನೇ ಶತಮಾನದ ಹೊತ್ತಿಗೆ ಯಾವ ಹಂತ ತಲುಪಿದವು ಎಂಬುದನ್ನು ಶಾಸನಗಳನ್ನೇ ಪ್ರಮುಖ ಆಧಾರವಾಗಿ, ಸಂದರ್ಭಕ್ಕನುಸಾರವಾಗಿ ಸಾಹಿತ್ಯವನ್ನು ಬಳಕೆ ಮಾಡಿಕೊಂಡು ಸಾಮಾಜಿಕ, ರಾಜಕೀಯ, ಧರ್ಮಗಳಲ್ಲಿ ಅವಳು ನಿರ್ವಹಿಸಿದ ಹೊಣೆಗಾರಿಕೆ ಮತ್ತು ಸಮಾಜ ಅವಳಿಗೆ ಕಲ್ಪಿಸಿಕೊಟ್ಟ ಅವಕಾಶಗಳನ್ನು ಅಧ್ಯಯನ ಮಾಡುವುದಾಗಿದೆ. ಸ್ತ್ರೀಯರಿಗಾಗಿ ನಿರ್ಮಿಸಿದ ಧಾರ್ಮಿಕ ನಿಯಮಗಳು ಯಾವುವು, ಆ ನಿಯಮಗಳಲ್ಲಿ ಅವರನ್ನು ಹೇಗೆ ಬಂಧಿಸಿಡಲಾಯಿತು? ಅವರ ಅರಿವಿಗೆ ಬಾರದಂತೆ ಅವರು ಹೇಗೆ ಈ ನಿಯಮಗಳಲ್ಲಿ ಸಿಲುಕಿಕೊಂಡರು? ಸ್ತ್ರೀಯರಿಗಾಗಿ ನಿರ್ಮಾಣವಾದ ಧಾರ್ಮಿಕ ನಿಯಮಗಳು ಅಭಿವೃದ್ಧಿಗೆ ಹೇಗೆ ಮಾರಕವಾದವು? ಧರ್ಮದ ಕಾರಣಕ್ಕೆ ಅವರನ್ನು ಹೇಗೆ ಅಂತ್ಯಗೊಳಿಸಲಾಯಿತು ಎಂಬುದನ್ನು ಅಧ್ಯಯನ ಮಾಡುವುದಾಗಿದೆ.

**ವ್ಯಾಪ್ತಿ**

ಪ್ರಾಚೀನ ಕಾಲದಲ್ಲಿ ಬಾಳಿ ಬದುಕಿದ ಸ್ತ್ರೀಯರನ್ನು ಕುರಿತು ಉಲ್ಲೇಖಿಸಲಾಗಿರುವ ಶಾಸನಗಳು ನನ್ನ ಅಧ್ಯಯನದ ವ್ಯಾಪ್ತಿಯಲ್ಲಿವೆ. ಈ ಕಾಲಾವಧಿಯಲ್ಲಿ ಆಳ್ವಿಕೆ ಮಾಡಿದ ಪ್ರಮುಖ ರಾಜಮನೆತನಗಳಾದ ಶಾತವಾಹನರಾದಿಯಾಗಿ ಮುಂದೆ ಬರುವ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯದ ವರೆಗೂ ದೊರೆಯುವ ರಾಜಮನೆತನಗಳ ಶಾಸನಗಳು ಕೂಡ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ.

ಸ್ತ್ರೀಯರು ನಿರ್ವಹಿಸಿದ ಆಡಳಿತ, ದೇವಾಲಯಗಳಿಗೆ ನೀಡಿದ ದಾನದತ್ತಿಗಳು, ಮತ್ತು ಸಮಾಜದ ವಿವಿಧ ವಿಭಾಗಗಳಲ್ಲಿ ಸ್ತ್ರೀಯರು ನಿರ್ವಹಿಸಿದ ಪಾತ್ರವನ್ನು ಕುರಿತು ಈ ಕಾಲಾವಧಿಯಲ್ಲಿ ದೊರೆತ ಶಾಸನೋಕ್ತವಾದ ಮಾಹಿತಿ ಕುರಿತು ಅಧ್ಯಯನ ಮಾಡುವುದಾಗಿದೆ. ಅದರಲ್ಲೂ ಪ್ರಮುಖವಾಗಿ ಕೆಳ ಸಮುದಾಯದ ಸ್ತ್ರೀಯರು, ಪಾತರದವರು, ವೇಶ್ಯೆಯರು, ಸತಿಹೋದ ಸ್ತ್ರೀಯರನ್ನು ಕುರಿತು ಅಧ್ಯಯನ ಮಾಡುವುದಾಗಿದೆ.

ಮಾತೃಪ್ರಧಾನ ಸಂಸ್ಕೃತಿಯಲ್ಲಿ ಮಾತೃಪ್ರಧಾನತೆ, ಮಾತೃವಂಶೀಯತೆ, ಮಾತೃದೇವತೆಗಳ ಅಧ್ಯಯನ, ನಂತರ ಬರುವ ವೈದಿಕ ಯುಗದಲ್ಲಿ ಸ್ತ್ರೀಯರ ಕುರಿತು ಸಂಕ್ಷಿಪ್ತ ಅಧ್ಯಯನ ಮಾಡುವುದಲ್ಲದೆ ನಂತರ ಬಂದ ರಾಜಪ್ರಭುತ್ವದಲ್ಲಿ ಸ್ತ್ರೀಯರನ್ನು ಕುರಿತಾಗಿ ಒಂದು ಸಾಮಾನ್ಯ ಅಧ್ಯಯನ ಮಾಡುವುದಾಗಿದೆ. ಈ ಅಧ್ಯಯನ ಹತ್ತನೇ ಶತಮಾನಕ್ಕಿಂತ ಮುಂಚಿನ

ಕಾಲಾವಧಿಯಲ್ಲಿ ಸ್ತ್ರೀಯರ ಸ್ಥಿತಿಗತಿ ಕುರಿತಾಗಿ ಮಾಹಿತಿ ನೀಡುವ ಒಂದು ಸಂಕ್ಷಿಪ್ತ ಅಧ್ಯಯನವು ಆಗಿದೆ. ಹದಿನೈದನೇ ಶತಮಾನದ ಕಾಲಾವಧಿಯ ನಂತರವೂ ಈ ವಿಷಯ ಮುಂದುವರಿಯುತ್ತದೆ. ಆ ಕಾಲಾವಧಿಯಲ್ಲಿ ಆಚರಣೆಯಲ್ಲಿದ್ದ ಪದ್ಧತಿಗಳನ್ನು ಮತ್ತು ಅವುಗಳ ಪರಿಣಾಮವನ್ನು ಅಧ್ಯಯನ ಮಾಡಲು ಇವು ಅವಶ್ಯಕವಾಗಿವೆ. ಇಷ್ಟು ನನ್ನ ಅಧ್ಯಯನ ವ್ಯಾಪ್ತಿಯಾಗಿರುತ್ತದೆ.

**ಈವರೆಗೆ ನಡೆದ ಅಧ್ಯಯನಗಳು**

ಶಾಸನಗಳಲ್ಲಿ ಸ್ತ್ರೀಯರನ್ನು ಕುರಿತು ಈಗಾಗಲೇ ಅಧ್ಯಯನಗಳು ನಡೆದಿವೆ. ಶಾಸನಗಳಲ್ಲಿ ಮಹಿಳೆಯರನ್ನು ಕುರಿತು ಅಧ್ಯಯನ ಮಾಡಿದ ಮೊದಲ ಸಂಶೋಧಕಿ ನಾನೇ ಅಲ್ಲ. ಈ ಕ್ಷೇತ್ರ ಕೆಲಸ ಮಾಡದ ಕನ್ನೆನೆಲವೇನೂ ಆಗಿಲ್ಲ. ಈ ಹಿಂದೆ ಶಾಸನಗಳಲ್ಲಿ ಮಹಿಳೆಯರನ್ನೂ ಕುರಿತು ಅಧ್ಯಯನಗಳು ನಡೆದಿವೆ ಅಂತಹ ಅದ್ಯಯನದಲ್ಲಿ ಮೊದಲನೆಯದಾಗಿ ನಾವು ಡಾ. ಚೆನ್ನಕ್ಕ ಎಲಿಗಾರ ಅವರ 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ' ಎಂಬ ಸಂಶೋಧನಾ ಕೃತಿ ಶಾಸನೋಕ್ತ ಮಹಿಳೆಯರನ್ನು ಕುರಿತ ಒಂದು ಮಹತ್ವದ ಗ್ರಂಥವಾಗಿದೆ. ಈ ಗ್ರಂಥ ಶಾಸನಗಳಲ್ಲಿ ಮಹಿಳೆಯರು ರಾಜಕೀಯ, ಆಡಳಿತಾತ್ಮಕ, ಧಾರ್ಮಿಕ ಕ್ಷೇತ್ರಗಳನ್ನು ಒಳಗೊಂಡಂತೆ ಸಮಾಜದಲ್ಲಿ ಜಾರಿ ಇದ್ದ ವೇಶ್ಯಾ ಪದ್ಧತಿ, ಪಾತ್ರದವರು, ನಂತರ ಮಹಿಳೆಯರು ನಿರ್ವಹಿಸುತ್ತಿದ್ದ ವೃತ್ತಿಗಳು, ಸಾಮಾಜಿಕ ಕಾರ್ಯಗಳು, ಶಿಕ್ಷಣ ಹೀಗೆ ಶಾಸನದಲ್ಲಿ ಉಕ್ತವಾದ ಮಹಿಳೆಯರನ್ನು ಕುರಿತಂತೆ ವಿವಿಧ ಕ್ಷೇತ್ರಗಳ ನೆಲೆಯಲ್ಲಿ ವಿಭಾಗಿಸಿ ಅಧ್ಯಯನ ಮಾಡಿದ್ದಾರೆ. ಇದು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಸಂಶೋಧನಾ ಗ್ರಂಥವಾಗಿದೆ. ನಂತರ ಇವರ ಮಾರ್ಗದರ್ಶನದಲ್ಲೇ ಅಂಜನಪ್ಪ ಡಿ. ಕೆ. ಎನ್ನುವವರು 'ಜೈನಪರಂಪರೆ ಮಹಿಳೆ' ಎಂಬ ಸಂಶೋಧನಾ ಗ್ರಂಥವನ್ನು ಮಂಡಿಸಿದ್ದಾರೆ. ಇದು ಜೈನ ಮಹಿಳೆಯರನ್ನು ಕುರಿತು ಮಂಡಿಸಿದ ಗ್ರಂಥವಾಗಿದೆ.

ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲಿ ಪ್ರಕಟಿತ ಡಾ. ಚೆನ್ನಕ್ಕ ಪಾವಟೆಯವರ 'ಕರ್ನಾಟಕದ ಶಾಸನೋಕ್ತ ಮಹಿಳೆ'–ಸಂಸ್ಕೃತಿ ಸಮೀಕ್ಷೆ ಎಂಬ ಗ್ರಂಥದಲ್ಲಿಯೂ ಪ್ರಮುಖ ಶಾಸನೋಕ್ತ ಮಹಿಳೆಯರನ್ನು ಕುರಿತ ಮಾಹಿತಿ ಉಲ್ಲೇಖಿಸಿದ್ದರೆ. ಡಾ. ಜೆ. ಎಂ. ನಾಗಯ್ಯ ಅವರು 'ಆರನೇ ವಿಕ್ರಮಾದಿತ್ಯನ ಶಾಸನಗಳು' ಎಂಬ ಸಂಶೋಧನಾ ಗ್ರಂಥದಲ್ಲಿ ಆರನೇ ವಿಕ್ರಮಾದಿತ್ಯನ ರಾಣಿಯರಿಗೆ ಮಾತ್ರ ಸಂಬಂಧಿಸಿದ ಶಾಸನಗಳ ಕುರಿತು ಅಧ್ಯಯನ ಮಾಡಿದ್ದಾರೆ. ಸತಿಪದ್ಧತಿ ಕುರಿತಂತೆ ಡಾ. ಶೇಠಿಯವರ 'ಕರ್ನಾಟಕದಲ್ಲಿ ಸತಿಪದ್ಧತಿ' ಸತಿಪದ್ಧತಿ ಕುರಿತಂತೆ ಮಾಡಿದ ಒಂದು ಮಹತ್ವದ ಗ್ರಂಥವಾಗಿದೆ. ಇದರಲ್ಲಿ ಸತಿ ಪದ್ಧತಿಗೆ ಕಾರಣಗಳು, ಕರ್ನಾಟಕದಲ್ಲಿ ನಡೆದ ಸತಿ ಘಟನೆಗಳನ್ನು ಕುರಿತು ವಿವರವಾದ ಮಾಹಿತಿಯನ್ನು ನೀಡಿದ್ದಾರೆ. ಡಾ. ಬಸವರಾಜ ಕಲ್ಗುಡಿ ಅವರ 'ಮಹಾಸತಿ ಆಚರಣೆ' ಸತಿಪದ್ಧತಿಯನ್ನು ಕುರಿತಂತೆ ಮಾಹಿತಿಯನ್ನು

ಒಳಗೊಂಡಿರುವ ಒಂದು ಮಹತ್ವದ ಗ್ರಂಥವಾಗಿದೆ. ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗ ಡಾ. ಶೈಲಜಾ ಹಿರೇಮಠ ಅವರ 'ಪಾತರದವರು' ಎಂಬ ಕೃತಿ ೧೯ನೇ ಶತಮಾನದಲ್ಲಿ ನೃತ್ಯ ಮತ್ತು ಸಂಗಿತ ಪರಂಪರೆಗೆ ಸೇರಿದ್ದ ನಾಯಕಸಾನಿಗಳೆಂದು ಉಲ್ಲೇಖಿಸುವ ಸ್ತ್ರೀಯರನ್ನು ಕುರಿತು ಅವರ ಸಾಮಾಜಿಕ, ಆರ್ಥಿಕ, ವೃತ್ತಿಜೀವನಕ್ಕೆ ಸಂಬಂಧಿಸಿದಂತೆ ಕುರಿತು ರಚಿಸಿದ ಗ್ರಂಥವಾಗಿದೆ. ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದಲ್ಲಿ ಜಿ. ಎಂ. ಶಿಲ್ಪ ಅವರು ಡಾ. ಡಿ.ವಿ.ಪರಮಶಿವಮೂರ್ತಿಯವರ ಮಾರ್ಗದರ್ಶನದಲ್ಲಿ 'ರಾಯಚೂರು ಜಿಲ್ಲಾ ಸಾಹಿತ್ಯದಲ್ಲಿ ಮಹಿಳೆಯರು' ಎಂಬ ಎಂ. ಫಿಲ್. ಸಂಶೋಧನಾ ಗ್ರಂಥವನ್ನು ೨೦೦೯ರಲ್ಲಿ ಮಂಡಿಸಿದ್ದಾರೆ. ಅದು ರಾಯಚೂರು ಜಿಲ್ಲೆಯಲ್ಲಿ ಬರುವ ರಾಣಿಯರು, ವಿವಿಧ ವೃತ್ತಿಕಾರರು, ಗ್ರಾಮೀಣ ಮಹಿಳೆಯರು, ಕೆಳವರ್ಗದ ಮಹಿಳೆಯರು, ಸಮಾಜ ಸೇವೆ, ಶಿಕ್ಷಣ, ಮಹಾಸತಿ, ವೀರರಾಣಿಯರು ಮತ್ತು ವೇಶ್ಯೆಯರನ್ನು ಕುರಿತ ಅಧ್ಯಯನವಾಗಿದೆ.

ಡಾ. ಕಮಲಾ ಹಂಪನಾ ಅವರು ತಮ್ಮ 'ಬೊಗಸೆ'(ಮಹಿಳೆ ಸುತ್ತ–ಮುತ್ತ) ಎಂಬ ಗ್ರಂಥದಲ್ಲಿ ಪ್ರಾಚೀನ ಕಾಲದ ಕೆಲವು ಮಹಿಳೆಯರನ್ನು ಕುರಿತು ಶಾಸನೋಕ್ತ ಮತ್ತು ಸಾಹಿತ್ಯಕವಾದ ಮಾಹಿತಿಯನ್ನೊಳಗೊಂಡ ಕೃತಿಯನ್ನು ರಚಿಸಿದ್ದಾರೆ. ರಾಷ್ಟ್ರಕೂಟರ ಕಾಲದ ಮಹಿಳಾ ಸಮಾಜ, ಮಹಿಳೆ ಮತ್ತು ಜೈನಧರ್ಮ, ಸಾವಿರದ ಅತ್ತಿಮಬ್ಬೆ, ದಾನ ವಿನೋದೆ, ಶಾಸನಗಳಲ್ಲಿ ಜೈನ ಮಹಿಳೆಯರು, ಕಂತಿಯರು, ಶ್ರೀಮತಿ ಜಕ್ಕಲಾಂಬ, ಕವಯಿತ್ರಿ ನಾಗಲಾದೇವಿ, ಹೀಗೆ ಪ್ರಾಚೀನ ಕಾಲದ ಮಹಿಳೆಯರನ್ನು ಕುರಿತು ಪ್ರತ್ಯೇಕ ಲೇಖನಗಳನ್ನೊಳಗೊಂಡ ಗ್ರಂಥವನ್ನು ರಚನೆ ಮಾಡಿದ್ದಾರೆ. ಬೆಂಗಳೂರಿನ ಮಿಥಿಕ್ ಸೊಸೈಟಿಯವರು ಪ್ರಕಟಿಸಿದ 'ಭಾರತೀಯ ಸಂಸ್ಕೃತಿ ಮತ್ತು ಮಹಿಳೆ' ಡಾ. ವಸಂತಲಕ್ಷ್ಮಿ ಯವರು ಶತಮಾನೋತ್ಸವದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳ ಸಂಪುಟವನ್ನು ಸಂಪಾದಿಸಿದ ಕೃತಿಯಾಗಿದೆ. ಇದು ಪ್ರಾಚೀನ ಕಾಲದಲ್ಲಿ ರಾಣಿಯರ ಆಡಳಿತ ಕ್ಷೇತ್ರಗಳಲ್ಲಿ ನಿರ್ವಹಿಸಿದ ಪಾತ್ರವನ್ನು ಕುರಿತು ಶಾಸನೋಕ್ತವಾಗಿ ಮಾಹಿತಿಯನ್ನೊಳಗೊಂಡ ಪ್ರಬಂಧ ಲೇಖನಗಳನ್ನು ಒಳಗೊಂಡಿದೆ.

ಶಾಸನದಲ್ಲಿ ಉಲ್ಲೇಖಿಸಲಾದ ಪ್ರಾಚಿನ ಕಾಲದ ಮಹಿಳೆಯರನ್ನು ಕುರಿತು ನನ್ನ ಅರಿವಿನ ಪರಿಧಿಯಲ್ಲಿ ಬಂದಂತಹ ಅಧ್ಯಯನ ಗ್ರಂಥಗಳಿವು. ಪ್ರಾಚೀನ ಕಾಲದ ಮಹಿಳೆಯರನ್ನು ಕುರಿತ ಅಧ್ಯಯನ ಮೇಲ್ನೋಟಕ್ಕೆ ಪೂರ್ಣವಾದಂತೆ ನಮಗೆ ಅನಿಸುವುದು ಸಹಜ. ಪ್ರಾಚೀನ ಕಾಲದ ಮಹಿಳೆಯರನ್ನು ಕುರಿತಂತೆ ಪ್ರಸ್ತುತ ಮಹಿಳಾ ಅಧ್ಯಯನದ ನೆಲೆಯಲ್ಲಿ ಕುರಿತು ಅಧ್ಯಯನ ಮಾಡಿದ್ದೇನೆ. ಡಾ. ಚೆನ್ನಕ ಎಲಿಗಾರ ಅವರು ಇದೇ ವಿಷಯವನ್ನಿಟ್ಟುಕೊಂಡು ಅಧ್ಯಯನ ಮಾಡಿದ್ದಾರೆ. ಆದರೆ ಅವರ ಮತ್ತು ನನ್ನ ಅಧ್ಯಯನದ ಕಾಲಾವಧಿ ಬೇರೆಯಾಗಿದೆ. ಎಂಬತ್ತರ ದಶಕದಲ್ಲಿದ್ದ ಮಹಿಳಾ ಅಧ್ಯಯನದ ಶಿಸ್ತಿಗೂ ಇಂದಿನ ಮಹಿಳಾ ಅಧ್ಯಯನದ ಶಿಸ್ತಿಗೂ ಬಹಳ ವ್ಯತ್ಯಾಸವಿದೆ. ಆಗ ಸ್ತ್ರೀಯರನ್ನು ಕುರಿತು ನಡೆದ ಅಧ್ಯಯನಗಳು

ಓರಿಯಂಟಲಿಸ್ಟ್ ಅಂದರೆ ಸಂಪ್ರದಾಯವಾದಿ ನೆಲೆಯಲ್ಲಿ ಇದ್ದವು. ಆದರೆ ಇಂದಿನ ಮಹಿಳಾವಾದ ತಮ್ಮದೇ ಗಟ್ಟಿ ನಿಲುವುಗಳನ್ನು ಹೊಂದಿದೆ. ಈ ಅಧ್ಯಯನವನ್ನು ಪ್ರಸ್ತುತ ಮಹಿಳಾ ಸಶಕ್ತ ನೆಲೆಯಲ್ಲಿ ಕ್ರೀಯಾಶೀಲ ವಾಸ್ತವಿಕ ನೆಲೆಗಟ್ಟಿನ ಮೇಲೆ ಅಧ್ಯಯನ ಮಾಡಿದ್ದೇನೆ.

**ಸ್ವರೂಪ**

'ಶಾಸನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ' ಎಂಬ ಶಿರ್ಷಿಕೆ ಅಡಿಯಲ್ಲಿ ಸ್ತ್ರಿಯರನ್ನು ಕುರಿತು ಮಾಡಿರುವ ಅಧ್ಯಯನದಲ್ಲಿ ಮೊದಲ ಅಧ್ಯಾಯದಲ್ಲಿ ಪೀಠಿಕೆ, ಉದ್ದೇಶ, ವಿಧಾನ, ವ್ಯಾಪ್ತಿ ಮತ್ತು ಈವರೆಗೆ ನಡೆದ ಅಧ್ಯಯನಗಳನ್ನು ಕುರಿತಾಗಿ ಮಾಹಿತಿ ಇದೆ.

ಎರಡನೇ ಅಧ್ಯಾಯದಲ್ಲಿ ಮಾತೃಪ್ರಧಾನ ವ್ಯವಸ್ಥೆಯ ಸ್ವರೂಪ, ಮಾತೃಪ್ರಧಾನ ವ್ಯವಸ್ಥೆಯ ಅವನತಿಗೆ ಕಾರಣಗಳು ಅದರಲ್ಲಿ ಆರ್ಥಿಕ, ಸಾಮಾಜಿಕ, ಮತ್ತು ಧಾರ್ಮಿಕ ಕಾರಣಗಳನ್ನು ಕುರಿತು ವಿವರಿಸಲಾಗಿದೆ. ನಂತರ ಮಾತೃದೇವತಾ ಆರಾಧನೆ, ಲಕ್ಷಣಗಳು ಮತ್ತು ಸಿಂಧೂನದಿ ನಾಗರಿಕತೆಯ ಕಾಲದಲ್ಲಿ ಮಾತೃ ಪ್ರಧಾನ ವ್ಯವಸ್ಥೆ ಅಸ್ತಿತ್ವದಲ್ಲಿತ್ತೇ ಎಂಬ ಅಂಶಗಳನ್ನು ಕುರಿತು ಅಲ್ಲಿ ದೊರೆತ ಕುರುಹುಗಳ ಆಧಾರದಿಂದ ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಮೂರರಲ್ಲಿ ಶಾಸನಗಳಲ್ಲಿ ರಾಜಪ್ರಭುತ್ವ ಮತ್ತು ಸ್ತ್ರೀಯರು ಎಂಬ ಶಿರ್ಷಿಕೆಯಲ್ಲಿ ಮೊದಲನೇಯದಾಗಿ ದ್ರಾವಿಡ ಮಹಿಳೆಯರನ್ನು ಕುರಿತು ತಿಳಿದುಕೊಳ್ಳಲು ತಮಿಳರ ಶಂಗಂ ಸಾಹಿತ್ಯವನ್ನು ಅಧ್ಯಯನ ಮಾಡಲಾಗಿದೆ. ನಂತರ ಕರ್ನಾಟಕವನ್ನು ಪ್ರವೇಶ ಮಾಡಿದ ಮೌರ್ಯರ ಪ್ರಭಾವ ಅದರಲ್ಲಿ ಪ್ರಮುಖವಾಗಿ ಅಶೋಕನನ್ನು ಕುರಿತು ಚರ್ಚಿಸಲಾಗಿದೆ. ನಂತರ ಕರ್ನಾಟಕದಲ್ಲಿ ಆರಂಭಿಕ ಅರಸು ಮನೆತನಗಳಾದ ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ಮತ್ತು ಗಂಗರ ರಾಜಪ್ರಭುತ್ವದ ಕಾಲದಲ್ಲಿ ಸ್ತ್ರೀಯರ ಜೀವನ, ಸ್ಥಾನ, ಸಮ್ಮಾನಗಳನ್ನು ಕುರಿತು ಸಂಕ್ಷಿಪ್ತ ಅಧ್ಯಯನ ಮಾಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಶಾಸನಗಳಲ್ಲಿ ಸ್ತ್ರೀಯರ ಕಾರ್ಯಕ್ಷೇತ್ರಗಳಾದ ಆಡಳಿತ/ರಾಜಕೀಯ ಕ್ಷೇತ್ರ, ಧಾರ್ಮೀಕ ಮತ್ತು ಸಾಮಾಜಿಕ ಸಹಭಾಗಿತ್ವ, ಮತ್ತು ಈ ಕ್ಷೇತ್ರಗಳಲ್ಲಿ ಅವರಿಗೆ ದೊರೆತ ಪ್ರಾತಿನಿಧ್ಯ ಕುರಿತಾಗಿ ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ. ಇದರ ಹೊರತಾಗಿ ಈ ಅಧ್ಯಾಯದಲ್ಲಿ ಸ್ತ್ರೀಯರು ನಿರ್ವಹಿಸಿದ ಸಾಮಾಜಿಕ ಸೇವೆ, ವೃತ್ತಿ ಕ್ಷೇತ್ರ, ಅವರಿಗೆ ದೊರೆತ ಶಿಕ್ಷಣ, ಸಾಹಿತ್ಯ, ಸಮಾಜದಲ್ಲಿ ಜಾರಿಯಿದ್ದ ಬಹುಪತ್ನಿತ್ವ ಮತ್ತು ಪೆಣ್ಬುಯಲ್ ಶಾಸನಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಐದರಲ್ಲಿ ಶಾಸನದಲ್ಲಿ ಕಂಡುಬಂದ ಸ್ತ್ರೀ ವಿರೋಧಿ ಆಚರಣೆಗಳಾದ ಪಾತರದವರು, ವೇಶ್ಯೆಯರು ಮತ್ತು ಸತಿಪದ್ಧತಿ ಸತಿಯ ಅರ್ಥ, ಸತಿ ಹೋಗುವ ಸಂಧರ್ಭ, ಸತಿ ಸ್ಮಾರಕಗಳು, ಜನಪದರಲ್ಲಿ ಸತಿ ಹೋಗುವುದರ ಬಗ್ಗೆ ಇದ್ದ ನಂಬಿಕೆ ಅಲ್ಲದೇ ಸಹಗಮನ ಮಾಡಲು ಆರ್ಥಿಕ, ಸಾಮಾಜಿ, ರಾಜಕೀಯ ಮತ್ತು ಧಾರ್ಮಿಕ ಅಂಶಗಳು ಹೇಗೆ ಕಾರಣವಾಗಿದ್ದವು? ಎಂಬ ಅಂಶಗಳ ಬಗ್ಗೆ ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ. ನಂತರ

ಇದೇ ಅಧ್ಯಾಯದಲ್ಲಿ ದೇವಾಯಲಗಳಿಗೆ ಹೆಣ್ಣು ಮಕ್ಕಳನ್ನು ದಾನವಾಗಿ ಕೊಡುತ್ತಿದ್ದ ಕನ್ಯಾಧಾನ ಮತ್ತು ತೊತ್ತು ಪದ್ಧತಿಯನ್ನು ಕುರಿತಾಗಿ ಮಾಹಿತಿ ಇದೆ. ಅಲ್ಲದೇ ಆತ್ಮ ಬಲಿದಾನದಲ್ಲಿ ರಾಜರಿಗೆ ನಿಷ್ಠಾವಂತ ಸೇವಕರ ಆತ್ಮಬಲಿಯ ಜೊತೆಗೆ ಅವರ ಪತ್ನಿಯರೂ ಆತ್ಮಬಲಿದಾನ ಮಾಡುತ್ತಿದ್ದುದರ ಕುರಿತು ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಆರರಲ್ಲಿ ಸಂಶೋಧನಾ ಅಧ್ಯಯನದ ಸಮಾರೋಪ ಮತ್ತು ಇಡೀ ಸಂಶೋಧನಾ ಅಧ್ಯಯನದಲ್ಲಿ ಕಂಡುಕೊಂಡಂತಹ ಅಂಶಗಳನ್ನು ಕುರಿತು ಫಲಿತಗಳಲ್ಲಿ ದಾಖಲಿಸಲಾಗಿದೆ.

# ಅಧ್ಯಾಯ ಎರಡು

## ಪೂರ್ವ ಪೀಠಿಕೆ (ಸ್ತ್ರೀಯರು)

೨.೧. ಮಾತೃ ಪ್ರಧಾನ ವ್ಯವಸ್ಥೆಯ ಸ್ವರೂಪ

೨.೨. ಮಾತೃ ಪ್ರಧಾನ ವ್ಯವಸ್ಥೆಯ ಅವನತಿಗೆ ಕಾರಣಗಳು

೨.೨.೧. ಆರ್ಥಿಕ ಕಾರಣಗಳು

೨.೨.೨. ಸಾಮಾಜಿಕ ಕಾರಣಗಳು

೨.೨.೩. ಧಾರ್ಮಿಕ ಕಾರಣಗಳು

೨. ೩. ಮಾತೃದೇವತಾ ಆರಾಧನೆ

೨.೪. ಸಿಂಧೂ ನದಿ ನಾಗರಿಕತೆಯಲ್ಲಿ ಮಾತೃಪ್ರಧಾನ ಅಂಶಗಳು.

## ೨.೧. ಮಾತೃ ಪ್ರಧಾನ ವ್ಯವಸ್ಥೆಯ ಸ್ವರೂಪ

ಪುರುಷ–ಸ್ತ್ರೀ ಎಂದು ಲಿಂಗಭಿನ್ನತೆ ಗುರುತಿಸದ ಕಾಲಘಟ್ಟದ ಸಂಸ್ಕೃತಿಯಲ್ಲಿ ಹೆಣ್ಣಿನ ಜೀವನ ಮತ್ತು ಶ್ರಮಭಾಗಿತ್ವ ಪುರುಷನ ಸರಿಸಮಾನವಾಗಿತ್ತು. ಕುಟುಂಬ ಕಟ್ಟುವ ಮೊದಲು ಬೇಟೆಯಾಡುವಿಕೆ, ಬೆಂಕಿಯ ಉತ್ಪಾದನೆ, ಆಹಾರ–ವಿಹಾರ, ಎಲ್ಲ ಪ್ರಕ್ರಿಯೆಯಲ್ಲೂ ಪುರುಷನ ಜೊತೆ ಸ್ತ್ರೀ ಸಕ್ರಿಯವಾಗಿದ್ದಳು. ಲಿಂಗಬೇಧವಿಲ್ಲದೇ, ಹಸಿವಾದಾಗ ಬೇಟೆಯಾಡುವುದು, ದಣಿವಾದಾಗ ವಿಶ್ರಾಂತಿ ಪಡೆಯುವುದು, ಸಂತಾನ ಇವಷ್ಟೇ ಅವರ ಜೀವನವಾಗಿತ್ತು. ಚಾರಿತ್ರಿಕ ಬೆಳವಣಿಗೆಯಲ್ಲಿ ಆವಿಷ್ಕಾರಗಳು ಮಾನವನನ್ನು ಹಂತಹಂತವಾಗಿ ಪ್ರಗತಿಯತ್ತ ಕರೆದೊಯ್ದವು. ಆದಿಮಾನವ ಬೆಂಕಿಯನ್ನು ಕಂಡುಹಿಡಿದದ್ದೇ ಮೊದಲ ಆವಿಷ್ಕಾರ ಎನ್ನಬಹುದು. ಕೃಷಿ ಶೋಧ ಹೆಣ್ಣಿನ ಅಸ್ಥಿತ್ವದ ಮೊದಲ ಹೆಜ್ಜೆಯಾಗಿದೆ. ಭೂಮಿಯೊಂದಿಗೆ ಹೆಣ್ಣಿನ ಅಸ್ಮಿತೆ ಬೆಸೆದುಕೊಂಡಿತು. ತನ್ನ ಸಂತಾನ ಮತ್ತು ಅದರ ಗುರುತಿಸುವಿಕೆಯ ಪ್ರಜ್ಞೆ ಮೂಡಿ ಅದರ ರಕ್ಷಣೆ, ಪೋಷಣೆ ಹೊಣೆ ಹೊತ್ತು ಒಂದು ಕಡೆ ನೆಲೆ ನಿಂತಳು. ಇದನ್ನೇ ಕೌಟುಂಬಿಕ ಪ್ರಜ್ಞೆ ಎನ್ನುವುದು. ಯಾವಾಗ ಅವಳಿಗೆ ಕೌಟುಂಬಿಕ ಪ್ರಜ್ಞೆ ಬೆಳೆಯಿತೋ ಅಂದರೆ ತನ್ನತನದ ಅರಿವು, ತಾನು ಜನ್ಮ ನೀಡಿದ ಮಕ್ಕಳು, ಅದರ ಪೋಷಣೆ ಬಗ್ಗೆ ತಿಳುವಳಿಕೆ ಮೂಡಿತೋ ಅಂದಿನಿಂದ ಸ್ತ್ರೀಯರು ಗಂಡಿನ ಜೊತೆ ಬೇಟೆಗೆ ಹೋಗುವುದನ್ನು ನಿರಾಕರಿಸಿರುವ ಸಾಧ್ಯತೆ ಇದೆ. ಅವಳಿಗೆ ಋತುಸ್ರಾವ, ಗರ್ಭ ಧರಿಸುವಿಕೆ, ಹೆರಿಗೆ, ಇವೆಲ್ಲ ಒಂದು ನೆಲೆಯಲ್ಲಿ ಕಟ್ಟಿ ಹಾಕಿದವು. ಗಂಡು ಬೇಟೆಯಾಡಿ ಆಹಾರ ಸಂಗ್ರಹಣೆಯಲ್ಲಿ ತೊಡಗಿದರೆ ಸ್ತ್ರೀ ಒಂದು ಕಡೆ ನೆಲೆ ನಿಂತು ಕುಟುಂಬ ಪೋಷಣೆಯಲ್ಲಿ ತೊಡಗಿದಳು.

ಹೆಣ್ಣು ಕೌಟುಂಬಿಕ ಹೊಣೆಗಾರಿಕೆಯಿಂದ ಕುಟುಂಬ ಜೀವನದಲ್ಲಿ ಉಳಿಯುವಂತಾಯಿತು. ಪುರುಷ ಕುಟುಂಬದಿಂದ ಆಚೆ ಇದ್ದು ಬೇಟೆಗಾರಿಕೆಯಲ್ಲಿ ಮುಂದುವರಿದ. ಮಹಿಳೆ ಪ್ರಕೃತಿ ಮಧ್ಯೆ ಜೀವಿಸುತ್ತಾ ಪ್ರಕೃತಿಯಂತೆ ಉತ್ಪಾದನೆಯಲ್ಲಿ ತೊಡಗಿದಳು. ಹಾಗಾಗಿ ಪ್ರಕೃತಿಯಲ್ಲಿ ಸ್ತ್ರೀಯನ್ನು, ಸ್ತ್ರೀಯಲ್ಲಿ ಪ್ರಕೃತಿಯನ್ನು ಕಾಣಲಾಗುತ್ತದೆ. ಇಬ್ಬರೂ ಉತ್ಪತ್ತಿಯ ಸಂಕೇತ, ಇಬ್ಬರೂ ಸಮೃದ್ಧಿಯ ಸಂಕೇತವಾಗಿರುವರು, ಸದಾ ಅಭಿವೃದ್ಧಿಯತ್ತ ಸಾಗುತ್ತಿರುತ್ತಾರೆ. ಅನಾಗರಿಕನಾದ ಮನುಷ್ಯನಿಗೆ ಇವೆಲ್ಲ ಸೋಜಿಗವೆನಿಸಿದವು. ತನ್ನಂತಹದೇ ಆದ ಒಂದು ಪ್ರತಿರೂಪವನ್ನು ತನ್ನಿಂದ ಪಡೆಯುವುದು ಒಂದು ಸೋಜಿಗವೆನಿಸಿದರೂ ತಪ್ಪೇನಿಲ್ಲ. ತಾಯಿಯ ಗರ್ಭದಲ್ಲಿ ನಡೆಯುವ ಅಂತರ್ಗತ ಕ್ರಿಯೆಯಿಂದ ಅವಳು ಗಂಡಿಗೆ ಅದ್ಭುತಶಕ್ತಿಯಂತೆ ಕಂಡಳು, ಅವಳು ಹಾಲುಣಿಸುವುದು, ಪೋಷಿಸುವುದು, ತಾಯಿ–ಮಗುವಿನ ನಡುವಿನ ಬಾಂಧವ್ಯಗಳು ಹೊಸ ಭಾವನೆಗಳನ್ನು ಹುಟ್ಟು ಹಾಕಿದವು. ಈ ಸಂಗತಿಗಳಿಂದ ಮಾತೃವೈಭವೀಕರಣವು ಅತ್ಯಂತ ಸಹಜವಾಗಿ ಪ್ರಾಚೀನ ಸಂಸ್ಕೃತಿಯ

ಘಟ್ಟಗಳಲ್ಲಿ ಕಾಣಬಹುದು. ಮುಂದೆ ಅವಳೇ ಪ್ರಧಾನವಾಗಿ ಪ್ರತಿಬಿಂಬಿತವಾದಳು ಅವಳಲ್ಲಿರುವ ಆ ಒಂದು ಅದ್ಭುತ ಶಕ್ತಿಯಿಂದ ಮಾತೃಪ್ರಧಾನತೆ ಸಂಸ್ಕೃತಿ ಆರಂಭವಾದರೆ, ಮತ್ತೊಂದು ಕಡೆ ಅವಳೇ ಒಂದು ಶಕ್ತಿ ಸ್ವರೂಪಳಾಗಿ ಪೂಜಿಸಲು ಕಾರಣಳಾದಳು.

ಹೆಣ್ಣಿನ ಸೃಜನಶೀಲತೆಯ ಪ್ರತೀಕವಾಗಿಯೇ ಕೃಷಿ ಸಂಶೋಧನೆ ಆಯಿತು. ತನ್ನ ಸುತ್ತ ಬೆಳೆದ ಯಾವುದೋ ಒಂದು ಸಸ್ಯದಿಂದ ಪಡೆದ ಅನುಭೋಗ, ಅವಳಲ್ಲಿ ಉಂಟಾದ ಚೈತನ್ಯ ಅದನ್ನು ಬೆಳೆಯುವ ಕಡೆ ಆಸಕ್ತಿ ಹುಟ್ಟಿಸಿದವು. ಹಾಗಾಗಿ ತಾನು ವಾಸಿಸುವಲ್ಲೆ ಸಣ್ಣದಾಗಿ ಕೃಷಿಯನ್ನು ಆರಂಭಿಸಿದಳು. ಅದರಿಂದ ಅವಳ ನಿರ್ವಹಣಾ ಸಾಮರ್ಥ್ಯ ಬೆಳೆಯಿತು. ಮಾತೃತ್ವ ಸಾಮರ್ಥ್ಯದಿಂದ ಅವಳು ಸಹಜವಾಗಿಯೇ ಎಲ್ಲದಕ್ಕೂ ಕಾರಣಳೂ, ಪರಿಣಾಮವೂ ಆದಳು. ಅವಳಿಂದ ಸೃಷ್ಟಿಯಾದ ಅವನು ಅವಳ ಮುಂದೆ ಕುಬ್ಜನಾದ, ಅವಳ ಶಕ್ತಿಯ ಮುಂದೆ ಅವನು ಮೂಕನಂತಾದ. ಈ ರೀತಿ ಉತ್ಪತ್ತಿಯ ಮೂಲ ನೆಲೆಯಾಗಿರುವುದರಿಂದ ಮತ್ತು ಮಾತೃತ್ವವನ್ನು ಆವಿರ್ಭವಿಸಿಕೊಂಡಿರುವುದರಿಂದ ದೈವತ್ವದ ಸಂಕೇತವಾಗಿ ಸಪ್ತ ಮಾತೃಕೆಯ ಮೂಲನೆಲೆಯಾದಳು. ಇವಳ ಪ್ರತೀಕವೇ ಶಕ್ತಿ ಆರಾಧನೆ.

ಮೌಲ್ಯಗಳು ಹುಟ್ಟುವುದಕ್ಕಿಂತ ಮೊದಲಿನ ಸ್ಥಿತಿ ಇದು. ಪುರುಷನಿಗೆ ಶೀಲ–ಅಶ್ಲೀಲ, ಪವಿತ್ರ–ಅಪವಿತ್ರ, ನೀತಿ–ನಿಯಮ, ಇವುಗಳ ಕಲ್ಪನೆಯೇ ಇರಲಿಲ್ಲ. ನೈತಿಕ–ಅನೈತಿಕತೆಯ ಪ್ರಶ್ನೆ ಉದ್ಭವಿಸದ ಕಾಲವದು. ಹಾಗಾಗಿ ಪ್ರಾಚೀನ ಅವಶೇಷಗಳಲ್ಲಿ ಅನೇಕ ನಗ್ನಚಿತ್ರಗಳು ದೊರೆತಿವೆ. ದಷ್ಟಪುಷ್ಟವಾಗಿ ಇರುವ ಸ್ತ್ರೀ ಚಿತ್ರಗಳು ನಕಾರಾತ್ಮಕ ಮನೋಭಾವನೆ ಉಂಟುಮಾಡುವುದಕ್ಕಲ್ಲ. ಬದಲಾಗಿ ಒಂದು ಜೀವಪೋಷಣೆಯ ಸಂಕೇತವಾಗಿ ಚಿತ್ರಿಸಿರುವಂಥವು. ಶೀಲದ ಪ್ರಶ್ನೆ ಉದ್ಭವವಾಗಿಲ್ಲವೆಂದ ಮೇಲೆ ಸ್ತ್ರೀಯರ ಮೇಲೆ ಲೈಂಗಿಕ ಹಿಡಿತವಿರಲಿಲ್ಲ. ಅರಂಭದಲ್ಲಿ ಸಾಮಾನ್ಯವೆನಿಸಿದರೂ ಗತಿಸುತ್ತಿರುವ ಕಾಲದ ಚಲನೆಯಲ್ಲಿ ಮುಂದೊಂದು ದಿನ ಒಂದು ರೀತಿಯ ಈರ್ಷೆನಗೆ ಕಾರಣವಾಯಿತು. ದೈಹಿಕ ಸಾಮರ್ಥ್ಯದಲ್ಲಿ ಹೆಣ್ಣಿಗಿಂತಲೂ ಬಲಿಷ್ಠನಾಗಿದ್ದರೂ ಸಂತಾನ ಕ್ರಿಯೆಯ ಅರಿವಿಲ್ಲದೆ ನಿಷ್ಕ್ರಿಯನಾಗಿದ್ದನು.

ಸ್ತ್ರೀ ಕೃಷಿಯನ್ನು ಆವಿಷ್ಕರಿಸಿದ ನಂತರದ ಹಂತ ಅಥವಾ ಬೆಳವಣಿಗೆ ಎಂದರೆ ಕೃಷಿಯ ವಿಸ್ತರಣೆ ಮತ್ತು ಅದಕ್ಕೆ ಸಹಾಯಕವಾಗಿದ್ದು ಕಬ್ಬಿಣದ ಶೋಧ. ಕೃಷಿಯಲ್ಲಿ ಕಬ್ಬಿಣದ ಬಳಕೆಯಿಂದ ನೇಗಿಲು ಮುಂತಾದ ಕೃಷಿ ಸಲಕರಣೆಗಳ ಬಳಕೆ ಕೃಷಿಕ್ಷೇತ್ರದಲ್ಲಿ ಹೆಚ್ಚಿನ ಆವಿಷ್ಕಾರವಾಗುವವರೆಗೂ ಅದು ಸ್ತ್ರೀ ಒಡೆತನದಲ್ಲಿತ್ತು, ಅದನ್ನು ಜೀವನಕ್ಕೆ ಬೇಕಾಗುವಷ್ಟೆ ಅವಶ್ಯಕತೆಯ ಪರಿಮಿತಿಯಲ್ಲಿ ಉತ್ಪಾದನೆ ಮಾಡಲಾಗುತ್ತಿತ್ತು. ಅದರ ಪೂರ್ತಿ ಜವಾಬ್ದಾರಿ ಸ್ತ್ರೀಯರೇ ನಿರ್ವಹಿಸಿದರು. ಕೃಷಿ ದೊಡ್ಡ ಪ್ರಮಾಣದಲ್ಲಿ ವಿಸ್ತರಿಸಬೇಕೆಂದೆನಿಸಿದಾಗ ಹೊಸ ಸಂಶೋಧನೆಯತ್ತ ಯೋಚಿಸತೊಡಗಿದ, ಅದರ ಪರಣಾಮವೇ ನೇಗಿಲು, ನೇಗಿಲಿನ ಆವಿಷ್ಕಾರ ಕೃಷಿ ವಿಸ್ತರಣೆಗೆ ದಾರಿಯಾಯಿತು. ಕೃಷಿ ಸ್ತ್ರೀಯರ ಕೈಯಿಂದ ಪುರುಷನ ಕೈಗೆ ಬಂದದ್ದು

ಈ ಹಂತದಲ್ಲೇ ಎನ್ನಬಹುದು. ಪ್ರಾಣಿಗಳನ್ನು ಪಳಗಿಸಿ, ಅವುಗಳ ಮೇಲೆ ಹಿಡಿತ ಸಾಧಿಸಿ, ತನ್ನ ಅಗತ್ಯಕ್ಕೆ ಬಳಸಿಕೊಂಡು ಉತ್ಪಾದನೆಯಲ್ಲಿ ತೊಡಗಿದನು. ಪಳಗಿಸಿದ ಪ್ರಾಣಿಗಳು ಸಾಕುಪ್ರಾಣಿಗಳಾಗಿ ಅವನ್ನಲ್ಲೇ ಉಳಿದವು. ಜೀವನ ನಿರ್ವಹಣೆಗೆ ಹೊರಗೆ ಹೋಗುವ ಗಂಡು ಅವುಗಳ ಸಾಕುವ ಹೊಣೆಗಾರಿಕೆಯನ್ನು ಸ್ತ್ರೀಯರ ಮೇಲೆ ಹಾಕಿದ. ಹಾಗಾಗಿ ಅವು ಮುಂದೊಂದು ದಿನ ಸಂಪತ್ತೆಂದು ಗಣನೆಗೆ ಬಂದವು.

ಕುಟುಂಬದಲ್ಲಿ ನೆಲೆನಿಂತ ಹೆಣ್ಣಿಗೆ ಮಕ್ಕಳ ಪೋಷಣೆಯ ನಂತರ ಬಿಡುವಿನ ವೇಳೆ ಹಲವಾರು ಆವಿಷ್ಕಾರಕ್ಕೆ ಅವಕಾಶ ಕೊಟ್ಟಿತು. ಆಹಾರ ತಯಾರಿಕೆಗೆ ಬೇಕಾಗುವ ಸಾಮಗ್ರಿಗಳ ಅವಶ್ಯಕತೆ ಅವಳಿಗಿದ್ದುದರಿಂದ ಗೃಹೋಪಯೋಗಿ ವಸ್ತುಗಳ ತಯಾರಿಕೆ ಅವಳದೇ ಎನ್ನಬಹುದು. ನೆಯ್ಗೆ, ಮಡಕೆ ತಯಾರಿಕೆ ಇಂಥ ಗೃಹ ಕೈಗಾರಿಕೆಗಳ ಆರಂಭ ಸ್ತ್ರೀಯರಿಂದಲೇ ಆಗಿದೆ ಎಂದು ಹೇಳಬಹುದು. 'ಮಡಕೆಗಳನ್ನು ಮಾಡುವುದು, ಆರೋಗ್ಯ ರಕ್ಷಣೆ, ಗಿಡಮೂಲಿಕೆಗಳ ತಯಾರಿಕೆ, ಹಲವಾರು ವಿಷಯಗಳು ಹೆಣ್ಣಿನಿಂದಲೇ ಆರಂಭವಾದವು'(ಕಲವೀರ ಮನ್ವಾಚಾರ; ಮಾತೃದೇವತಾ ಆರಾಧನೆ, ಪುಟ ೨೪). ಈಗಲೂ ಇಂಥ ಕೆಲಸಗಳಲ್ಲಿ ಒಬ್ಬ ಪುರುಷನಿದ್ದರೆ ನಾಲ್ಕು ಜನ ಸ್ತ್ರೀಯರು ಇರುತ್ತಾರೆ. ಬೇಟೆಗಾಗಿ ಕಾಡಿನಲ್ಲಿ ಆಹಾರ ಹುಡುಕಿಕೊಂಡು ಹೋಗುವ ಮನುಷ್ಯನಿಗೆ ಇಂಥ ಕಾರ್ಯದಲ್ಲಿ ತೊಡಗಲು ಸಮಯವಿರುವುದಿಲ್ಲ. ನಂತರ ಕೃಷಿಯಲ್ಲಿ ನಿರತನಾದಾಗಲೂ ಇದಕ್ಕೆ ಹೊರತಾಗಲಿಲ್ಲ. ಅವಳ ಒಂದೊಂದು ಆವಿಷ್ಕಾರದ ಮೇಲೂ ಅವಳೇ ಹಿಡಿತ ಹೊಂದಿ ಅವುಗಳಿಗೆ ಬಾಧ್ಯಳಾದಳು. ಈ ಬಾಧ್ಯಸ್ಥಿಕೆ, ಯಜಮಾನಿಕೆಯಾಯಿತು. ಕುಟುಂಬ ಕಟ್ಟಿದ ಅವಳಿಗೆ ಸಮಾಜ ಕಟ್ಟುವುದು ಅಸಾಧ್ಯವಾಗದಾಯಿತು.

ಸ್ತ್ರೀ ಈ ಎಲ್ಲ ಪ್ರಧಾನಘಟ್ಟಗಳಲ್ಲಿ ತಾನು ಪ್ರಧಾನವಾಗಿ ಉಳಿದ್ದದ್ದು, ಎಲ್ಲ ಕ್ಷೇತ್ರಗಳ ಮೇಲಿನ ಹಿಡಿತ ಅವಳ ನಿರ್ವಹಣೆಯಲ್ಲಿದ್ದ ಕಾರಣಕ್ಕೆ ಅವೆಲ್ಲ ಅವಳಿಗೆ ಅನ್ಯರಿಂದ ಬಂದಂಥವಲ್ಲ. ಪುರುಷ ಪ್ರಪಂಚದಿಂದ ಕಿತ್ತುಕೊಂಡಂಥವಲ್ಲ. ಇದು ಅವಳ ಅಂತಃಶಕ್ತಿ ಕ್ರಿಯೆಯಾಗಿದೆ. ಅವಳಲಿದ್ದ ಕರ್ತೃತ್ವಶಕ್ತಿ ಕಾರಣಕ್ಕೆ ವ್ಯವಸ್ಥೆ ಮೇಲೆ ಹಿಡಿತ ಸಾಧಿಸುವುದರ ಮೂಲಕ ಎಲ್ಲ ಕ್ಷೇತ್ರಗಳು ಅವಳ ಆಧೀನದಲ್ಲಿ ಉಳಿಯಲು ಸಾಧ್ಯವಾಯಿತು. ಕೃಷಿ ಸಂಶೋಧನೆ ಆರ್ಥಿಕ ವ್ಯವಸ್ಥೆಯ ಮೇಲೆ ಹಿಡಿತ ಹೊಂದುವಂತೆ ಮಾಡಿದರೆ, ಅವಳು ಮಾತೃತ್ವದಿಂದ ಮಾತೆಯಾಗಿ, ಆಗ ನಡೆಯುವ ಅಂತರ್‌ಕ್ರಿಯೆಯಿಂದ ಶಕ್ತಿ ಸ್ವರೂಪಳಾಗಿ ಗೋಚರಿಸಿದ್ದು ಧರ್ಮದ ಆದಿ ಮತ್ತು ಅಧಿದೇವತೆಯನ್ನಾಗಿ ಸ್ವೀಕರಿಸುವುದಕ್ಕೆ ಪುರುಷ ಜಗತ್ತಿಗೆ ಸಕಾರಣವಾಯಿತು. ಕುಟುಂಬ ಕಟ್ಟಿದ ಅವಳಿಗೆ ಊರು, ಸಮಾಜ ಕಟ್ಟುವುದು ತಂತಾನೆ ಜರಗಿತು. ಅವುಗಳ ಮೇಲೆ ಒಡೆತನ ಹೊಂದುವಂತಹ ಹೊಣೆಗಾರಿಕೆ ಅವಳಲ್ಲಿ ಅದಾಗಿಯೇ ಬಂದುದು. ಇದೊಂದು ವ್ಯವಸ್ಥೆಯೆಂಬ ಪರಿಜ್ಞಾನ ಬರುವುದಕ್ಕಿಂತ ಮುಂಚೆ, ಹೆಣ್ಣು ಪ್ರಧಾನಳಾಗಿ ಗಂಡು ಅವಳ ಯಾಜಮಾನ್ಯವನ್ನು ಒಪ್ಪಿಕೊಂಡು ಆಗಿತ್ತೆನ್ನಬಹುದು. ಅಡುಗೆ

ಮನೆ, ಅಥವಾ ಮನೆ ಎಂಬುದು ಒಂದು ಕಾರ್ಯಾಗಾರ. ಅದರೊಳಗಿರುವ ಅವಳಿಗೆ ಆರ್ಥಿಕತೆ ಮೂಲಗಳು ತನ್ನ ಸುತ್ತಮುತ್ತಲೇ ಇದ್ದರೂ ಅವು ವ್ಯಾಪಾರಿ ಪ್ರವೃತ್ತಿಗಿಳಿದಿರಲಿಲ್ಲವೆಂದರೆ ಅದಕ್ಕೆ ಸ್ತ್ರೀ ಒಡೆತನ ಕಾರಣ. ಅಲ್ಲಿ ಉತ್ಪಾದನೆ ಜೀವನಾವಶ್ಯಕತೆಯನ್ನು ಮಾತ್ರ ಅವಲಂಬಿಸಿತ್ತೆನ್ನಬಹುದು. ಹಾಗೆ ಮಾತೃತ್ವವೆನ್ನುವುದು ಸ್ತ್ರೀಗೆ ಜೀವ ಉತ್ಪಾದನೆಯ ಸಹಜಸ್ಥಿತಿ ಎನ್ನಬೇಕೆ ಹೊರತು ಅದನ್ನೊಂದು ಕ್ರಿಯೆ ಎನ್ನುವಂತಿಲ್ಲ. ಕ್ರಿಯೆ ಕೆಲಸದ ರೂಪ ತಾಳುತ್ತದೆ. ಅವಳು ಅದನ್ನು ಎಂದೂ ಯಾವ ಕಾಲಕ್ಕೂ ಕೆಲಸವೆಂದು ಬಗೆದಿಲ್ಲ. ಹಾಗೆ ತಾನು ಬೆಳೆದ ಕೃಷಿ ಉತ್ಪನ್ನವನ್ನು ವ್ಯಾಪಾರಕ್ಕಿಳಿಸಿಲ್ಲವೆನ್ನಬಹುದು. ಆದರೆ ಅದರ ಒಡೆತನ ಅವಳಿಗೆ ಸೇರಿದ್ದೆನ್ನುವುದರಲ್ಲಿ ಯಾವುದೇ ಸಂದೇಹವಿಲ್ಲ.

ಮಾತೃನೆಲೆಯಾಗಿರುವ ಹೆಣ್ಣು ಪುರುಷನಿಗೆ ದೈವಸ್ವರೂಪಳಾಗಿ ಕಂಡಿರಬೇಕು. ಅವಳನ್ನು ಪ್ರಕೃತಿ ಏರಿಳಿತದಲ್ಲಿ ಸಮೀಕರಿಸಿದ ಉಗ್ರ ಅಥವಾ ಸೌಮ್ಯ ರೂಪವಾಗಿರಬಹುದು. ಹೆಣ್ಣಿನ ಆವೇಶವನ್ನು ಹತ್ತಿರದಿಂದ ಕಂಡ ಗಂಡು ತನ್ನಲ್ಲಿರುವುದಕ್ಕಿಂತಲೂ ಅವಳನ್ನು ಭಯಂಕರ ರೂಪದಲ್ಲಿ ನೋಡಿದ್ದ. ಇಂದಿಗೂ ಶೀಲದ ಪ್ರಶ್ನೆ ಬಂದಾಗ ಹೆಣ್ಣಿಗೆ 'ಅವಳು ಬೆಂಕಿ ಇದ್ದಂತೆ, ಹತ್ತಿರ ಹೋದರೆ ಸುಟ್ಟು ಬಿಡುತ್ತೀರಿ' ಎನ್ನುವ ಎಚ್ಚರಿಕೆಯ ಮಾತನ್ನು ಕೇಳಿದ್ದೇವೆ. ಭಯಂಕರ ರೂಪದಲ್ಲಿ ಎಲ್ಲಾದರೂ ಬೆಂಕಿ ಹೊತ್ತಿಕೊಂಡಾಗ ಎಲ್ಲ 'ಅಗ್ನಿಯ ಕೆನ್ನಾಲಿಗೆಗೆ ಬಲಿಯಾಯಿತು' ಎಂಬ ಮಾತನ್ನು ಹೆಣ್ಣಿನ ಕಲ್ಪನೆಯಲ್ಲಿ ಭಾವಿಸಿ ಹೇಳಲಾಗುತ್ತದೆ. ಬಲಿ ತೆಗೆದುಕೊಳ್ಳುವ ಸಂಸ್ಕೃತಿ ಶಕ್ತಿ ಆರಾಧನೆಯಲ್ಲಿ ಬರುತ್ತದೆ. ಪ್ರವಾಹದೋಪಾದಿಯಲ್ಲಿ ಬರುವ ನದಿ ಎಲ್ಲವನ್ನು ಕೊಚ್ಚಿಕೊಂಡೊಯ್ದು ತನ್ನೊಡಲಲ್ಲಿ ಅವಿತಿಟ್ಟುಕೊಳ್ಳುವುದು. ಪ್ರಳಯದೋಪಾದಿಯಲ್ಲಿ ಬರುವ ನದಿ ಸ್ವರೂಪ ಉಗ್ರರೂಪದಲ್ಲಿಯೇ ಇರುತ್ತದೆ. ಹೀಗೆ ಪ್ರಕೃತಿಯಲ್ಲಿ ಆಗಾಗ ಸಂಭವಿಸಿವ, ವಿನಾಶವನ್ನು ಹೊತ್ತು ತರುವ ಗಾಳಿ, ನೀರು, ಬೆಂಕಿ, ಇವುಗಳನ್ನು ಉಗ್ರರೂಪದಲ್ಲಿ ಕಂಡು ಅದರಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ಅವಗಳನ್ನು ಉಗ್ರ ಅಥವಾ ಶಕ್ತಿ ರೂಪದಲ್ಲಿಯೇ ಪೂಜಿಸಲು ಪ್ರಾರಂಭಿಸಿರಬಹುದು. ಆದರೆ ಅವುಗಳ ಸ್ಥಾನವನ್ನು ವೈದಿಕರು ಆಕ್ರಮಿಸಿ ಸೌಮ್ಯರೂಪದ ಗಂಡಿನ ಅಡಿಯಾಳಾಗಿ ಮಾಡಿ ಎರಡನೇ ಸ್ಥಾನಕ್ಕೆ ತಳ್ಳಿದ್ದು ದುರದೃಷ್ಟಕರ. ಈ ರೀತಿ ಪ್ರಧಾನಳಾಗಿದ್ದ ಹೆಣ್ಣು ಅಪ್ರಧಾನವಾಗುತ್ತ ಹೋದುದಕ್ಕೆ ಹಲವಾರು ಕಾರಣಗಳಿವೆ. ಪುರುಷ ನಿಧಾನವಾಗಿ ಪ್ರಧಾನ ನೆಲೆಯನ್ನು ಆಕ್ರಮಿಸಿದಂತೆ ಸ್ತ್ರೀ ಹಿಂದೆ ಹಿಂದೆ ಸರಿದಳು. ನಂತರ ಕೊನೆಗೆ ಅವನ ಯಜಮಾನ್ಯದಲ್ಲೆ ಮುಂದುವರಿದಳು.

**೨.೨. ಮಾತೃ ಪ್ರಧಾನ ವ್ಯವಸ್ಥೆಯ ಅವನತಿಗೆ ಕಾರಣಗಳು.**

ಮಾತೃಪ್ರಧಾನ ವ್ಯವಸ್ಥೆಯ ಕಾಲಘಟ್ಟದಲ್ಲಿ ಸಮಾಜ ಮತ್ತು ಕುಟುಂಬದಲ್ಲಿ ಅವಳ ಪಾತ್ರ ಪ್ರಧಾನವಾಗಿತ್ತು. ಕೃಷಿ, ಉಪಕಸಬು ಮತ್ತು ಗೃಹೋಪಯೋಗಿ ವಸ್ತುಗಳ ಸಂಶೋಧನೆಯ ಫಲವಾಗಿ ಸ್ತ್ರೀ ಪ್ರಧಾನ ಪಾತ್ರವಹಿಸಿದ್ದಳು. ಆದರೆ ಅವರಿಗೆ ದೊರೆತಿದ್ದ ಪ್ರಾಧಾನ್ಯತೆ ಬಹುಕಾಲ

ಉಳಿಯಲಿಲ್ಲ. ಅವರ ಸಂಶೋಧನೆಯ ಕ್ಷೇತ್ರಗಳು ವ್ಯಾಪಕವಾಗಿ ಅಭಿವೃದ್ಧಿಯನ್ನು ಹೊಂದಿದಂತೆ ಅವರಿಂದ ಕೈ ತಪ್ಪಿ ಪುರುಷರ ಕೈಗೆ ಹಸ್ತಾಂತರವಾದವು. ನಂತರ ಆ ಕ್ಷೇತ್ರಗಳ ಮೇಲಿನ ಯಜಮಾನ್ಯವನ್ನು ಪುರುಷರು ಸಾಧಿಸಿ ಒಡೆತನ ಹೊಂದಿದರು. ಮಾತೃ ಪ್ರಧಾನ ವ್ಯವಸ್ಥೆ ಅವನತಿಯನ್ನು ಹೊಂದಲು ಹಲವಾರು ಸಂದಿಗ್ಧ ಕಾರಣಗಳನ್ನು, ಮತ್ತು ಹಸ್ತಾಂತರಗೊಂಡ ಸಂದರ್ಭಗಳನ್ನು ಇಲ್ಲಿ ವಿಮರ್ಶಿಸಲಾಗಿದೆ.

**೨.೨.೧. ಆರ್ಥಿಕ ಕಾರಣಗಳು**

**೨. ೨. ೧. ೧. ಆಸ್ತಿಯ ಹಕ್ಕು ಗಂಡು ಮಕ್ಕಳಿಗೆ ಮಾತ್ರ**

ಮಾತೃಪ್ರಧಾನ ವ್ಯವಸ್ಥೆಯಲ್ಲಿ ಆಸ್ತಿಯ ಒಡೆತನ ಹೆಣ್ಣಿನದು. ಈ ಕಾರಣಕ್ಕೆ ಅವಳಿಗೊಂದು ಭದ್ರತೆ ಇತ್ತು. ಇದರಿಂದ ಸ್ವಂತ ಅಸ್ತಿತ್ವ ಕಂಡುಕೊಂಡಿದ್ದಳು. ಅವಳದೇ ಶ್ರಮ ಉತ್ಪಾದನೆ. ಒಡತಿ ಎಲ್ಲ ಅವಳೇ ಆಗಿದ್ದಳು. ಆಸ್ತಿ ಒಡೆತನ ಅವಳ ಹೆಣ್ಣುಮಕ್ಕಳಿಗೆ ಹಸ್ತಾಂತರವಾಗುತ್ತಿದ್ದುದರಿಂದ ಮತ್ತೆ ಅದೇ ರೀತಿ ಸ್ವತಂತ್ರ ಅಸ್ತಿತ್ವ ತನ್ನ ಹೆಣ್ಣುಮಕ್ಕಳಿಗೆ ಮುಂದುವರಿಯುತ್ತಿತ್ತು. ಆಸ್ತಿ ಗಂಡುಮಕ್ಕಳಿಗೆ ಹಸ್ತಾಂತರವಾಗಿದ್ದೇ ಮಾತೃಪ್ರಧಾನ ವ್ಯವಸ್ಥೆಯ ಅವನತಿಗೆ ಪ್ರಮುಖ ಕಾರಣ. ಎಲ್ಲಿಯರೆಗೆ ಆಸ್ತಿ ಹೆಣ್ಣಿನ ಒಡೆತನದಲ್ಲಿತ್ತೋ ಅಲ್ಲಿಯವರೆಗೆ ಎಲ್ಲ ಹಕ್ಕನ್ನು ಹೊಂದಿದ್ದಳು. ಆಸ್ತಿ ಅವಳ ಕೈ ಬಿಟ್ಟು ಹೋದದ್ದೇ ಅಧೀನವಾಗಿ ಉಳಿಯುವಂತೆ ಮಾಡಿತು. ಅವಳು ಆಸ್ತಿ ಮೇಲೆ ಒಡೆತನವನ್ನು ಕಳೆದುಕೊಂಡಿದ್ದಕ್ಕೆ ಪ್ರಮುಖ ಕಾರಣ ಕುಟುಂಬದ ಹೊಣೆಗಾರಿಕೆ ಮತ್ತು ಮಕ್ಕಳ ಪೋಷಣೆ. ಹೀಗೆ ತನ್ನನು ತಾನು ಸಂಪೂರ್ಣವಾಗಿ ಗೃಹಕೃತ್ಯಗಳಲ್ಲಿ ತೊಡಗಿಸಿಕೊಂಡು ಕುಟುಂಬದಾಚೆ ಇರುವ ಜಗತ್ತಿನ ಬಗ್ಗೆ ಯೋಚಿಸುವುದಕ್ಕೂ ಸಮಯವಿಲ್ಲದಂತಾದಾಗ ಗಂಡಸು ನಿಧಾನವಾಗಿ ಆಸ್ತಿ, ಕುಟುಂಬದ ವ್ಯವಹಾರ, ಸಾಮಾಜಿಕ ಪ್ರಾತಿನಿಧ್ಯವನ್ನು ವಹಿಸಿಕೊಂಡು, ಹೆಣ್ಣು ನಿರ್ವಹಿಸುವ ಗೃಹಕೃತ್ಯಗಳಿಗೆ ಮೌಲ್ಯವನ್ನು ಕಟ್ಟಲಿಲ್ಲ. ಆ ಕೆಲಸ ಉತ್ಪಾದಕ ಮೌಲ್ಯವೆನಿಸದೆ ಮೌಲ್ಯರಹಿತವಾದದ್ದೆಂದು, ಹೆಣ್ಣು ನಿರ್ವಹಿಸುವ ಕೆಲಸಕ್ಕೂ ಹೆಣ್ಣಿಗೂ ಮೌಲ್ಯವಿಲ್ಲದಂತೆ ಮಾಡಿ, ಆಸ್ತಿಯ ಹಕ್ಕನ್ನು ಹೊಂದಿ ಯಾಜಮಾನ್ಯವನ್ನು ಗಳಿಸಿದ. ಗಂಡುಮಕ್ಕಳು ಮಾತ್ರ ಆಸ್ತಿ ಹಕ್ಕು ಅನುಭವಿಸುವಂತಾಗಿ, ಆದಾಯ ಕೇಂದ್ರೀಕರಣವಾಗಿ ಅದರ ಬಳಕೆ ಅಪಮೌಲ್ಯಕ್ಕೆ ದಾರಿಯಾಯಿತು. ಪಿತೃಸ್ಥಾನೀಯತೆಯಿಂದ ಬಂದ ಆಸ್ತಿಯಿಂದ ಗಂಡಸಿನ ಸ್ವಚ್ಛಂದ ಜೀವನಕ್ಕೆ ದಾರಿಯಾಯಿತು. ಕುಟುಂಬದ ಹಿಡಿತ ತಪ್ಪಿ, ಸಂಪತ್ತಿನ ಒಡೆತನ ಹೊಂದಿ ಹೆಚ್ಚು ಹೆಚ್ಚು ಅನುಕೂಲತೆಗಳನ್ನು ಬಯಸಿ ಸ್ವೇಚ್ಛೆಯಿಂದ ಕೂಡಿದ ಜೀವನಶೈಲಿಯನ್ನು ಅಳವಡಿಕೊಂಡನು. ಪುರುಷನು ಆಸ್ತಿಹಕ್ಕು ಹೊಂದುವುದರಿಂದ ಎಂಥ ಪರಿಣಾಮವಾಗುತ್ತದೆಂದು ಶ್ರೀಮತಿಯವರು ಹೀಗೆ ಉಲ್ಲೇಖಿಸುತ್ತಾರೆ. 'ಪಿತೃ ಸ್ಥಾನೀಯತೆಯಿಂದ ಬಂದ ಆಸ್ತಿಯಿಂದ ಗಂಡಸು ಲೈಂಗಿಕತೆಯಲ್ಲಿ ಲೋಲುಪನಾಗುತ್ತಾನೆ. (ಶ್ರೀಮತಿ ಎಚ್. ಎಸ್.; ಸ್ತ್ರೀವಾದ, ಪುಟ ೬೪). ದುಡಿಮೆಯ ಅಗತ್ಯವಿರದ ಕಾರಣಕ್ಕೆ

ಶ್ರಮದಲ್ಲಿ ತೊಡಗುವುದಿಲ್ಲ. ಅವನ ಮನಸ್ಸು ಹಣದ ಕೇಂದ್ರೀಕರಣ ಹೆಚ್ಚಾದಂತೆ ಹೆಚ್ಚು ಸೌಲಭ್ಯವನ್ನು ಬಯಸುವ ನಿಟ್ಟಿನಲ್ಲಿ ಸ್ತ್ರೀಯರನ್ನು ಅಗತ್ಯಕ್ಕಿಂತಲೂ ಹೆಚ್ಚು ಬಳಕೆ ಮಾಡಿಕೊಂಡು ಅವಳೊಂದು ಭೋಗದ ವಸ್ತುವಿನ ಸಾಲಿಗೆ ಸೇರುವಂತೆ ಮಾಡಿದ.

### ೨. ೨. ೧. ೨. ಸ್ತ್ರೀ ಶ್ರಮ; ಉತ್ಪಾದಕತೆಯಿಂದ-ಅನುತ್ಪಾದಕ ವಲಯಕ್ಕೆ

ಮಾತೃಪ್ರಧಾನತೆಯಲ್ಲಿ ಕುಟುಂಬದಾಚೆ ಮತ್ತು ಕುಟುಂಬದಲ್ಲಿ ಎರಡೂ ಕಡೆ ಉತ್ಪಾದಕ ವಲಯಗಳು ಸ್ತ್ರೀಯರ ಹಿಡಿತದಲ್ಲಿದ್ದವು. ಆರ್ಥಿಕವಾಗಿ ಸ್ತ್ರೀ ಸಬಲಳಾಗಿದ್ದಾಗ ಸ್ವಾತಂತ್ರ್ಯ ವಿರುತ್ತದೆ. ತೀರ್ಮಾನಗಳು ತಮ್ಮ ಪರವಾಗಿರುತ್ತವೆ. ಹಾಗಾಗಿ ಎಲ್ಲ ಕ್ಷೇತ್ರಗಳ ಮೇಲೆ ಯಾಜಮಾನ್ಯ ಸಾಧಿಸಿದ್ದಳು, ಕುಟುಂಬದಲ್ಲಿ ಹೊಣೆಗಾರಿಕೆ ಅಧಿಕವಾದಂತೆ ಕುಟುಂಬಕ್ಕೆ ಅವಳ ಶ್ರಮ ವ್ಯಯವಾಗುತ್ತಿತ್ತು. ಕುಟುಂಬದಾಚೆ ಅವಳು ಸಮಾಜೀಕರಣ ಹೊಂದದಂತೆ, ಆ ಕಡೆ ಯೋಚಿಸುವುದಕ್ಕೂ ಸಮಯವಿಲ್ಲದಂತೆ, ಕೌಟುಂಬಿಕ ವಲಯದೊಳಗೆ ಸಂಬಂಧ, ತಾಯ್ತನದ ಸುಳಿಯಲ್ಲಿ ಸಿಲುಕಿ ಆಚೆ ಬರದಂತಾಗಿದ್ದರಿಂದ ಕುಟುಂಬ ಸದಸ್ಯರ ನಡುವೆ ಸಂಬಂಧಗಳ ಭಾವನಾತ್ಮಕ ನೆಲೆ ಹುಟ್ಟಿಕೊಂಡಿತು. ಪೋಷಣೆಯ ಜವಾಬ್ದಾರಿಯಿಂದ ಅವಳು ಹೊರ ಬರದೆ ಶ್ರಮದ ಕೆಲಸದಲ್ಲಿ ಪಾಲ್ಗೊಳ್ಳದೇ ಇದ್ದುದರಿಂದ ಪುರುಷ ಅವಳ ಶ್ರಮ ಅನುತ್ಪಾದಕವೆಂದು ಅದಕ್ಕೆ ಬೆಲೆ ನಿಗದಿಪಡಿಸಲಾಗದೆ ಅನುತ್ಪಾದಕ ವಲಯದಲ್ಲಿ ಹೆಣ್ಣನ್ನು ಗುರುತಿಸಿ ಯಜಮಾನಿಕೆಗೂ ಅವಳಿಗೆ ಸಮಯವಿಲ್ಲದಿರುವಾಗ ತಾನೇ ಕುಟುಂಬದಲ್ಲಿ ಯಜಮಾನನಾಗಿ ನಿಯಂತ್ರಣ ಹೊಂದಿ ಕುಟುಂಬ ನಿರ್ವಹಣೆಯ ಹೆಸರಲ್ಲಿ ಪುರುಷ ಉತ್ಪಾದಕ ವಲಯ ತೆಗೆದುಕೊಂಡನು. ಮೇರಿ ವುಲ್ ಸ್ಟನ್ ಕ್ರಾಫ್ಟ್ ಪುರುಷ ತನ್ನನ್ನು ಬುದ್ಧಿವಂತ ಎಂದು ಗುರುತಿಸಿಕೊಂಡದ್ದು ಹೇಗೆ ಎನ್ನುತ್ತಾಳೆ. 'ಪುರುಷ ಮಹಿಳೆಗಿಂತ ಹೆಚ್ಚು ಬುದ್ಧಿವಂತ. ಆ ಕಾರಣದಿಂದಲೇ ಅವನು ಬದುಕಿನಲ್ಲಿ ತೀರ್ಮಾನಗಳು, ನಿರ್ಧಾರಗಳನ್ನು ತೆಗೆದುಕೊಳ್ಳಲು ಶಕ್ತನಾಗಿದ್ದಾನೆ ಎಂಬ ನಂಬಿಕೆ(ಮಂಗಳಾ ಪ್ರಿಯದರ್ಶಿನಿ ಡಿ.; ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಪುಟ ೬೨). ಅದು ತನ್ನ ಬಗ್ಗೆ ತಾನು ವ್ಯಕ್ತಪಡಿಸಿಕೊಂಡ ಅಭಿಪ್ರಾಯವೇ ಆಗಿದೆ. ಈ 'ನಂಬಿಕೆ' ಮತ್ತು 'ನಂಬಿಸುವಿಕೆ'ಯನ್ನು ತುಂಬಾ ಜಾಣ್ಮೆಯಿಂದ ಮಾಡಿರುವರು. ಈ ಪದವೇ ಸ್ತ್ರೀ ಕುಲವನ್ನು ಪುರುಷನಿಂದ ಮತ್ತೆ ಮತ್ತೆ ಮೋಸ ಹೋಗುವಂತೆ ಮಾಡಿದ್ದು. ಗಂಡು ತನ್ನ ಪರವಾಗಿ ತೆಗೆದುಕೊಂಡ ತೀರ್ಮಾನಗಳು ಅವಳಿಗೆ ಒಳಿತನ್ನುಂಟು ಮಾಡುವಂತಹವು ಎಂದು ಹೇಳಿ 'ನಂಬಿಸು'ತ್ತಾ ಬಂದಿರುವುದೇ ಇತಿಹಾಸದುದ್ದಕ್ಕೂ ಸ್ತ್ರೀಗೆ ಪುರುಷನಿಂದಾದ ನಂಬಿಕೆ ದ್ರೋಹ. ಅವಳನ್ನು ಭಾವನಾತ್ಮಕ ನೆಲೆಯಲ್ಲಿ ಗುರುತಿಸಿ, ತನ್ನನ್ನು ಬೌದ್ಧಿಕ ನೆಲೆಯಲ್ಲಿ ಗುರುತಿಸಿಕೊಂಡು ಉತ್ಪಾದಕ ವಲಯನ್ನಿಟ್ಟುಕೊಂಡು, ಆರ್ಥಿಕ ಶಕ್ತಿ ಹೊಂದಿ ಸಮಾಜದಲ್ಲಿ ಒಂದೊಂದಾಗಿ ಒಡೆತನ ಸಾಧಿಸಲು ಸಾಧ್ಯ ಮಾಡಿಕೊಂಡ. ಆರ್ಥಿಕ, ಸಾಮಾಜಿಕ, ರಾಜಕೀಯ ಈ ಎಲ್ಲ ಕ್ಷೇತ್ರಗಳು ಸ್ತ್ರೀಯಿಂದ ಪುರುಷನ ಒಡೆತನಕ್ಕೆ ಬಂದವು. ಇದಕ್ಕೆ ಕೊಟ್ಟ ಕಾರಣ ಭೌತಿಕ ಅಸಾಮರ್ಥ್ಯ.

೨. ೨. ೨. ಸಾಮಾಜಿಕ ಕಾರಣಗಳು

೨. ೨. ೨. ೧. ಮಾತೃತ್ವಕ್ಕೆ ನೀಡಿದ ಭಾವನಾತ್ಮಕ ಪ್ರಾಧಾನ್ಯತೆ

ಮಾತೃತ್ವ ಹೆಣ್ಣಿಗೆ ತನ್ನ ಯೌವನಾವಸ್ಥೆಯಲ್ಲಿ ಸಹಜವಾಗಿ ನಡೆಯುವಂತಹ ಒಂದು ಸ್ಥಿತಿ. ಅವಳು ಅದನ್ನು ಸಹಜವಾಗಿಯೇ ಸ್ವೀಕರಿಸಿರುವಳು. ತಾಯ್ತನದ ಅರಿವೇ ಇಲ್ಲದ ಕಾಲಕ್ಕೂ ಅವಳು ಇದನ್ನು ಸಹಜವೆಂಬಂತೆ ಭಾವಿಸಿದ್ದಳು. ಅದು ಅವಳ ದೇಹದ ಜೊತೆ ಜೊತೆಗೆ ನಡೆಯುವ ಒಂದು ಪ್ರಕ್ರಿಯೆಯಾಗಿತ್ತು. ಮತ್ತೆ ಮತ್ತೆ ಸಂಭವಿಸುವ ಋತುಚಕ್ರಗಳು ಗರ್ಭ ಧರಿಸುವಿಕೆ ಅವಳಲ್ಲಿ ಅಂಥ ವಿಶೇಷವನ್ನೇನೂ ಉಂಟುಮಾಡಲಿಲ್ಲ. ಇದು ಮಣ್ಣಿನಲ್ಲಿ ಬೀಜ ಬಿದ್ದು ಮೊಳಕೆಯೊಡೆದು ಸಸ್ಯ, ಚಿಗುರು, ಮರವಾದಷ್ಟೆ ಸಹಜ. ಆದರೆ ಪುರುಷನಿಗೆ ಅದೇ ಒಂದು ಕಾಲಕ್ಕೆ ವಿಶೇಷ ವಿಸ್ಮಯ ವಾಗಿತ್ತೆನ್ನಬಹುದು. ಆರ್ಥಿಕ ಒಡೆತನ ದೊರೆತ ಪುರುಷಪ್ರಪಂಚ ಇದೇ ಹೆಣ್ಣಿನ ತಾಯ್ತನವನ್ನು ತನಗೆ ಬೇಕಾದಂತೆ ಬಳಕೆ ಮಾಡಿಕೊಂಡಿತು. ಜೂಲಿಯೆಟ್ ಮಿಷೆಲ್ ತಾಯ್ತನದ ಕಾರಣದಿಂದ ಹೆಣ್ಣನ್ನು ನಿರ್ಬಂಧಿಸಿರುವುದನ್ನು ಹೀಗೆ ಹೇಳುತ್ತಾಳೆ. 'ಹೆಣ್ಣಿನ ವಿಶೇಷ, ವಿಶಿಷ್ಟ ಶಕ್ತಿಯಾದ ಗರ್ಭಧಾರಣೆ, ಪ್ರಸವ, ಹಾಲುಣಿಸುವಿಕೆ ಅವಳ ಬಂಧನಕ್ಕೆ ಕಾರಣವಾಗಿದ್ದು, ಪುರುಷ ಅವಳ ಮೇಲೆ ಹತೋಟಿಯನ್ನು ಹೊಂದುವ ಪ್ರಬಲ ಅಸ್ತ್ರಗಳಾಗಿವೆ(ಮಂಗಳಾಪ್ರಿಯದರ್ಶಿನಿ ಡಿ.; ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ– ಒಂದು ಪ್ರವೇಶಿಕೆ, ಪುಟ ೮೪). ಸ್ತ್ರೀಗೆ ತನ್ನ ತಾಯ್ತನದ ಬಗ್ಗೆ ಅತೀಯಾದ ಭಾವುಕತೆ ಇಲ್ಲದೇ ಹೋದರೂ ಪುರುಷ ಅತಿ ಭಾವುಕತನದಿಂದ ಅವಳನ್ನು ಹಿಡಿದಿಡುವಂತಹದಾಗಿದೆ.

ಶೋಲಮಿತಥ್ ಫೈರ್‌ಸ್ಟೋನಳು ' The dialectic of Sex' ಗ್ರಂಥದಲ್ಲಿ 'ತಾಯ್ತನ' ಕುರಿತಂತೆ 'ಸಮಾಜ ಹೆಣ್ಣಿನ 'ತಾಯ್ತನ'ಕ್ಕೆ ನೀಡಿರುವ ಅತಿಯಾದ ಭಾವುಕ ಪ್ರಾಧಾನ್ಯತೆಯೇ ಅವಳ ಬಂಧನದ ಪ್ರಮುಖ ಕಾರಣವಾಗಿದೆ. ಸದಾ ಕಾಲ ಗರ್ಭ ಧರಿಸುತ್ತ, ಮಕ್ಕಳನ್ನು ಹೆರುತ್ತ ಹಾಲುಣಿಸಿ ಅವನ್ನು ಪೋಷಿಸುವ ಮಹಿಳೆ ತನ್ನ ಬದುಕಿನ ಅತ್ಯಂತ ಕ್ರಿಯಾಶೀಲ ಕಾಲದಲ್ಲಿ ತನ್ನ ವ್ಯಕ್ತಿತ್ವವನ್ನು ಅರಳಿಸಿಕೊಳ್ಳದೆ ತಾಯ್ತನದ ಹೆಸರಿನಲ್ಲಿ ಬಂಧನಕ್ಕೊಳಗಾಗುತ್ತಾಳೆ' (ಮಂಗಳಾಪ್ರಿಯದರ್ಶಿನಿ ಡಿ.; ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ–ಒಂದು ಪ್ರವೇಶಿಕೆ, ಪುಟ ೭೬). ಹೆಣ್ಣಿನ ಯಜಮಾನಿಕೆಯ ಕಾಲದಲ್ಲಿ ಇವು ಯಾವುವೂ ಅವಳಿಗೆ ಹೊರೆ ಎನಿಸಿರಲಿಲ್ಲ. ಬಂಧನವೂ ಎನಿಸಿರಲಿಲ್ಲ. ತಾಯ್ತನದ ಜೊತೆಗೆ ಸಾರ್ವಜನಿಕವಾಗಿಯೂ ಭಾಗಿತ್ವವನ್ನು ಹೊಂದಿದ್ದಳು. ಆದರೆ ಪುರುಷ ಇದನ್ನೇ ದೌರ್ಬಲ್ಯವೆಂದು ಬಗೆದು ಅವಳನ್ನು ಎಲ್ಲ ಕ್ಷೇತ್ರಗಳಿಂದಲೂ ವಂಚಿತಳನ್ನಾಗಿ ಮಾಡಿದ. ಸ್ತ್ರೀಯನ್ನು ಬಂಧಿಸಿಡುವುದಕ್ಕೆ ಇದೊಂದು ಅವಕಾಶವಾಯಿತು. ಪುರುಷಪ್ರಧಾನ ವ್ಯವಸ್ಥೆ ಬೇಕೆಂದೇ ತಾಯ್ತನಕ್ಕೆ ಅತಿ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿ ಅದನ್ನು ಅತ್ಯಂತ ಪವಿತ್ರ, ಅದೊಂದು ಸೌಭಾಗ್ಯವೆಂಬ ಭ್ರಮೆಯನ್ನು ಹುಟ್ಟಿಸಿ, ಪೂಜ್ಯನೀಯಳೆಂದು ವಿಜೃಂಭಿಸುವುದರ ಮೂಲಕ ಹತೋಟಿಯಲ್ಲಿಟ್ಟುಕೊಳ್ಳಲು

ಹೂಡಿದ ತಂತ್ರಗಳಲ್ಲಿ ಇದೂ ಒಂದು. ತಾಯಿಯಾಗಲಾರದವಳನ್ನು ಸಮಾಜದಲ್ಲಿ ಅಷ್ಟೇ ನಿಕೃಷ್ಟವಾಗಿ ಬಿಂಬಿಸಿದರು. ಜನಪದರಂತೂ 'ಬಾಳೆಲೆಯ ಹಾಸುಂಡು ಬೀಸಿ ಒಗೆದಂಗ' ಎನ್ನುತ್ತಾರೆ.

### ೨. ೨. ೨. ೨. ಸಮಾಜದಲ್ಲಿ ಸ್ತ್ರೀಯರ ಅಪಮೌಲ್ಯ

ಅಲೆಯುವ ಬೇಟೆಗಾರಿಕೆಯಿಂದ ಒಂದು ಕಡೆ ನೆಲೆ ನಿಂತು ಕುಟುಂಬ ಮತ್ತು ಸಮಾಜ ಕಟ್ಟುವ ಮೂಲಕ ಸಂಸ್ಕೃತಿಯನ್ನು ಕಟ್ಟಿಕೊಟ್ಟವಳು ಹೆಣ್ಣು. ಮಾತೃಪ್ರಧಾನ ವ್ಯವಸ್ಥೆಯಲ್ಲಿ ಸಮಾಜ, ಧರ್ಮ, ರಾಜಕೀಯ ಈ ಯಾವ ಕ್ಷೇತ್ರಗಳು ಸುಸಜ್ಜಿತ ನೆಲೆಗಟ್ಟನ್ನು ಹೊಂದಿರದೆ ಕಾರ್ಯರೂಪದಲ್ಲಿ ಬಂದಿರಲಿಲ್ಲ. ಇವು ಕುಟುಂಬದಾಚೆ ಜಾರಿಯಲ್ಲಿರುವ ಕ್ಷೇತ್ರಗಳು. ಇವು ಪಿತೃಪ್ರಧಾನತೆಯಲ್ಲಿ ಗಂಡಿನ ಆಳ್ವಿಕೆಯ ಕ್ಷೇತ್ರಗಳು. ಆದರೆ ಇದರ ಬೇರು ಮಾತೃ ಪ್ರಧಾನತೆಯಲ್ಲಿ ಚಾಚಿಕೊಂಡು ಪಿತೃಪ್ರಧಾನತೆಯಲ್ಲಿ ಚಿಗುರೊಡೆದಿರುವುದರಿಂದ ಬೇರು ಹೊರಜಗತ್ತಿಗೆ ಕಾಣುವುದಿಲ್ಲ. ಆ ಬೇರಿನಲ್ಲಿರುವ ಸತ್ವವನ್ನು ಹೀರಿಕೊಳ್ಳದೆ, ಪುರುಷ ಪ್ರಧಾನ ಸಮಾಜ ಹಾಕಿದ ಕೃತಕ ಪೋಷಕಾಂಶಗಳಿಂದಲೇ ಉಸಿರಾಡುತ್ತಿದೆ. ಅದು ಬೇರಿನಲ್ಲಿರುವ ಸತ್ವವನ್ನು ಹೀರಿಕೊಂಡಿದ್ದಾಗಿದ್ದರೆ ಖಂಡಿತಾ ಹೆಣ್ಣಿಗೆ ತನ್ನ ಸಮಾನ ಸ್ಥಾನ ಕಲ್ಪಿಸುತ್ತಿದ್ದನು. ಹೀರಿಕೊಳ್ಳುವುದೆಂದರೆ ಮಾತೃಪ್ರಧಾನ ಸಂಸ್ಕೃತಿಯ ಜೀವನಾನುಭವಗಳನ್ನು ಇಂದಿನ ರಾಜಕೀಯ ವಲಯ ಅಳವಡಿಸಿಕೊಳ್ಳಬೇಕು. ಈಗಿನ ಸ್ತ್ರೀ ಸಮುದಾಯದಲ್ಲಿ ಮಾತೃ ಪ್ರಧಾನ ಅಂಶದ ಗುಣಗಳಿವೆ. ಅವುಗಳಿಗೆ ಒಂದು ಹೊಸ ಆಯಾಮವನ್ನು ದೊರಕಿಸಿಕೊಡಬೇಕು. ರ್‍ಯಾಡಿಕಲ್ ಸ್ತ್ರೀವಾದಿಗಳು "ವೈಯಕ್ತಿಕತೆ ಕೂಡ ರಾಜಕೀಯವೇ" ಎಂಬ ಘೋಷಣೆಯನ್ನು ಕೊಟ್ಟಿದ್ದಾರೆ.

ಓಲ್ಗಾ ಅವರು ಹೆಣ್ಣಿನ ಚಿಂತನೆಗಳಿಗೆ ರಾಜಕೀಯ ವ್ಯವಸ್ಥೆಯಲ್ಲಿ ಆದ್ಯತೆ ಕೊಡಬೇಕೆಂದು ಹೀಗೆ ಹೇಳುತ್ತಾರೆ. "ಸ್ತ್ರೀಯರ ಬದುಕು, ಅವರ ಜೀವನಾನುಭವಗಳ ಸಾರವನ್ನು ರಾಜಕೀಯದಲ್ಲಿ ಉಪಯೋಗಿಸಿ ರಾಜಕೀಯಕ್ಕೆ ಒಂದು ಹೊಸ ದೃಷ್ಟಿಯನ್ನು, ಹೊಸ ಆಯಾಮವನ್ನು ಕೊಡಬೇಕು. ಆಗಲೇ ರಾಜಕೀಯ, ಸಮಾಜವನ್ನೆಲ್ಲ ಗಮನದಲ್ಲಿಟ್ಟುಕೊಂಡಂತೆ ಆಗುತ್ತದೆ" (ಸುಜ್ಞಾನಮೂರ್ತಿ ಬಿ. (ಅನು); ನಮಗೆ ಗೋಡೆಗಳಿಲ್ಲ (ಸ್ತ್ರೀವಾದ ಪರಿಚಯ), ಫೆಮಿನಿಸ್ಟ್ ಸ್ಟಡಿ ಸರ್ಕಲ್, ಪುಟ ೪೭). ಪ್ರಾಚೀನ ಕಾಲದಿಂದ ಇಂದಿನವರೆಗೂ ಸ್ತ್ರೀಯರ ವಿಚಾರಗಳಿಗೆ ರಾಜಕೀಯದಲ್ಲಿ ಪ್ರಾತಿನಿಧ್ಯ ದೊರೆತಿಲ್ಲವಾದ್ದರಿಂದ ಅಂದಿನಿಂದ ಇಂದಿನವರೆಗೂ ಸ್ತ್ರೀಯರ ಸಮಸ್ಯೆಗಳು ಅವೇ ಆಗಿವೆ. ಮತ್ತು ಆ ಸಮಸ್ಯೆಗಳು ಅದೇ ರೂಪದಲ್ಲಿ ಮುಂದುವರಿದಿವೆ. ಅದಕ್ಕೆ ಈ ಸಿದ್ಧಾಂತ ಉತ್ತರವಾಗಿ ದೊರೆತಿದೆ ಎನ್ನಬಹುದು.

ಸ್ತ್ರೀಯರನ್ನು ಅನಿರ್ಬಂಧಿತ ವಲಯದಿಂದ ನಿರ್ಬಂಧಿತಳಾಗಿ ಮಾಡುವುದಕ್ಕೆ ಮಾಡಿದ ಯೋಜನೆಗಳು ಹಲವಾರು. ಕೃಷಿ ಸ್ತ್ರೀವಲಯದಿಂದ ಪುರುಷ ಕೈಗೆ ಬರುವುದಕ್ಕೆ ಅವಳ

ಸಂತಾನೋತ್ಪತ್ತಿ ವರ್ತುಲ ಕಾರಣವಾದರೂ ಇದು ಜರುಗುವುದಕ್ಕೆ ಹಲವು ಕಾಲಘಟ್ಟಗಳೇ ಗತಿಸಿದವು. ಆ ಅವಧಿಯಲ್ಲಿ ಜರುಗಿದ ಸಂಘರ್ಷಗಳು, ಸಮುದಾಯ ವರ್ಗಗಳ ನಡುವಿನದ್ದಲ್ಲ, ಗಂಡು–ಹೆಣ್ಣಿನ ನಡುವೆ ಮಾತ್ರ ನಡೆದಿರುವಂತಹದು. ಅದು ಹಿಂಸಾರೂಪದ್ದಲ್ಲ ಮತ್ತು ವರ್ಗಾವಣೆಯಲ್ಲಿ ಸ್ತ್ರೀಯರ ನಿರಾಕರಣೆ ಇಲ್ಲ, ಪುರುಷನ ಒತ್ತಾಯವಿಲ್ಲ, ತನ್ನ ಮೇಲೆ ಬಿದ್ದ ಕೌಟುಂಬಿಕ ಒತ್ತಡವೇ ಹಸ್ತಾಂತರಿಸುವಂತೆ ಮಾಡಿತು. ಕುಟುಂಬದಲ್ಲಿ ಸಂಬಂಧಗಳಿಂದ ಅವಳಿಗೆ ಆಹಾರ ಸಂಗ್ರಹಣೆ, ಆಹಾರ ತಯಾರಿಕೆಯಂತ ವೇತನ ರಹಿತ ವೃತ್ತಿ ನಿರ್ವಹಣೆಯಿಂದ ಮೌಲ್ಯ ಕಳೆದುಕೊಂಡಳು. ಕ್ರಮೇಣ ಆರ್ಥಿಕ ಮೂಲಗಳು ಅವನ ಕೈಗೆ ಬಂದಂತೆ ಅವುಗಳ ಒಡೆತನ ಹೊಂದಿ ತನ್ನಲ್ಲೆ ಕೇಂದ್ರೀಕೃತವಾಗಿ ಮತ್ತು ಹಾಗೆ ಮುಂದುವರಿಸಿಕೊಳ್ಳುವುದರಲ್ಲಿ ಆಸಕ್ತಿ ವಹಿಸಿದ. ಅರ್ಥವ್ಯವಸ್ಥೆಯಲ್ಲಿ ಹಣ ಅಪಮೌಲ್ಯಕ್ಕೆ ಒಳಗಾದಂತೆ ಆದಾಯದ ಮೂಲಗಳನ್ನು ಪುರುಷನಿಗೆ ಒಪ್ಪಿಸಿ ಅವನೆದುರು ಅಪಮೌಲ್ಯಕ್ಕೆ ಒಳಗಾದಳು.

### ೨. ೨. ೨. ೩. ಸ್ತ್ರೀ ಸ್ವಚ್ಛಂದತೆಯಿಂದ ಪುರುಷನ ಖಾಸಗಿ ಒಡೆತನವಾದಳು

"ಮಾತೃಪ್ರಧಾನವೆನಿಸಿದ್ದ ಸಮುದಾಯಗಳು ಪಿತೃಪ್ರಧಾನವೆನಿಸಬೇಕಾದರೆ ನಿಸರ್ಗಸಹಜ ಕಾರಣಗಳು ದೊರೆಯುವ ಸಂಭವವಿರಲಿಲ್ಲ. ಈಗ ಸಂತಾನಕ್ಕೆ ಅಗೋಚರವೆನಿಸಿ ಇದ್ದ ಪಿತೃವನ್ನು ಗುರುತಿಸುವ ಆ ಹಕ್ಕನ್ನು ಸ್ಥಾಪಿಸುವ ಯತ್ನದಲ್ಲಿ ವಿವಾಹ ಕಲ್ಪನೆ ಮೂಡಿತು. ಆ ಮೂಲಕ ಹೆಣ್ಣಿನ ಲೈಂಗಿಕತೆಯ ಮೇಲೆ ಹಕ್ಕು, ಶೀಲ–ಅಶ್ಲೀಲದ ಚಿಂತನೆಗಳಿಂದ ಚಾಲನೆ ದೊರೆಯಿತು. ಮಾತೃಪ್ರಧಾನತೆ ಕಳೆದುಕೊಂಡು ಪಿತೃ ಪ್ರಧಾನತೆ ವಿಜೃಂಬಿಸಿತು"(ಶ್ರೀಮತಿ ಎಚ್. ಎಸ್.; ಗರ್ಭಾಶಯ–ಮಹಿಳೆಯ ಶಕ್ತಿ ಕೇಂದ್ರ, ಪುಟ ೮, ೯). ವಿವಾಹ ಸಂಪ್ರದಾಯ ಪೂರ್ವ ಲೈಂಗಿಕತೆ ಮುಕ್ತವಾಗಿದ್ದು, ವಿವಾಹ ಸ್ತ್ರೀಯರನ್ನು ಹಿಡಿತದಲ್ಲಿಟ್ಟುಕೊಳ್ಳಲು ಉದ್ದೇಶ ಪೂರ್ವಕವಾಗಿ ರಚನೆಯಾದಂತಹ ನಿಯಮವಾಗಿದೆ. ಸಂತಾನ ಗುರುತಿಸುವಿಕೆ ಬೇಟೆಗಾರ ಸಂಸ್ಕೃತಿಯಲ್ಲಿಲ್ಲದೆ ಹೋದರೂ, ಮಾತೃತ್ವದ ಕಲ್ಪನೆಯ ನಂತರ ಸಂತಾನವನ್ನು ಮಾತೃ ಸಂತಾನವೆಂದೇ ಗುರುತಿಸಲಾಗಿದೆ. ಅದು ಬಹುಪತಿತ್ವದ ಕಾಲಘಟ್ಟ. ಅಲ್ಲಿ ಸಂತಾನ ತಂದೆಯಿಂದ ಗುರುತಿಸಲು ಸಾಧ್ಯವಿರಲಿಲ್ಲ. ಸ್ತ್ರೀ ದೇಹದ ಮೇಲೆ ಪುರುಷನ ಒಡೆತನವಾಗಲಿ, ಗಂಡಿಗೆ ಹೆಣ್ಣು ಒಂದು ಸ್ವತ್ತಿನಂತಾಗಲಿ ಭಾವಿಸಿರಲಿಲ್ಲ. ಹೆಣ್ಣಿಗೆ ಒಬ್ಬನೇ ಗಂಡಿನೊಂದಿಗೆ ಸಂಬಂಧವೇರ್ಪಡಿಸಿಕೊಳ್ಳುವ ಅನಿವಾರ್ಯತೆಯು ಇರಲಿಲ್ಲ. ಲೈಂಗಿಕವಾಗಿ ಸ್ತ್ರೀ ಮೇಲೆ ಹಿಡಿತ ಸಾಧಿಸುವುದು ಸಾಧ್ಯವಾಗದ ಸೂಕ್ಷ್ಮ ವಿಚಾರ. ಆದರೆ ಲೈಂಗಿಕವಾಗಿ ಹಿಡಿತ ಸಾಧಿಸದೆ ಗಂಡಿಗೆ ಯಾಜಮಾನ್ಯ ಸಾಧಿಸಲು ಸಾಧ್ಯವಿಲ್ಲ. ಪುರುಷ ಒಡೆತನ ಹೊಂದುವುದಕ್ಕೆ ಬಳಸಿಕೊಂಡಿದ್ದು 'ವಿವಾಹ' ಎಂಬ ಪದ್ಧತಿ ರೂಢಿಗೆ ತರುವ ಮೂಲಕ. ಹೆಣ್ಣಿನ ಲೈಂಗಿಕ ವರ್ತನೆಯ ಮೇಲೆ ನಿಯಂತ್ರಣವನ್ನು ಹಾಕುವ ಒಂದು ತಂತ್ರವಾಗಿ ವಿವಾಹವನ್ನು ಪ್ರಯೋಗಿಸಿದ. ವಿವಾಹ ಲೈಂಗಿಕ ಸಂಬಂಧಿ ಸ್ವಾತಂತ್ರ್ಯಕ್ಕೆ ಒಂದು ಬಂಧನ. ಈ ಬಂಧನದಿಂದ ಹೊರಬರುವ ಅವಕಾಶವನ್ನು ಯಾವತ್ತೂ ನೀಡಿಲ್ಲ. ಹೆಣ್ಣಿನ ಲೈಂಗಿಕತೆ ಹೆದರಿ ಆ ನಿಟ್ಟಿನಲ್ಲಿ

ಅವಳನ್ನು ನಿಯಂತ್ರಿಸಲು ಮಾಡಿದ ಮನೋರಚನೆಗಳನ್ನು ರಚಿಸಿದ ಕುರಿತು ಮತ್ತು ಅವಳನ್ನು ಭೋಗದ ವಸ್ತುವನ್ನಾಗಿ ಭಾವಿಸಿದ ಕುರಿತು ಹೀಗೆ ಹೇಳುತ್ತಾರೆ. "ಕಾಮವು ಬದುಕಿನ ಮೂಲ ಮತ್ತು ಗುರಿಯೆಂದು ಒಪ್ಪಿಕೊಳ್ಳಲು ಬಹುಮಟ್ಟಿಗೆ ಹಿಂಜರಿಯುತ್ತೇವೆ. ಗಂಡಾಳಿಕೆಯ ಸಮಾಜಗಳು ಹೆಂಗಸರ ಲೈಂಗಿಕತೆಗೆ ಹೆದರುತ್ತವೆ. ಆದರೆ ಇದರಲ್ಲಿ ಅದಮ್ಯ ಸೆಳೆತವೂ ಇರುತ್ತದೆ. ಆದ್ದರಿಂದ ಹೆಣ್ಣನ್ನು ಗಂಡು ಕಾಮದ ಭೋಗ ವಸ್ತುವನ್ನಾಗಿ ಮತ್ತು ಅದೇ ಸಮಯದಲ್ಲಿ ನಿಯಂತ್ರಣದ ವಸ್ತುವನ್ನಾಗಿ ನೋಡಲಾಗುತ್ತದೆ"(ಶಿವಪ್ರಕಾಶ ಎಚ್. ಎಸ್.; ತಂತ್ರ, ಮಾಂತ್ರಿಕತೆಗಳ ಒಳಹೊರಗು, ಪ್ರಜಾವಾಣಿ ದಿನ ಪತ್ರಿಕೆ, ೨೭ ಸೆಪ್ಟಂಬರ್ ೨೦೧೩). ಈ ಹೇಳಿಕೆ ಅಕ್ಷರಶಃ ಸತ್ಯ ಆದರೂ ಇದನ್ನು ಬಹಿರಂಗವಾಗಿ ಯಾರೂ ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಒಪ್ಪಿಕೊಂಡರೆ ಇಡೀ ವ್ಯವಸ್ಥೆಯೇ ಬುಡಮೇಲಾಗುವುದು. ಹಾಗಾಗುವುದು ಯಾವ ಪುರುಷನಿಗೂ ಇಷ್ಟವಿಲ್ಲ.

ವಿವಾಹವು ಹೆಣ್ಣಿನ ಮೇಲಿನ ನಿಯಂತ್ರಣವನ್ನು ಸಡಿಲಗೊಳಿಸಲು ಅವಕಾಶ ನೀಡಿಲ್ಲ. ಏಕೆಂದರೆ ಅವಳು ಗಂಡಿಗೆ ಯಾವ ರೀತಿ ಪೂರಕವಾಗಿ ನಿಲ್ಲುತ್ತಾಳೆ ಎಂಬುದನ್ನು "ಕೆಲವು ಮಾದರಿಗಳಲ್ಲಿ ಅವಳು ಗಂಡಸಿಗೆ ಉತ್ಪಾದನಾ ಸಹಾಯಕಿಯಾಗಿ, ಇನ್ನೂ ಕೆಲವು ಮಾದರಿಗಳಲ್ಲಿ ಅವನ ಅನುಭೋಗದ, ವಿಲಾಸದ ಸಾಧನವಾಗಿ ನಿಲ್ಲುತ್ತಾಳೆ. ಒಟ್ಟಿನಲ್ಲಿ ವಿವಾಹ ಎಂಬ ಸಮಾಜರಚನೆಯಲ್ಲಿ ಹೆಣ್ಣು ಗಂಡಿನ ಆಸ್ತಿಯಾಗಿ ಮಾತ್ರ ಉಳಿಯುತ್ತಾಳೆ"(ಶ್ರೀಮತಿ ಎಚ್. ಎಸ್.: ಚಹರೆ, ಪುಟ ೪೫).

ಆಸ್ತಿಯ ಬಗ್ಗೆ ಖಾಸಗಿ ಪರಿಕಲ್ಪನೆ ಬಂದಂತೆ ಕ್ರಮೇಣ ಹೆಣ್ಣು ಕೂಡ ಅವನ ಖಾಸಗಿ ಆಸ್ತಿಯೆಂದು ಪರಿಗಣನೆ ಮಾಡಿದ. ಸಮಯ ಮತ್ತು ಕಾಲಕ್ಕೆ ತಕ್ಕಂತೆ ತನಗೆ ಯಾವ ರೂಪದಲ್ಲಿ ಹೆಣ್ಣು ಬೇಕೆನಿಸಿರುವಳೋ ಆ ರೂಪದಲ್ಲಿ ನೋಡಬಯಸಿದ್ದಾನೆ. ಸಂತಾನ ಮುಖ್ಯವೆನಿಸಿದಾಗ ತಾಯ್ತನ ವೈಭವೀಕರಿಸಿದ್ದಾನೆ. ಅನುಭೋಗ ವಿಲಾಸ ಬೇಕೆಂದಾಗ ಸೂಳೆಯನ್ನಾಗಿ, ದಾಸಿಯಯನ್ನಾಗಿ, ಪಾತರದವಳನ್ನಾಗಿಯೂ ಮಾಡಿದ್ದಾನೆ. ಕುಟುಂಬದಲ್ಲಿ ಬಂಧಿಸಿಡುವುದಕ್ಕಾಗಿ ಅವಳನ್ನು ಅಮೂಲ್ಯ ಸಂಪತ್ತೆಂದು ಪರಿಗಣಿಸಿದ್ದಾನೆ.

**೨. ೨. ೨. ೪. ಸ್ತ್ರೀ ನಿಯೋಗ ಸ್ಥಾನದಿಂದ–ಅನುಭೋಗ ಸ್ಥಾನಕ್ಕೆ**

ಭೂಮಿ ಮತ್ತು ಹೆಣ್ಣು ಅಭೇದ್ಯವಾಗಿ ಕಲ್ಪಿತವಾಗಿರುವಂತಹದು ಮಾತೃಸಂಸ್ಕೃತಿಯ ವೈಶಿಷ್ಟ್ಯವಾಗಿದೆ. ಹಾಗಾಗಿ ಹೆಣ್ಣು ತನ್ನಲ್ಲಡಗಿಸಿಕೊಂಡಿದ್ದ ಶಕ್ತಿ ಸಾಮರ್ಥ್ಯಗಳಿಂದ ಅವಳು ಪ್ರಕೃತಿಯಂತೆ ಶಕ್ತಿ ಪ್ರತೀಕವಾಗಿದ್ದಾಳೆ. 'ಶಕ್ತಿಯ ಕೃಪೆಗಾಗಿ ನಡೆಸುವ ಅನೇಕ ಆಚರಣೆಗಳನ್ನು, ಮಾಂತ್ರಿಕ ಕ್ರಿಯೆಗಳನ್ನು ವಿಧಿಗಳನ್ನು ಹುಟ್ಟುಹಾಕಲಾಗಿದೆ. ಇಲ್ಲೆಲ್ಲ ಹೆಣ್ಣೇ ಮುಂದೆ ನಿಂತು ಆ ಆಚರಣಾ ಪ್ರಕ್ರಿಯೆಗಳಲ್ಲಿ ನಿಯೋಗಿಯಾಗಿ–ಅನುಭೋಗಿಯಾಗಿ ಪಾತ್ರ ನಿರ್ವಹಿಸಿಕೊಂಡು ಬಂದಿದ್ದಾಳೆ'(ಶಿವಾನಂದ ವಿರಕ್ತಮಠ; ಮಹಿಳೆ ಮತ್ತು ಧರ್ಮ, ಪುಟ ೩೪). ತನ್ನಂತೆ ಬೆತ್ತಲೆಯಾಗಿರುವ ಭೂಮಿಯನ್ನು ಉಳುವಲ್ಲಿ ಅವಳಲ್ಲಿ ನಿಸರ್ಗ ಸಹಜತೆ ತೋರಿಬಂದಿದೆ.

ಜಗತ್ತು ಮತ್ತು ತಾನು ಬಿಂಬ ಪ್ರತಿಬಿಂಬದಂತೆ ಕಂಡುಬಂದಿದೆ. ಆ ಸಮುದಾಯದ ಪುರುಷರಲ್ಲಿ ತಮ್ಮ ಸ್ತ್ರೀಯರ ಬಗ್ಗೆ ಯಾವ ವಿಕೃತ ಭಾವನೆಗಳು ಮೂಡುವುದಿಲ್ಲ. ಬಹುಶಃ ಇದು ಪ್ರಕೃತಿಸಹಜವೆಂದು ಭಾವಿಸಿರುವುದಕ್ಕೆ ಇರಬೇಕು. ಒಂದು ಕಡೆ ಪ್ರಕೃತಿ ಭೂಮಿಯ ಮೇಲಿರುವ ಎಲ್ಲ ಜೀವಸಂಕುಲವನ್ನು ತನ್ನೊಡಲಲ್ಲಿಟ್ಟು ಪೋಷಿಸುತ್ತಿರುವಂತೆ, ಇನ್ನೊಂದು ಕಡೆ ಅವಳ ಮಡಿಲಲ್ಲಿ ತಾನು ತನ್ನಂತಹದೇ ಒಂದು ಜೀವವನ್ನು ಪೊಷಿಸುತ್ತಿರುವಲ್ಲಿ ನಗ್ನತೆ ಇದೆ. ಆದರೆ  ಅದು ಸೃಷ್ಟಿಯ ಪ್ರತೀಕವಾಗಿದೆ.

ಪ್ರಕೃತಿ ಯಾವಾಗಲೂ ಹೇಗೆ ಸಮೃದ್ಧವಾಗಿರುತ್ತದೆಯೋ ಹಾಗೆ ಸ್ತ್ರೀ ಕೂಡ ದೈಹಿಕವಾಗಿ ಸೃಷ್ಟಿಕ್ರಿಯೆಗೆ ಅನುಕೂಲವಾಗಲೆಂದು ದಷ್ಟಪುಷ್ಟವಾಗಿರುವ ಸಹಜ ಸ್ಥಿತಿಯದು. 'ಪುರಾತನ ಶಿಲಾಯುಗದಲ್ಲಿ(ಸುಮಾರು ಕಿ.ಪೂ. ೧೫,೦೦೦ ಪೂರ್ವದಲ್ಲಿ ಇದ್ದಿರಬಹುದಾದ ವಿಗ್ರಹಗಳು). ಯುರೋಪ್ ಒಂದರಲ್ಲಿಯೇ ನೂರಾರು ದೊರಕುತ್ತವೆ. ಇವುಗಳು ಕಲ್ಲಿನಲ್ಲಿ, ದಂತದಲ್ಲಿ, ಎಲುಬಿನಲ್ಲಿ ಮಾಡಿದ ವಿಗ್ರಹಗಳಾಗಿವೆ. ಇವು ಸಾಮಾನ್ಯವಾಗಿ ನಗ್ನವಾಗಿದ್ದು, ದೊಡ್ಡದಾದ ಸ್ತನಗಳು, ದೊಡ್ಡದಾದ ಹೊಟ್ಟೆ,(ಗರ್ಭಿಣಿಯರದ್ದಾಗಿರಬಹುದು)ಇವೆ' (ಕಲವೀರ ಮನ್ವಾಚಾರ; ಮಾತೃ ದೇವತಾ ಆರಾಧನೆ, ಪುಟ ೨೭). ಸ್ತ್ರೀ ಹೀಗಿದ್ದ ಕಾಲದಲ್ಲೂ ಅಲ್ಲಿ ಶೀಲ-ಅಶ್ಲೀಲ, ಪವಿತ್ರ-ಅಪವಿತ್ರ ಎಂಬ ನಕಾರಾತ್ಮಕ ಭಾವನೆಗಳಿರಲಿಲ್ಲ.

'ಹೆಣ್ಣಿನ ಪ್ರಜನನ ಪ್ರಕ್ರಿಯೆಯಲ್ಲಿ ಯಾವ ಅಂಗಾಂಗಗಳೂ ಅಶ್ಲೀಲ ವಿಶ್ಲೇಷಣೆಗೆ ಒಳಗಾಗಿರಲಿಲ್ಲ. ಹಾಗಾಗಿ ಪ್ರಾಚೀನ ಅವಶೇಷಗಳಾಗಿ ಅನೇಕ ಸ್ತ್ರೀಯರ ನಗ್ನಚಿತ್ರಗಳು, ಅವಳ ದೃಢಕಾಯದಲ್ಲಿ ತುಂಬು ಸ್ತನಗಳ, ದಷ್ಟಪುಷ್ಟ ನಿತಂಬ ತೊಡೆಗಳ ಶಿಲ್ಪಗಳು ಇದ್ದವು' (ಶಿವಾನಂದ ವಿರಕ್ತಮಠ; ಮಹಿಳೆ ಮತ್ತು ಧರ್ಮ, ಪುಟ ೩೪). ಇಲ್ಲಿ ಸ್ತ್ರೀ ಶಿಲ್ಪಗಳ ಬಗ್ಗೆ ಪ್ರಸ್ತಾಪಿಸುವ ಮುಖ್ಯ ಕಾರಣ ಹೆಣ್ಣು ಪ್ರಧಾನ ಸಂಸ್ಕೃತಿಯಾಗಿರುವ ಕಾಲಕ್ಕೆ ಸ್ತ್ರೀಯರ ಅಂಗಾಂಗಗಳು ತಾಯ್ತನದ ಸಂಕೇತವಾಗಿ ಕಂಡುಬಂದಿವೆ. ಆದರೆ ಮುಂದೊಂದು ದಿನ (ಪಿತೃಯಾಜಮಾನ್ಯ ಕಾಲಕ್ಕೆ) ಅವೇ ಸ್ತ್ರೀ ಅಂಗಾಂಗಗಳು ಗಂಡಿಗೆ ಕಾಮದ ಸಂಕೇತವಾಗಿ ಕಂಡುಬಂದಿರುವುದು ಹೆಣ್ಣು ಕುಲಕ್ಕೆ ದುರಂತ ಸ್ಥಿತಿ ಎಂದು ಹೇಳಬಹುದು. ಈ ಅಂಗಾಂಗಳನ್ನೇ ಕಲೆಯ ಹೆಸರಿನಲ್ಲಿ ನೃತ್ಯದಂತಹ ಪ್ರವೃತ್ತಿಗೆ ಸ್ತ್ರೀಯರನ್ನು ಒಳಪಡಿಸಿ ತಾನು ಮನರಂಜನೆಯನ್ನು ಪಡೆದ. ಇಂದಿನ ಕಾಲಘಟ್ಟದಲ್ಲೂ ಅದೇ ಮುಂದುವರಿದಿದೆ. ತಾನು ನಾಗರಿಕನೆಂದು ಹೇಳಿಕೊಳ್ಳುವ ಮಾನವ ನಡೆದುಕೊಳ್ಳುವ ಕೊಳಕು ಪ್ರವೃತ್ತಿ ಇದಾಗಿದೆ. ಸ್ತ್ರೀ ಅಂಗಾಂಗಗಳು ತಾಯ್ತನದ ಅನುಕೂಲಕ್ಕೆ ತಕ್ಕಂತೆ ರಚನೆಯಾಗಿರವುದೆಂದು ಭಾವಿಸಿಲ್ಲದಿರುವುಧು ಆದುನಿಕ ಪ್ರಪಂಚದ ಗಂಡಿನ ದೊಡ್ಡ ದುರಂತವೆಂದೇ ಹೇಳಬಹುದು. ಪ್ರಸ್ತುತ ಜಗತ್ತಿನ ವಿಕೃತ ಭಾವನೆಗಳನ್ನು ನಾವು ನೋಡಿದಾಗ ಅವು ಮಾನವೀಯತೆಯ ಸಹಜತ್ವವನ್ನು ಮರೆತ ಸ್ಥಿತಿ ಎನ್ನಬಹುದು. ಏಕೆಂದರೆ ಆದಿವಾಸಿ ಮಾನವನಲ್ಲಿದ್ದ ಮಾನವೀಯ ಮೌಲ್ಯಗಳು ಇವನಲ್ಲಿ ಏಕಿಲ್ಲವಾಗಿವೆ?

ಹೆಣ್ಣಿಗೆ ಮಾತ್ರ ಮಾಡಲಾದ ವಿವಾಹ ನಿಯಮಗಳು ಪುರುಷನಿಗೆ ಅನ್ವಯಿಸಿ ಹೇಳಲಿಲ್ಲವಾದ್ದರಿಂದ ಸ್ತ್ರೀಗೆ ಬಂಧನವಾದರೆ ಪುರುಷನಿಗೆ ಸ್ವೇಚ್ಛೆಯಾಯಿತು. ಅವಳಿಗೆ ಹೇಳಿದ ಕಡ್ಡಾಯ ಏಕಪತಿತ್ವದಂತೆಯೇ ಪುರುಷನಿಗೆ ಏಕ ಪತ್ನಿತ್ವ ಕಡ್ಡಾಯ ಪಾಲನೆ ಹೇಳಲಿಲ್ಲ. ಸ್ತ್ರೀಯನ್ನು ನಿರ್ಬಂಧದಲ್ಲಿಟ್ಟು, ಪುರುಷನನ್ನು ಸ್ವತಂತ್ರವಾಗಿರಿಸಲಾಯಿತು. ಬಹುಪತ್ನಿತ್ವ, ಸತಿಮರಣದ ನಂತರ ಮರುವಿವಾಹ, ಧರ್ಮಶಾಸ್ತ್ರದಲ್ಲಿ ಕೊಟ್ಟಿರುವ ಅವಕಾಶಗಳಾಗಿವೆ. ಇವನ್ನು ಹೊರತುಪಡಿಸಿ ವೇಶ್ಯೆಯರನ್ನು ಹೊಂದಬಹುದಿತ್ತು. ಅದು ಧರ್ಮ ಬಾಹಿರವಾಗುವುದೋ, ಅಥವಾ ಧರ್ಮದ ಚೌಕಟ್ಟಿನಲ್ಲಿ ಬರುವುದೋ ತಿಳಿದಿಲ್ಲ, ಧರ್ಮಬಾಹಿರವಾಗಿದ್ದರೆ ಅದಕ್ಕೆ ಶಿಕ್ಷೆಯಾಗದಿರುವುದು ಏನನ್ನು ಹೇಳುತ್ತದೆ. ತಾವೇ ಬರೆದ ಧರ್ಮಶಾಸ್ತ್ರ ಇಂಥ ಸಂದಿಗ್ಧ ಪ್ರಶ್ನೆಗೆ ಎಡೆಮಾಡಿಕೊಡುತ್ತದೆ. ಬಹುಪತಿತ್ವ ಮಾತೃಪ್ರಧಾನತೆಯಲ್ಲಿ ಸಹಜ, ಮತ್ತೆ ಅದೇ ಧರ್ಮವಾಗಿತ್ತು. ಅಲ್ಲಿ ಸಂತಾನೋತ್ಪತ್ತಿ ಸಹಜಕ್ರಿಯೆ ಮುಖ್ಯವಾಗಿತ್ತು. ಪುರುಷನಿಗೂ ಕೂಡ ಅದು ಸಹಜವಾಗಿ ತೋರುತ್ತಿತ್ತು. ಆದರೆ ಪುರುಷಪ್ರಧಾನ ಸಮಾಜದಲ್ಲಿ ಅವಳಿಗೆ ನಿಯಮಗಳ ಪಾಲನೆ ಕಡ್ಡಾಯವಾಗಿತ್ತು. ನಿರ್ಬಂಧದ ಹಿಂದಿರುವ ಮುಖ್ಯ ಉದ್ದೇಶ ಸ್ತ್ರೀಯರ ಮೇಲೆ ನಿಯಂತ್ರಣ ಹೇರುವುದಾಗಿತ್ತೆನ್ನಬಹುದು.

ಸ್ತ್ರೀಯನ್ನು ವಿವಾಹ ಬಂಧನದಲ್ಲಿರಿಸಿ ತನ್ನ ಭೋಗಕ್ಕಾಗಿ ವಿವಿಧ ಸಂಪ್ರದಾಯಗಳನ್ನು ಹುಟ್ಟು ಹಾಕಿದ. ಅದರಲ್ಲಿ ವೇಶ್ಯೆಯರು, ಗಣಿಕೆಯರಂತಹ ಹೆಣ್ಣುಗಳಿಗೆ ವಿವಾಹ ಬಂಧನದಿಂದ ಆಚೆ ಇರುವಂತೆ ಮಾಡಿ, ಅಸಂಖ್ಯಾತ ಸ್ತ್ರೀಯರನ್ನು ಒಂದೇ ಸಂಪ್ರದಾಯದಡಿ ಲೈಂಗಿಕವಾಗಿ ಅವರ ಮೇಲೆ ಹಿಡಿತ ಸಾಧಿಸಿ ಬಂಧನದಲ್ಲಿರಿಸಿದರು. ವೇಶ್ಯೆಯರಾದರೂ ಅವರಿಗೂ ಸ್ವಾತಂತ್ರ್ಯವಿರಲಿಲ್ಲ.

ಇಲ್ಲಿ ಹೆಂಡತಿಯಾದವಳನ್ನು ನೈತಿಕ ನೆಲೆಗಟ್ಟಿನಲ್ಲಿರುವಂತೆ ಇಚ್ಛಿಸುತ್ತಾನೆ. ಅದಕ್ಕೆ ಲೋಪವಾದರೆ ಅವಳ ಮುಂದಿನ ಜೀವನದ ಆಗುಹೋಗುಗಳಿಗೆ ಅವಳೇ ಜವಾಬ್ದಾರಳಾಗುತ್ತಾಳೆ. 'ನೈತಿಕತೆಯನ್ನು ಪಾಲಿಸಲು ಹೆಂಡತಿಯರಿಗೆ ಆದೇಶಿಸಲಾಗುತ್ತದೆ. ವೇಶ್ಯೆಯರಿಗೆ ಅದನ್ನು ಮೀರಲು ಆದೇಶಿಸಲಾಗುತ್ತದೆ'(ಶ್ರೀಮತಿ, ಎಚ್. ಎಸ್.; ಸ್ತ್ರೀವಾದ, ಪುಟ ೧೪೭). ಆದೇಶ ಪಾಲಿಸುವುದು ಹೆಂಡತಿಗೆ ಅನಿವಾರ್ಯ. ಅವನ ಯಜಮಾನಿಕೆಯಲ್ಲಿ ಅವಳ ಜೀವನವಿರುತ್ತದೆ. ಆದರೆ ವೇಶ್ಯೆಯರು ಸ್ವತಂತ್ರವೆಂದು ಮೇಲ್ನೋಟಕ್ಕೆ ಅನಿಸಿದರೂ ಅವರು ಸ್ವತಂತ್ರರಲ್ಲ. ಇವರ ಆದೇಶ ಗಾಳಿಗೆ ತೂರಿ ಪುರುಷಪ್ರಧಾನ ಸಮಾಜದಲ್ಲಿ ಜೀವಿಸುವುದು ದುಸ್ತರವಾಗುತ್ತದೆ. ಅವಳಿಗೆ ಕೊಟ್ಟ ಸಂಕೇತದಿಂದ ಸಮಾಜದಲ್ಲಿ ತನ್ನನ್ನು ಗುರುತಿಸಿಕೊಳ್ಳುವುದಾಗಲಿ, ಸ್ವತಂತ್ರವಾಗಿ ಬದುಕುತ್ತೇನೆನ್ನುವುದಾಗಲೀ ಸಾಧ್ಯವಿಲ್ಲ. ಹಾಗಾಗಿ ಇಲ್ಲಿ ಪತ್ನಿಯ ಜೊತೆ ಇರುವಂತೆ ಗಟ್ಟಿಯಾದ ಸಂಬಂಧವಿರುವುದಿಲ್ಲ. ಆದರೂ ಪತ್ನಿಯಂತೆ ಆದೇಶ ಪಾಲಿಸುವುದು ಅನಿವಾರ್ಯವಾಗುತ್ತದೆ. ವೇಶ್ಯಾವೃತ್ತಿಗಳಲ್ಲಿ ಅಪರಾಧಿಗಳನ್ನಾಗಿ

ಹೆಣ್ಣನ್ನೇ ಭಾವಿಸಲಾಗುತ್ತದೆ. ಪುರುಷನ ಬಲವಂತಕ್ಕೆ ವೃತ್ತಿಗಿಳಿದರೂ ಗಂಡಸರು ಅಮಾಯಕರಾಗುತ್ತಾರೆ. ಲೈಂಗಿಕತೆಗೆ ಸೆಳೆಯುವ ಕಾಮದ ಹೆಣ್ಣಾಗಿ, ವಶೀಕರಿಸಿಕೊಳ್ಳುವ, ಪುರುಷರನ್ನು ತಪ್ಪುದಾರಿಗೆಳೆಯುವ, ಸಮಾಜವನ್ನು ಕೊಳಕು ಮಾಡುವ ಕೀಳುವೃತ್ತಿಯ ಹೆಣ್ಣು ಎಂದು ಸಂಕೇತಿಸಲಾಗುತ್ತದೆ. ಸಮಾಜದಿಂದ ಪ್ರತ್ಯೇಕವಾಗಿ ಗುರುತಿಸಲಾಗುತ್ತದೆ. ಮತ್ತು ಅವರಿಗೆ ಪ್ರತ್ಯೇಕವಾಗಿಯೇ ವಾಸ್ತವ್ಯ ಕಲ್ಪಿಸಲಾಗಿರುತ್ತದೆ. ಆದರೆ ಇದು ಅವಳು ಯಾರಿಂದ ವೇಶ್ಯೆಯಾಗಿ ಉಳಿದಿರುತ್ತಾಳೆ ಎನ್ನುವುದನ್ನು ಗೌಪ್ಯವಾಗಿಟ್ಟು ಅವನ ನೈತಿಕತೆಯನ್ನು ಎತ್ತಿ ಹಿಡಿಯುವುದಾಗಿದೆ. ಹೆಂಡತಿ ಸಮಾಜದಲ್ಲಿ ಕುಟುಂಬದ ಗೌರವ ಘನತೆ ಎತ್ತಿ ಹಿಡಿಯುವುದಕೋಸ್ಕರ ಗೌಪ್ಯವನ್ನು ಕಾಪಾಡಿದರೆ, ವೇಶ್ಯೆಯರಿಗೆ ಅವರ ಆರ್ಥಿಕ ದೌರ್ಬಲ್ಯವನ್ನು ಬಳಕೆ ಮಾಡಿಕೊಂಡು ಗೌಪ್ಯವಾಗಿರುವಂತೆ ನೋಡಿಕೊಂಡಿರುತ್ತಾನೆ.

ವೇಶ್ಯೆಯರೂ ಕೂಡ ಮಾನವ ಸಮಾಜದ ಒಂದು ಭಾಗವಾಗಿದ್ದಾರೆ. ಅವರನ್ನು ವ್ಯವಸ್ಥೆಯ ಹೊರಗಿಟ್ಟು ಯೋಚಿಸುವುದು ತಪ್ಪು. ಮಾತೃಸಂಸ್ಕೃತಿಗೆ ವಿರುದ್ಧವಾದ ದಿಕ್ಕಿನಲ್ಲಿ ಈ ವ್ಯವಸ್ಥೆ ಸಾಗುತ್ತದೆ. ಹೆಣ್ಣಿನೊಂದಿಗೆ ಹೊಂದುವ ಸಂಬಂಧದಿಂದ ಮತ್ತೊಂದು ಜೀವಿಯ ಸೃಷ್ಟಿಯಲ್ಲಿ ಗಂಡು ಹೆಣ್ಣಿನ ಸಾರ್ಥಕತೆ ಇದೆ. ಅದೇ ಅವಳನ್ನು ಅನುಭೋಗದ ದೃಷ್ಟಿಯಿಂದ ನೋಡಿದಾಗ ವಸ್ತುಗಳ ಸಾಲಿಗೆ ಸೇರುತ್ತಾಳೆ. ಇದಕ್ಕೆಲ್ಲ ಕಾರಣ ಪುರುಷನಿಗೆ ದೊರೆತ ಮುಕ್ತ ಲೈಂಗಿಕತೆ, ಸ್ತ್ರೀ ವಿಷಯಾಸಕ್ತಳು ಎಂದು ನಿರ್ಧಾರಾತ್ಮಕ ವ್ಯಾಖ್ಯಾನ ನೀಡಿರುವುವು. ಆದರೆ ಇಲ್ಲಿ ಪುರುಷನ ವಿಷಯಾಸಕ್ತಿಗೆ ಬಲಿಯಾದವಳು ಹೆಣ್ಣು. ಮಾತೃಪ್ರಧಾನತೆಯಲ್ಲಿ ಸ್ತ್ರೀಯರಿಗೆ ಮುಕ್ತ ಲೈಂಗಿಕತೆ ಇದ್ದದ್ದು ಅದು ಅವರ ಅರಿವಿನ ಪರಧಿಯಾಚೆಯಲ್ಲಿ ಎಂಬುದನ್ನು ಮರೆಯುವಂತಿಲ್ಲ. ಆದರೂ ಅದು ಇದ್ದದ್ದು ಸಕಾರಾತ್ಮಕ ಕಾರಣಕ್ಕಾಗಿ. ಅದು ಸಕಾರಾತ್ಮಕ ಪರಿಣಾಮವನ್ನೇ ಉಂಟುಮಾಡಿತ್ತು. ಅಲ್ಲಿ ಲೈಂಗಿಕತೆ ಒಂದು ರೀತಿಯ ನೈಸರ್ಗಿಕ ಸಮತೋಲನವನ್ನು ಕಾಪಾಡಿಕೊಂಡು ಬಂದಿತ್ತೆನ್ನಬಹುದು. ಅಲ್ಲಿ ಹಿಡಿದಿಡುವ ಅಥವಾ ಬಂಧಿಸಿಡುವ ಅನಿವಾರ್ಯತೆ ಇರಲಿಲ್ಲ.

### ೨. ೨. ೩. ಧಾರ್ಮಿಕ ಕಾರಣಗಳು

ಧರ್ಮದ ಕಲ್ಪನೆಯೇ ಇಲ್ಲದ ಕಾಲದಲ್ಲಿ ಮನುಷ್ಯನ ಅಸ್ತಿತ್ವವಿತ್ತು. ಮನುಷ್ಯನ ಕಲ್ಪನೆಯಿಂದ ಹುಟ್ಟಿದ ದೇವರು ಧರ್ಮದ ಹೆಸರಿನಲ್ಲಿ ಭಾವನಾತ್ಮಕವಾಗಿ ಅವನನ್ನೇ ಆಳಲು ಪ್ರಾರಂಭಿಸಿತು. ದೈವದ ದೇವರ ಕಲ್ಪನೆಯ ಮೂಲರೂಪ ಪ್ರಕೃತಿ ಮತ್ತು ಪ್ರಕೃತಿ ಒಳಗೊಂಡಿರುವ ನಿಗೂಢ ವಿಸ್ಮಯಗಳು ಎಂಬುದು ಎಲ್ಲರಿಗೂ ತಿಳಿದಿರುವ ಸತ್ಯ. ಆದಿಮಾನವ ಸಂಸ್ಕೃತಿಯು ಪ್ರಕೃತಿಯ ಆರಾಧನೆಯಿಂದಲೇ ಆರಂಭವಾಯಿತು. ಪ್ರಕೃತಿಯಲ್ಲಿ ಮತ್ತು ಹೆಣ್ಣಿನಲ್ಲಿ ಸಂಭವಿಸುವ ವ್ಯತಿರಿಕ್ತಗಳ ಒಂದೇ ಸಾಪೇಕ್ಷ ಮೂಲ ಇರುವುದೆಂದು, ಇವೆರಡರ ಹಿಂದೆ ಒಂದು ಅಘೋಚರ ಶಕ್ತಿಯನ್ನು ತಾನೇ ಕಲ್ಪಿಸಿಕೊಂಡು ಅದಕ್ಕೆ ಹೆಣ್ಣಿನ ಮಾನಸಿಕ ರೂಪ ಕೊಟ್ಟು ಭೂಮಿ, ಗಾಳಿ, ನೀರು,

ಬೆಂಕಿಯನ್ನೇ ಆರಾಧಿಸಲು ಪ್ರಾರಂಭಿಸಿದ. ಆ ಆರಾಧನೆಯ ಹಿಂದೆ ಇದ್ದ ಕಾರಣ ಇಡೀ ಜೀವಕುಲಕ್ಕೆ ಸಂಭವಿಸಬಹುದಾದ ಆಪತ್ತಿನಿಂದ ಉಳಿಯುವುದಾಗಿತ್ತೇ ಹೊರತು ವೈಯಕ್ತಿಕತೆಯ ಪ್ರಶ್ನೆಯೇ ಇರಲಿಲ್ಲ. ಪ್ರಸಿದ್ಧ ತತ್ವಶಾಸ್ತ್ರಜ್ಞರಾದ ಡೇವಿಡ್ ಹೂಮ್ ಹೀಗೆ ತಮ್ಮ ವಾದ ಮಂಡಿಸಿದ್ದಾರೆ.

"ಧರ್ಮದ ನೆಲೆಯ ದೈವ ಅಥವಾ ಗಾಡ್ ಕಲ್ಪನೆ ಹಾಗೂ ಜಗತ್ತಿನ ಸೃಷ್ಟಿ–ಸ್ಥಿತಿಗಳ ಕುರಿತಾದ ಮಾನವ ಸಂಬಂಧದ ಸಂಕಥನವು ಒಂದು ದೃಷ್ಟಿಯಿಂದ ಭಯ ಮೂಲದಿಂದ ಸೃಷ್ಟಿಯಾಗಿದೆ ಎಂದು ವಾದಿಸುತ್ತಾರೆ." ೧೭೫೦ರ ದಶಕದಲ್ಲಿ ತನ್ನ The Natural History of Religion ಎಂಬ ಪ್ರಬಂಧದಲ್ಲಿ ಆತ ಮಂಡಿಸಿದ್ದಾನೆ(ಶಿವಾನಂದ ವಿರಕ್ತಮಠ; ಮಹಿಳೆ ಮತ್ತು ಧರ್ಮ, ಪುಟ ೩೦).

ಮಾನವ ಕಣ್ಣಿಗೆ ಕಾಣದ ಒಂದು ಅಭೂತಪೂರ್ವ ಕಲ್ಪನೆ ಯಾವಾಗಲೂ ಅವನಿಗೆ ಭಯ ಹುಟ್ಟಿಸುತ್ತದೆ. ಅಂಥ ಭಯದಿಂದ ಆಚೆ ಬರಲು ಒಂದು ಶಕ್ತಿ ಮೊರೆ ಹೋಗುವುದು ಅವನಿಗೆ ಅನಿವಾರ್ಯವಾಗಿರುತ್ತದೆ. ಅಂಥ ಸಂದರ್ಭದಿಂದ ಹೊರಬರಲು ಕಂಡುಕೊಂಡ ಮೂರ್ತರೂಪವೇ ದೈವವಾಗಿದೆ. 'ಹೆಣ್ಣಿನ ಅಗತ್ಯವು ಅನಿವಾರ್ಯವೆನಿಸಿದ ಆದಿಮ ಸಂಸ್ಕೃತಿಯಲ್ಲಿ ಹೆಣ್ಣೇ ದೈವವಾಗಿದ್ದಾಳೆ. ಈ ಹೆಣ್ಣುದೈವವನ್ನು ಒಲಿಸಿಕೊಳ್ಳುವ ಮಾಂತ್ರಿಕ ಆಚರಣೆಗಳೆಲ್ಲವೂ ಹೆಣ್ಣಿನ ವಾಹಕತ್ವದ ಮೂಲಕವೇ ನಡೆಯುತ್ತಿದ್ದವು'(ಶಿವಾನಂದ ವಿರಕ್ತಮಠ; ಮಹಿಳೆ ಮತ್ತು ಧರ್ಮ, ಪುಟ ೩೫). ಮಾನವ ಆರಾಧನೆಗೆ ಮೊದಲು ಮಾನಸಿಕ ರೂಪದಿಂದ ಪ್ರತಿಮೆ ರೂಪಕ್ಕೆ ಬದಲಾಗಿ ಮರದ ರೂಪದಲ್ಲಿ, ಮಣ್ಣಿನ ರೂಪದಲ್ಲಿ ಮರದ ಕೊಂಬೆಯ ರೂಪದಲ್ಲಿ ಪೂಜೆ ಮಾಡಲು ಆರಂಭಿಸಿದ. ತಾವು ಬಳಕೆ ಮಾಡುತ್ತಿರುವ ಕಲ್ಲು, ಮಣ್ಣು, ಮರಗಳೇ ಅವರ ದೇವರ ಪ್ರತಿಮೆ ರೂಪಗಳು. ಇವೇ ಅವರು ಮೊದಲು ಸ್ತ್ರೀ ದೈವಕ್ಕೆ ಕೊಟ್ಟ ರೂಪಗಳು. ಹಾಗಾಗಿ ಇಂದಿಗೂ ಶಕ್ತಿದೇವತೆಗಳು, ಗ್ರಾಮದೇವತೆಗಳು, ಹೆಣ್ಣುದೈವವಗಳೆಲ್ಲ ಮಣ್ಣು ಮತ್ತು ಮರದಿಂದ ತಯಾರಿಸಿದಂತವುಗಳೇ ಆಗಿವೆ. 'ಮಣ್ಣಿನಲ್ಲಿ, ದಂತದಲ್ಲಿ ಹಾಗೂ ಕಲ್ಲಿನಲ್ಲಿ ಮಾಡಿದ ವಿಗ್ರಹಗಳು ಆ ಕಾಲದಲ್ಲಿ ದೊರಕಿವೆ'(ಕಲವೀರ ಮನ್ವಾಚಾರ; ಮಾತೃ ದೇವತಾ ಆರಾಧನೆ, ಪುಟ ೩೩). ಪ್ರತಿಮೆ ರೂಪದಿಂದ ಸ್ತ್ರೀ ರೂಪಕ್ಕೆ ಬಂದದ್ದು ಮಾನವ ಕಲ್ಪನೆಯ ಸ್ಥಿತ್ಯಂತರದ ಸಹಜಸ್ಥಿತಿಯನ್ನು ಒಪ್ಪಿಕೊಂಡದ್ದೆನಿಸಿದರೂ ಸ್ತ್ರೀರೂಪದ ಶಕ್ತಿಯ ಆರಾಧನೆ, ಸ್ತ್ರೀ ಪ್ರಾಧಾನ್ಯತೆ ಹಿಂದೆ ಸರಿದಂತೆ ಸ್ತ್ರೀ ಶಕ್ತಿ ಆರಾಧನೆ ಹಿಂದೆ ಸರಿಯುತ್ತಾ ಹೋಯಿತು. ಮುಂದೆ ಬಂದ ವೈದಿಕರು ಸ್ತ್ರೀದೈವಗಳ ಸ್ಥಾನದಲ್ಲಿ ಪುರುಷ ದೈವಗಳನ್ನು ತಂದು ಸ್ತ್ರೀಯರನ್ನು ದಮನ ಮಾಡಿದಂತೆ ಸ್ತ್ರೀದೈವಗಳನ್ನು ದಮನ ಮಾಡಿದರು. ಕೆಲವು ಸಮುದಾಯಗಳಲ್ಲಿ ಮಾತೃ ಪ್ರಧಾನತೆ ಅಪರೂಪವಾಗಿ ಉಳಿದುಕೊಂಡಂತೆ ಸ್ತ್ರೀದೈವಗಳು ಶಕ್ತಿದೇವತೆಗಳಾಗಿ, ಗ್ರಾಮದೇವತೆಗಳಾಗಿ, ಶಿಷ್ಟದೇವತೆಗಳ ರೂಪದಲ್ಲಿ ಅವಶೇಷಗಳಂತೆ ಉಳಿದುಕೊಂಡಿವೆ.

ಧಾರ್ಮಿಕ ಅಸ್ತಿತ್ವಕ್ಕೆ ಕಾರಣವಾದ ಹೆಣ್ಣು, ವೈದಿಕ ಕಾಲದಲ್ಲಿ ಯಾಗಯಜ್ಞಗಳ ನೆಪದಲ್ಲಿ ಧರ್ಮದೊಂದಿಗೆ ಗುರುತಿಸಿಕೊಂಡಳಷ್ಟೆ. ವೇದೋತ್ತರ ಕಾಲಕ್ಕೆ ಮಹಿಳೆಯನ್ನು ಧರ್ಮ ಅಸ್ಪೃಶ್ಯಳಂತೆ ಪರಿಗಣಿಸಿತು, ಆ ಕಾಲಕ್ಕೆ ಧರ್ಮ ಕುರಿತಂತೆ ರಚನೆಯಾದ ಗ್ರಂಥಗಳು ಸ್ತ್ರೀಯರಿಗೆ ಪ್ರತ್ಯೇಕ ನಿಯಮಗಳನ್ನು ರೂಪಿಸಿತು. ಹಾಗೆಯೇ ಪುರುಷನಿಗೆ ಪ್ರತ್ಯೇಕ ನಿಯಮಗಳನ್ನು ರೂಪಿಸಿದರು. ವೇದ ಕಾಲದವರೆಗೂ ಧರ್ಮ ಕುರಿತು ಹೀಗೆ ಎಂಬ ಯಾವ ಕಲ್ಪನೆಯೂ ಇರದ ಕಾಲದಲ್ಲಿ ವರ್ಗಭೇಧ, ಲಿಂಗಭೇಧ, ಉಚ್ಚ-ನೀಚ ಈ ಯಾವ ಭೇದವೇ ಇರಲಿಲ್ಲ. ಯಾವಾಗ ಗಂಡುದೈವಗಳು ಸೃಷ್ಟಿಯಾದವೋ ಅಂದಿನಿಂದಲೇ ಈ ಎಲ್ಲದರಲ್ಲೂ ಸಂಘರ್ಷಗಳು ಹಟ್ಟಿಕೊಂಡವು. ಸ್ತ್ರೀಕುಲದ ಮೌಲ್ಯಗಳು ಕುಸಿದು ವ್ಯವಸ್ಥೆಯಲ್ಲಿ ಅವನತಿಯತ್ತ ಸಾಗಿದಳು. ಸ್ಮೃತಿ, ವೇದ, ಉಪನಿಷತ್, ಪುರಾಣಗಳೆಲ್ಲವೂ ಪುರುಷ ಪಾರುಪತ್ಯವನ್ನೇ ಹೊಂದಿದ್ದವು. ಸ್ತ್ರೀ ಉಲ್ಲೇಖವಿದ್ದರೂ ಅದು ಪುರುಷದೈವಗಳ ಕೆಳಗಿನ, ಅಥವಾ ಎರಡನೆ ಸ್ಥಾನ ನೀಡಲಾಯಿತು.

ಸ್ತ್ರೀದೈವಗಳು ಗೌಣವಾದಂತೆ ಸ್ತ್ರೀಯರಿಗೆ ಪ್ರಾತಿನಿಧ್ಯವೆಲ್ಲಿರಲು ಸಾಧ್ಯ. ಹೆಣ್ಣನ್ನು ಕಟ್ಟಿಹಾಕುವ ಅಧೀನದಲ್ಲಿಡುವಂತೆ ಧರ್ಮಸೂತ್ರಗಳು ವ್ಯಾಖ್ಯಾನಿಸಿದವು. ಸ್ತ್ರೀಯರನ್ನು ಕುರಿತು ಪ್ರತ್ಯೇಕ ವ್ಯಾಖ್ಯಾನವನ್ನೇ ನೀಡಿದವು. ಮಾತೃಪ್ರಧಾನತೆಯಲ್ಲಿ ಹೊಂದಿದ್ದ ಸಂಸ್ಕೃತಿಯ ವಿರೋಧವಾಗಿಯೇ ಧರ್ಮಗ್ರಂಥಗಳು ರಚನೆಯಾದವು. ನಾಲ್ಕು ವರ್ಣಗಳನ್ನು ಸೃಷ್ಟಿಸಿ ಮೇಲ್ವರ್ಗದವರಿಗೆ ಎಲ್ಲ ಸೌಲಭ್ಯಗಳನ್ನು ದೊರಕಿಸಿ ಕೊಟ್ಟು ಶೂದ್ರವೆಂಬ ಕೆಳವರ್ಗದ ಜಾತಿ ಸೃಷ್ಟಿಸಿ ಅವರನ್ನು ಸಮಾಜದಿಂದ ಬಹಿಷ್ಕರಿಸಿದರು. ಮಹಿಳೆಯರನ್ನು ಸೇವಾವಲಯದಲ್ಲಿರಿಸಿ ಅವರನ್ನು ಭೋಗದ ವಸ್ತುವಂತೆ ಬಿಂಬಿಸಿ, ಹಕ್ಕುಗಳನ್ನು ಕೊಡದಂತೆ ನಿಷೇಧಿಸಿ ಶೂದ್ರವರ್ಗದ ಮಾನ್ಯತೆ ನೀಡಿದರು. ಧರ್ಮಗ್ರಂಥಗಳು ಈ ರೀತಿ ರಚನೆಯಾಗಲು ಪುರುಷಪ್ರಧಾನ ಸಮಾಜ ಕಾರಣವಾಗಿದೆ. ಧರ್ಮ, ಅರ್ಥ, ಸಾಮಾಜಿಕ ರಾಜಕೀಯ ವ್ಯವಸ್ಥೆಯ ಎಲ್ಲ ಕ್ಷೇತ್ರಗಳ ಮೇಲೆ ಪುರುಷ ಹಿಡಿತ ಸಾಧಿಸಿದ ಸ್ತ್ರೀಯರ ಮೇಲೆ ಹಕ್ಕು ಚಲಾಯಿಸುವುದಕ್ಕೆ ನಿಯಂತ್ರಣ ಹೊಂದುವುದಕ್ಕೆ ಆಜ್ಞೆ ಮಾಡಿ ಬರೆಸಿದ ಕಾನೂನು ಸಂಹಿತೆಗಳಾಗಿವೆ. ಅವು ತಾವು ಬರೆದರೆ ಕಾನೂನಾಗಿ ಮುಂದೊಂದು ದಿನ ತಿದ್ದುಪಡಿಯಾಗಬಹುದು. ಆದರೆ ಅವುಗಳನ್ನು ಧರ್ಮ ಮತ್ತು ಧರ್ಮ ಪುರುಷರೆನಿಸಿಕೊಂಡ ಋಷಿಮುನಿಗಳಿಂದ ರಚನೆಯಾದರೆ 'ನಂಬಿಕೆ'ಯ ರೂಪ ತಾಳಿ ಅವುಗಳನ್ನು ಬದಲಾಯಿಸುವುದಿರಲಿ, ಪ್ರಶ್ನೆ ಮಾಡುವುದು ಸಾಧ್ಯವಿಲ್ಲ ಎಂಬ ನಿಯಮಗಳು 'ನಂಬಿಕೆ' ಮತ್ತು 'ಸಂಪ್ರದಾಯದ' ಹೆಸರಲ್ಲಿ ತಲೆತಲಾಂತರದವರೆಗೂ ಮುಂದುವರಿಯುತ್ತವೆ. ಇದೊಂದು ಪೂರ್ವಯೋಜಿತ ಕಲ್ಪನೆ ಎನ್ನುವುದಕ್ಕಿಂತ, ಯೋಚನೆ ಎನ್ನಬಹುದು. ಏಕೆಂದರೆ ಅವನಂದುಕೊಂಡಂತೆ ಆ ನಿಯಮಗಳನ್ನು ಯಾವ ಧರ್ಮ ಬಂದರೂ, ಎಂಥ ಸಮಾಜ ಸುಧಾರಕ ಜನ್ಮವೆತ್ತಿದ್ದರೂ ಬದಲಾಯಿಸಲಾಗುತ್ತಿಲ್ಲ.

ರಚನೆಯಾದ ನಿಯಮಗಳು, ನಿರ್ದಿಷ್ಟವಾದ ಪೂರ್ವಯೋಜಿತವಾದ ಸಿದ್ಧಾಂತಗಳನ್ನಿಟ್ಟುಕೊಂಡು, ಸ್ತ್ರೀಯರಿಗೆ ನೈತಿಕತೆಯನ್ನೇ ಪ್ರಧಾನ ಗುರಿಯಾಗಿರಿಸಿಕೊಂಡು ರಚನೆಗೊಂಡವು. "ಪ್ರಾಚೀನ ಮಾತೃಪ್ರಧಾನ ಪುರಾಣಗಳನ್ನೆಲ್ಲ ಧಿಕ್ಕರಿಸಿ, ವಿಚಾರ ತರ್ಕಗಳ ತಳಹದಿಯ ಮೇಲೆ ಬೆಳೆದ ಈ ವಿವಿಧ ತಾತ್ವಿಕ ಸಿದ್ಧಾಂತಗಳಿಗೆ ನೈತಿಕತೆಯೇ ಪ್ರಧಾನ ಗುರಿ. ವ್ಯಕ್ತಿ ಸ್ವಾತಂತ್ರ್ಯ, ಪಾಪಪ್ರಜ್ಞೆ, ಜ್ಞಾನದ ಹುಡುಕಾಟ, ಮೋಕ್ಷದ ಹಂಬಲ ಈ ಕಾಲದ ಧಾರ್ಮಿಕ ಚಿಂತನೆಯ ಮುಖ್ಯ ಲಕ್ಷಣಗಳು"(ಶಿವಾನಂದ ವಿರಕ್ತಮಠ; ಮಹಿಳೆ ಮತ್ತು ಧರ್ಮ, ಪುಟ ೩೯). ಇಲ್ಲಿ ಹೇಳಲಾದ ಲಕ್ಷಣಗಳು ಮಾನವನ ಜೀವನಕ್ಕೆ ಪೂರಕವಾಗುವಂಥವಲ್ಲ. ಮಾತೃಸಂಸ್ಕೃತಿಯಲ್ಲಿ ಧರ್ಮ ಮಾನವನ ಜೀವನಕ್ಕೆ ಪೂರಕವಾಗಿತ್ತು. ಅಷ್ಟೇ ಅದರ ಉದ್ದೇಶವಾಗಿತ್ತು. ಆದರೆ ಇಂದು ಧರ್ಮದಲ್ಲಿ ಸ್ವಾರ್ಥ ಮತ್ತು ಸ್ವಾಯತ್ತತೆ ಶ್ರೇಷ್ಠತೆ ಮಾತ್ರ ಮುಖ್ಯವಾಗಿದೆ.

ಕ್ರಮೇಣ ಧರ್ಮದಲ್ಲಿ ಮತ್ತಷ್ಟು ಪುರುಷ ಕೇಂದ್ರಬಿಂದುವಾಗಿ ತನ್ನ ಆಸಕ್ತಿಯ ವಿಚಾರಗಳನ್ನು ಧರ್ಮದ ನೆಲೆಯಾಗಿರಿಸಿಕೊಂಡ. "ಮಾನವ ಸಮುದಾಯದ ಒಳಿತು ಕೆಡುಕಿನ ಪ್ರಶ್ನೆಗಳು, ಪಾಪ–ಪುಣ್ಯದ ನೆಲೆಗಳು, ದೇವರ ಸರ್ವಜ್ಞತ್ವ, ಸಾವಭೌಮತ್ವ, ಸೃಷ್ಟಿಯ ನಿಯಾಮಕ ತತ್ವ, ಜಗತ್ತಿನ ನಿಯಂತ್ರಣ ತತ್ವ"(ಶಿವಾನಂದ ವಿರಕ್ತಮಠ; ಮಹಿಳೆ ಮತ್ತು ಧರ್ಮ, ಪುಟ ೩೯). ಈ ಮೇಲೆ ಉಲ್ಲೇಖಿಸಿದಂತೆ ಪಾಪಪ್ರಜ್ಞೆ, ಮೋಕ್ಷ, ಒಳಿತು–ಕೆಡುಕು, ಪಾಪ–ಪುಣ್ಯ, ಇವನ್ನೇ ಸ್ತ್ರೀಯರ ಮೇಲೆ ಅಸ್ತ್ರಗಳಂತೆ ಬಳಕೆ ಮಾಡಿಕೊಂಡರು. ಭಾವನಾತ್ಮಕವಾಗಿ ಹಿಡಿದಿಡುವ ಪ್ರಯತ್ನ ಈ ಸಿದ್ಧಾಂತಗಳಿಂದಲೇ ಮಾಡಿದ್ದು. ಸದಾ ಹೆಣ್ಣು ಅದರ ಭಯದ ನೆರಳಲ್ಲಿ, ಕತ್ತಿಯ ನೆರಳಲ್ಲಿ ಜೀವಿಸಿದಂತೆ ಇತ್ತು. ಈ ನೀತಿಗಳ ಮೇಲೆ ಮಹಾಕಾವ್ಯಗಳು ರಚನೆಯಾದ್ದರಿಂದ ಅವು ಹೆಣ್ಣಿನ ಶೀಲ, ಪಾತಿವ್ರತ್ಯ, ಪಾಪ–ಪುಣ್ಯ. ಇವುಗಳನ್ನು ತಪ್ಪಿ ನಡೆದರೆ ಅದಕ್ಕೆ ಕಾದಿರುವುದು ಸ್ವರ್ಗ–ನರಕ. ಹೀಗೆ ಯಾವುದೇ ಭೌತಿಕ ಪ್ರಪಂಚಕ್ಕೆ ಸೇರದ, ಕಲ್ಪನೆಯ ಜಗತ್ತನ್ನಿಟ್ಟುಕೊಂಡು ಅವುಗಳನ್ನೇ ಎತ್ತಿಹಿಡಿದದ್ದು ಈ ಕಾವ್ಯಗಳು.

ಹಿಂದೂ ಧರ್ಮದ ಕಾನೂನು ಸಂಹಿತೆ ಎನಿಸಿಕೊಂಡ ಮನುಸ್ಮೃತಿಯಲ್ಲಿ ಹೀಗೆ ಹೇಳಲಾಗುತ್ತದೆ. "ಹಗಲಿರುಳೂ(ಪತಿ, ಪಿತ, ಸುತ) ಮೊದಲಾದ ಪುರುಷರು ಹೆಣ್ಣುಮಕ್ಕಳನ್ನು ಅಧೀನದಲ್ಲಿಟ್ಟುಕೊಳ್ಳಬೇಕು. ಸಾಮಾನ್ಯವಾಗಿ ಸುಖ–ಭೋಗಾದಿ ವಿಷಯಾಭಿಲಾಷೆಗಳಲ್ಲಿ ಪ್ರವರ್ತಿಸುವ ಸ್ತ್ರೀಯರನ್ನು ತಮ್ಮ ಅಂಕೆಯಲ್ಲಿ ಇರಿಸಿಕೊಳ್ಳಬೇಕು" (ಶೇಷ ನವರತ್ನ(ಅನು); ಮನುಸ್ಮೃತಿ, ಅಧ್ಯಾಯ–೯, ಪುಟ ೩೮೧). ಮತ್ತೊಂದು ಸೂತ್ರದಲ್ಲಿ ಹೀಗೆ ಹೇಳಲಾಗಿದೆ. "ಸ್ತ್ರೀಯರು ಸಾಮಾನ್ಯವಾಗಿ ಚಪಲಚಿತ್ತವುಳ್ಳವರು, ವ್ಯಭಿಚಾರ ಮನಸ್ಕರು ಎಂಬುದರ ಬಗ್ಗೆ ವೇದಗಳಲ್ಲಿಯೇ ಅನೇಕ ಪ್ರಮಾಣಗಳಿವೆ. ಅವರ ವ್ಯಭಿಚಾರ ಸ್ವಭಾವದ ಲಕ್ಷಣಗಳನ್ನು ಹಾಗೂ ಆ ವ್ಯಭಿಚಾರವೆಂಬ ಪಾಪಕ್ಕೆ ಪ್ರಾಯಶ್ಚಿತಗಳಿವೆ"(ಶೇಷ ನವರತ್ನ(ಅನು): ಮನುಸ್ಮೃತಿ,

ಅಧ್ಯಾಯ–೯, ಪುಟ ೩೮೪). ಮನು ತನ್ನ ವಿಚಾರಗಳನ್ನು ಸ್ತ್ರೀಯರ ಮೇಲೆ ಶಾಸನ ರೂಪದಲ್ಲಿ ಹೇರುವಾಗ ವಿಷಯಾಭಿಲಾಷೆಯುಳ್ಳವಳೆಂದು ಅವಳ ಲೈಂಗಿಕತೆಯನ್ನೇ ಕೇಂದ್ರವಾಗಿಟ್ಟುಕೊಂಡು ಹೇಳಿರುವುದನ್ನು ನೋಡಿದರೆ ಸ್ತ್ರೀ ಪ್ರಾಬಲ್ಯ ಹತ್ತಿಕ್ಕಬೇಕೆಂದರೆ ಅವಳ ಸ್ವೇಚ್ಛ ಲೈಂಗಿಕತೆ ಮೇಲೆ ನಿಯಂತ್ರಣ ಹೇರಿದಾಗ ಮಾತ್ರ ಸಾಧ್ಯವೆಂದು ತಿಳಿದಿದ್ದನೆನಿಸುತ್ತದೆ. ಅದಕ್ಕಾಗಿ ಅವಳ ಕುಟುಂಬ ಸದಸ್ಯರಿಂದಲೇ ಅವಳಿಗೆ ಕಾವಲಿರುವಂತೆ ಹೇಳಿದ್ದಾನೆ. ಲೈಂಗಿಕತೆ ಪಾಪವೆಂದು ಹೇಳಿದ್ದಾನೆ. ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳಿದ್ದಾನೆ. ಈಗಲೂ ಕುಟುಂಬದಲ್ಲಿ ಹೆಣ್ಣಿಗೆ ಅವಳ ಸಹೋದರ, ತಂದೆ ಇಲ್ಲವೆ ಪತಿಯ ರಕ್ಷಣೆಯಿರುವುದು.

"ನಿರ್ಧಾರಕ ಸಂರಚನೆಯ ವ್ಯವಸ್ಥೆಯಲ್ಲಿ ಯಾರ ಭಾಗವಹಿಸುವಿಕೆ ಇರುವುದಿಲ್ಲವೋ ಅವರ ಅಭಿಪ್ರಾಯ, ವಿಚಾರಗಳ ಲೋಕಾನುಭವವು ಅಲ್ಲಿ ಸ್ಥಾನ ಪಡೆಯಲು ಸಾಧ್ಯವಾಗುವುದಿಲ್ಲ"(ಶಿವಾನಂದ ವಿರಕ್ತಮಠ; ಮಹಿಳೆ ಮತ್ತು ಧರ್ಮ, ಪುಟ ೧೫). ಸಮಾಜವು ಪುರುಷಪರವಾದ ಅಥವಾ ಪುರುಷ ನೆಲೆಯಲ್ಲಿ ಜಗತ್ತನ್ನು ನೋಡುತ್ತಿರುವುದರಿಂದ ಧರ್ಮದಲ್ಲಿ ನೆಲೆಗೊಂಡಿರುವ ತತ್ವಗಳು ವಿಚಾರಗಳು ಅವನ ದೃಷ್ಟಿಕೋನದಲ್ಲೇ ಇರುತ್ತವೆ. ಸ್ತ್ರೀಯರ ಅನುಪಸ್ಥಿತಿ ಇರುವುದರಿಂದ ಸ್ತ್ರೀ ವ್ಯಕ್ತಿತ್ವ ಒಳಗೊಂಡಿದ್ದ ಫಲವಂತಿಕೆ, ಪ್ರಕೃತಿಯನ್ನು ಫಲವಂತಿಕೆಯ ಮೂಲರೂಪವಾಗಿ ಆರಾಧಿಸುವುದನ್ನು, ಗ್ರಾಮದೇವತೆಗಳ ಅಭೌತಿಕ ಶಕ್ತಿ ಸ್ವರೂಪವನ್ನು ನಿರ್ಲಕ್ಷಿಸಿ, ಮಾತೃ ಪ್ರಧಾನತೆಗೆ ವಿರುದ್ಧವಾಗಿ ತತ್ವಗಳನ್ನು ಮಂಡಿಸಲಾಗಿದೆ. ಸ್ತ್ರೀ ಪ್ರಧಾನತೆ ಮುಖ್ಯ ಉದ್ದೇಶವನ್ನಾಗಿಟ್ಟುಕೊಂಡಂತೆ ಸೂತ್ರಗಳನ್ನು ರಚನೆ ಮಾಡಲಾಗಿದೆ. ತಾನು ಉಚ್ಚಸ್ಥಾನದಲ್ಲಿದ್ದು ಹೆಣ್ಣಿಗೆ ನೀಚ ನೆಲೆಗಟ್ಟಿನಲ್ಲಿ ಧರ್ಮದ ನಿಯಮಗಳನ್ನು ಕಟ್ಟಿಕೊಡಲಾಗಿದೆ. ಅವಳನ್ನು ಪರಿಚಾರಿಕೆಯಂತೆ ನಡೆಸಿಕೊಳ್ಳಬೇಕೆಂದು ಮನು ತನ್ನ ಸ್ಮೃತಿಯಲ್ಲಿ ಹೇಳಿದ್ದಾನೆ.

ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವ ನಿಯೋಜಿಯೇತ್
ಶೌಚೇ ಧರ್ಮ ನ್ನ ಪಕ್ತಾಂ ಚ ಪರಿಣಾಹ್ಯಸ್ಯ ಚಕ್ಷಣೇ

(ಶೇಷ ನವರತ್ನ(ಅನು); ಮನುಸ್ಮೃತಿ, ಪುಟ ೩೮೩). 'ಪತಿಯು ತನ್ನ ಪತ್ನಿಯನ್ನು ಧನ–ದ್ರವ್ಯ ಸಂಚಯದ ಕಾರ್ಯದಲ್ಲಿ, ಕುಟುಂಬ ನಿರ್ವಹಣೆಯ ಹಾಗೂ ಖರ್ಚಿನ ಚಟುವಟಿಕೆಗಳಲ್ಲಿ, ಶೌಚವಿಧಿಗಳಲ್ಲಿ, ಅಡುಗೆ ಮಾಡುವಲ್ಲಿ, ಧರ್ಮಕಾರ್ಯದಲ್ಲಿ, ಗೃಹಪಾತ್ರೆಗಳ ಹಾಗೂ ಯಜ್ಞಪಾತೆಗಳನ್ನು ತೊಳೆದು ಶುದ್ಧವಾಗಿರಿಸುವಲ್ಲಿ ತೊಡಗಿಸಬೇಕು'.

ತತ್ವಜ್ಞಾನಿಗಳಾಗಲಿ, ಪಂಡಿತೋತ್ತಮರಾಗಲಿ ಸಮಾಜ ಸೂತ್ರಗಳನ್ನಾಗಲಿ, ಧರ್ಮನೀತಿಗಳನ್ನಾಗಲಿ ರೂಪಿಸಲಿಲ್ಲ. ಆದರೂ ಮಾತೃಸತ್ತೆ ವರ್ಗ ಮತ್ತು ಜಾತಿರಹಿತ ಸಮಾಜವಾಗಿತ್ತು. ಆ ಸಮಾಜದಲ್ಲಿ ಯಾವ ನೀತಿ ನಿಯಮಗಳಾಗಲಿ, ಕಾನೂನು ಕಟ್ಟಳೆಗಳಾಗಲಿ ಇರಲಿಲ್ಲವಾದರೂ ಮನುಷ್ಯ, ಮನುಷ್ಯನನ್ನೇ ಶೋಷಣೆ ಮಾಡಲಿಲ್ಲ. ಆದರೆ ಬೌದ್ಧಿಕ ವಲಯವೆಂದು ಗುರುತಿಸಿಕೊಂಡ ಪುರುಷ ಪ್ರಪಂಚದಲ್ಲೇ ವರ್ಗ, ಜಾತಿ, ಧರ್ಮಗಳ

ನಡುವೆ ಸಂಘರ್ಷ ಪ್ರಾರಂಭವಾಗಿದ್ದು. ಮಾತೃ ಪ್ರಧಾನತೆಯಲ್ಲಿ ಹಸಿವು ನೀಗಿಸಿಕೊಳ್ಳುವುದು ಮಾತ್ರ ಮುಖ್ಯ ಉದ್ದೇಶವಾಗಿತ್ತು. ದಾಸ್ತಾನು ಮಾಡಬೇಕೆಂಬ ದುರುದ್ದೇಶವೂ ಇರಲಿಲ್ಲ. ಇಂದು ನಾವೆಲ್ಲರೂ ಇಷ್ಟಪಡುವ ಅಂದಿನ ಪ್ರಾಣಿ ಪ್ರಪಂಚವಾಗಿತ್ತೆನ್ನಬಹುದು.

ಮನು ಸ್ತ್ರೀಯನ್ನು ಸಮಾಜದ ಚಿಕ್ಕ ಘಟಕ ಕುಟುಂಬದಿಂದ ಹಿಡಿದು ಎಲ್ಲ ಕಡೆಯಲ್ಲೂ ಎರಡನೇ ದರ್ಜೆಯಲ್ಲಿ, ಅದೂ ಸೇವೆಗಾಗಿರುವಳೆಂದು ಅವಳು ಪುರುಷನಿಗೆ ಸಹಾಯಕಿಯಾಗಿರುವಂತೆ ನಿರ್ದೇಶಿಸಿದ್ದಾನೆ. ಸ್ತ್ರೀ ಪುರುಷ ನಿರ್ವಹಿಸುವ ಯಾಜಮಾನ್ಯದಲ್ಲಿ ಗೃಹಿಣಿಗೆ ದೊರಕಬೇಕಾದಷ್ಟು ಗೌರವವನ್ನು ಕೊಡಲಿಲ್ಲವೆನ್ನಬಹುದು. ಏಕೆಂದರೆ ಅವನು ಒಡೆಯನಾಗಿರುವಲ್ಲೆಲ್ಲ ಅವಳು ಆಳಾಗಿರಬೇಕು. ಯಾವ ಕಾರ್ಯಕ್ಕೂ ಯಜಮಾನಿಕೆಯನ್ನು ವಹಿಸಿಕೊಡಬೇಕೆಂದು ಹೇಳಲಿಲ್ಲ. ಸಮಾಜದಲ್ಲಿ ಇರದೇ ಹೋದರೂ ಕುಟುಂಬದಲ್ಲಾದರೂ ಅಧಿಕಾರ, ಸ್ವಾತಂತ್ರ್ಯ ದೊರೆತದ್ದಾಗಿದ್ದರೆ ಅವಳಿಗಾಗುವ ಕೌಟುಂಬಿಕ ಶೋಷಣೆಯಾದರೂ ನಿಲ್ಲುತ್ತಿತ್ತೇನೋ ಎಂದೆನಿಸುತ್ತದೆ.

### ೨. ೩. ಮಾತೃದೇವತಾ ಆರಾಧನೆ

'ಮಾತೃದೇವತಾ ಆರಾಧನೆ' ಶೀರ್ಷಿಕೆಯೇ ಒಳಗೊಂಡಿರುವಂತೆ ಹೆಣ್ಣು ಮಾತೃಸ್ವರೂಪ, ಮಾತೃದೇವತಾ ಸ್ವರೂಪ, ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣು ದೇವತೆ, ಮಾತೆ; ಶಕ್ತಿ ಎಲ್ಲವೂ ಆಗಿರುವಳು. ಇಲ್ಲಿ ಜನನಿ ಮತ್ತು ಭೂಮಿಗೂ ಇರುವ ಬಾಂಧವ್ಯ ಅಂತಹದು, ಆ ಬಾಂಧವ್ಯವೇ ಮಾತೃಪ್ರಧಾನತೆ, ಮಾತೃದೇವತಾ ಆರಾಧನೆ. ಭಾರತದಲ್ಲಷ್ಟೆ ಅಲ್ಲದೆ ಇಡೀ ಜಗತ್ತಿನಲ್ಲೆ ಹೆಣ್ಣು ಶಕ್ತಿಸ್ವರೂಪಿಣಿಯಾಗಿ ಪೂಜೆಗೊಂಡಿದ್ದರೂ ಭಾರತದಲ್ಲಿ ಮಾತ್ರ ಈ ಸಂಸ್ಕೃತಿ ವಿಭಿನ್ನ ರೂಪದ ಆಚರಣೆಯಲ್ಲಿ ಉಳಿದುಕೊಂಡು ಬಂದಿದೆ. ಅದಕ್ಕೆ ಮಹಿಳೆಯೇ ಕಾರಣವೆನ್ನಬಹುದು. ಈ ಸಂಸ್ಕೃತಿಯ ಹೆಣ್ಣುಮಕ್ಕಳ ಮೇಲೆ ಜಗತ್ತಿನ ಯಾವುದೇ ಸಂಸ್ಕೃತಿ ದಾಳಿ ಮಾಡಿದರೂ ಅವಳು ಮತ್ತೆ ಮತ್ತೆ ಮೈಕೊಡವಿ ನಿಂತಿರುವಳು. ಕಾರಣ ಭಾರತದಲ್ಲಿ ಅದರ ಬಿಳಲುಗಳು ಹೆಣ್ಣಿನ ಅಸ್ಮಿತೆಯೊಂದಿಗೆ ಆರಂಭವಾಗಿವೆ. ಭಾರತದ ವಿವಿಧ ಸಮುದಾಯಗಳು ಮಾತೃ ಆರಾಧನೆಯನ್ನು ಬೇರೆ ಬೇರೆ ರೂಪದಲ್ಲಿ ಅಲ್ಪ ಬದಲಾವಣೆ ಯೊಂದಿಗೆ ಆಚರಣೆಯನ್ನು ಮುಂದುವರಿಸಿಕೊಂಡು ಬಂದಿವೆ. ನಾವು ಎಷ್ಟೆ ನಗರೀಕರಣ ಹೊಂದಿದರೂ ಊರನ್ನು ರಕ್ಷಿಸುವ ಗ್ರಾಮದೇವತೆಯ ರೂಪದಲ್ಲೋ, ಎಲ್ಲರನ್ನು ರಕ್ಷಿಸುವ ದುರ್ಗೆ, ಕಾಳಿ ಅವರವರ ಮಾನಸಿಕ ರೂಪದಂತೆ ದೇವತೆಯನ್ನು ಸೃಷ್ಟಿಸಿ ಇಂದಿಗೂ ಆರಾಧಿಸುತ್ತಾ ಬಂದಿದ್ದಾರೆ. ಪುರುಷದೈವಗಳಿಲ್ಲದ ಊರುಗಳಿವೆ ಹೊರತು ಸ್ತ್ರೀದೈವಗಳಿಲ್ಲದ ಊರುಗಳೇ ಇಲ್ಲವೆಂದು ಖಚಿತಾಗಿ ಹೇಳಬಹುದು.

ಮಾನವ ಮೊದಲು ತಾನು ಕಂಡು ಅನುಭವಿಸಿದ ಅನುಭವಗಳ ಭಾವಾಭಿವ್ಯಕ್ತಿಯನ್ನು ಭಾಷೆಯ ಮೂಲಕ ಮಾಡಿರಬಹುದಾದರೂ ಅದು ದಾಖಲಾಗಿ ಉಳಿಯುವಂತಹದಲ್ಲ.

ತನ್ನ ಅನಿಸಿಕೆಯ ಅಭಿವ್ಯಕ್ತ ಮಾಧ್ಯಮವನ್ನಾಗಿ ಬಳಸಿಕೊಂಡಿದ್ದು ಚಿತ್ರ ಬಿಡಿಸುವುದನ್ನು. ಅವರ ಜೀವಿತಾವಧಿಯಲ್ಲಿ ಪ್ರಾಣಿಗಳ ಪ್ರಾಬಲ್ಯವೇ ಹೆಚ್ಚು. ಅವುಗಳ ಚಿತ್ರಗಳೇ ಹೇರಳವಾಗಿ ದೊರೆಯುವುದು. ಅದಕ್ಕೆ ದೊಡ್ಡ ಕಲ್ಲು ಬಂಡೆಗಳು ಮತ್ತು ಗುಹೆಗಳನ್ನು ಬಳಸಿಕೊಳ್ಳಲಾಗಿದೆ. ಗುಹೆಗಳು ಮನುಷ್ಯನಿಗೆ ವಿಶ್ರಾಂತಿ ಮತ್ತು ವಾಸಕ್ಕೆ ನಿಸರ್ಗವೇ ಸಹಜವಾಗಿ ನಿರ್ಮಿಸಿಕೊಟ್ಟ ಮನೆ ಎನ್ನಬಹುದು. ಇಡೀ ದಿನ ಬೇಟೆಯಲ್ಲಿ ಕಂಡುಂಡ ಅನುಭವವನ್ನು ಗುಹೆಗಳಲ್ಲಿ ಚಿತ್ರಿಸಿದಂತೆ ಕಾಣುತ್ತದೆ.

"ಅವರು ಕಂಡು ಬೆದರಿದ, ಆಶ್ಚರ್ಯಪಟ್ಟ, ಬೇಟೆಯಾಡಿದ ಹಲವಾರು ಪ್ರಾಣಿಗಳ ಆಕಾರ ಕಾಟಿಗಳ ಚಿತ್ರ ಬರೆದಿದ್ದಾರೆ. ಕಾಡುಕುದುರೆ, ಕಾಡುಹಂದಿ, ಕಾಡುಜಿಂಕೆ, ಕಾಡಾನೆ ಮೊದಲಾದ ಹಲವಾರು ಪ್ರಾಣಿಗಳ ಚಿತ್ರಗಳನ್ನು ಬರೆದಿದ್ದಾರೆ. ಅವಕ್ಕೆ ಜೀವಕಳೆ ಬರುವ ರೀತಿಯಲ್ಲಿ ಬಣ್ಣವನ್ನು ಸವರಿದ್ದಾರೆ. ಕಾವಿ ಬಣ್ಣ, ಗೋಪಿ ಬಣ್ಣ, ಮಸಿ, ಮೊದಲಾದ ಬಣ್ಣಗಳನ್ನು ಕೊಬ್ಬಿನೊಡನೆ ಅರೆದು, ತಾವು ಬರೆದ ಚಿತ್ರಗಳಿಗೆ ಸವರಿದ್ದಾರೆ"(ಕಲವೀರ ಮನ್ವಾಚಾರ; ಮಾತೃದೇವತಾ ಆರಾಧನೆ, ಪುಟ ೧೭).

ಈ ರೀತಿ ಆದಿವಾಸಿ ಮಾನವ ಗುಹೆಗಳಲ್ಲಿ ಪ್ರಾಣಿಗಳನ್ನು ಬಿಡಿಸುವುದರ ಹಿಂದೆ ಅವನ ಬೇಟೆಯ ಸಂದರ್ಭದಲ್ಲಿ ಕಂಡ ಪ್ರಾಣಿಗಳನ್ನು ಚಿತ್ರದ ಮೂಲಕ ದಾಖಲಿಸಿರುವುದು ಮೇಲ್ನೋಟಕ್ಕೆ ಕಂಡು ಬಂದರೂ ಅವನು ಮಾಂಸಹಾರಿಯಾಗಿದ್ದರಿಂದ ಆಹಾರ ದೋರಕದೆ ಕಂಗಾಲಾದಾಗ ತಾನು ಹುಡುಕುವ ಬೇಟೆ ದೊರೆತ ಸಂದರ್ಭದಲ್ಲಿ ಅವೇ ಅಮೂಲ್ಯವಾಗಿ ಕಂಡಿರಬಹುದು. ತನ್ನ ಹಸಿವೆಯನ್ನು ನೀಗಿಸಿದ ಕಾರಣಕ್ಕೆ ಅವುಗಳ ಜ್ಞಾಪಕಾರ್ಥವಾಗಿ ಕೃತಜ್ಞತೆ ಸಲ್ಲಿಸುವ ರೂಪದಲ್ಲಿ ಇರಬಹುದು, ವಿಸ್ಮಯದ ಕಾರಣಕ್ಕೂ ಇರಬಹುದು, ಅಭಿವ್ಯಕ್ತಿ ಕಾರಣಕ್ಕೂ ಈ ಚಿತ್ರಗಳನ್ನು ಬಿಡಿಸಿರಬಹುದು.

ಮಾನವನಿಗೆ ಯಾವ ಕಾಲಕ್ಕೂ ಕಾಡುವ ಮತ್ತೊಂದು ಪ್ರಶ್ನೆ ಅಥವಾ ಬಿಡಿಸಲಾರದ ಒಗಟು ಎಂದರೆ ಹುಟ್ಟು–ಸಾವು. ಹುಟ್ಟಿನ ಆಶ್ಚರ್ಯ, ಸಾವಿನ ಭಯ ಇವು ತುಂಬಾ ಕಾಡಿವೆ ಎನ್ನಬಹುದು. ತಮ್ಮ ಹಿರಿಯರ ಮೇಲೆ ಅವರಿಗೆ ಭಯ ಭಕ್ತಿ ಬೆಳೆಯಿತು. ಆದುದರಿಂದಲೇ ಮೃತರನ್ನು ಊಳುವಾಗ ಬರಿದೇ ಮಣ್ಣಲ್ಲಿ ಕೆಡೆಯಲಿಲ್ಲ. ಅವರ ಶವದ ಬಳಿ ಅವನ ತೊಡಿಗೆಯನ್ನಿರಿಸಿದರು, ಆಭರಣಗಳನ್ನಿರಿಸಿದರು. ತಾವು ಚಂದಕ್ಕೆ ಮೈಗೆ ಬಳಿದುಕೊಳ್ಳುತ್ತಿದ್ದ ಕಾವಿಮಣ್ಣಿನ ಹೆಂಟೆಗಳನ್ನು ಇರಿಸಿದ್ದೂ ಉಂಟು(ಕಲವೀರ ಮನ್ವಾಚಾರ; ಮಾತೃದೇವತಾ ಆರಾಧನೆ, ಪುಟ ೧೯).

ತನ್ನಂತೆ ಇರವ ಮನುಷ್ಯ ಇದ್ದಕ್ಕಿದಂತೆ ನಿಷ್ಕ್ರಿಯನಾಗುವುದು ಮತ್ತು ಅವನ ಶರೀರ ನಾಶ ಹೊಂದುವ ರೀತಿ ನೋಡಿ ಅವನಲ್ಲಿ ಒಂದು ರೀತಿ ಭಯ, ಜುಗುಪ್ಸೆ ಬಂದಿರಬೇಕು. ಅಷ್ಟು ಕಾಲ ತನ್ನ ಜೊತೆಗಿದ್ದವನ ಅಗಲಿಕೆ ಪ್ರೀತ್ಯರ್ಥವಾಗಿ ಈ ರೀತಿ ಹೂಳುವ ಪದ್ಧತಿಯನ್ನು

ರೂಢಿಸಿಕೊಂಡಿರುವುದು ಒಂದು ಉದ್ದೇಶವಾದರೆ, ಮತ್ತೊಂದು ದೇಹ ಕಣ್ಣೆದುರೇ ಇದೆ. ಅವನಲ್ಲಿದ್ದ ಕ್ರಿಯಾತ್ಮಕ ಶಕ್ತಿ ಎಲ್ಲಿ ಹೋಯಿತು. ಅದು ಅವ್ಯಕ್ತ ಭಾವ, ಕಾಣದೆ ಘಟಿಸುವುದರ ಹಿಂದೆ ಒಂದು ಶಕ್ತಿ ಇದೆ ಎಂದು ತಿಳಿದ ಮತ್ತು ಮಗು ಹೇಗೆ ಜನಿಸುತ್ತದೆ ಎಂಬ ಕಲ್ಪನೆ ಇಲ್ಲದ ಮನುಷ್ಯ ಯೋಚಿಸುವ ರೀತಿ ಸತ್ತ ಮನುಷ್ಯನ ಜೊತೆ ಹೋಲಿಕೆ ಮಾಡಿಕೊಂಡಿರ ಬಹುದು. ಆ ಕಲ್ಪನೆ ತನ್ನ ಪೂರ್ವಜರೇ ಮತ್ತೆ ಹುಟ್ಟಿ ಬಂದಿರಬೇಕೆಂದು ಬಲವಾಗಿ ನಂಬಿದ ಕಾರಣಕ್ಕೆ ಸಾವಿನ ನಂತರದ ಆಚರಣೆಗಳು ಬಂದಿರಬೇಕು. ಇಂದಿನ ವೈಜ್ಞಾನಿಕ ಯುಗದಲ್ಲೂ ಮಾನವ ಜನನ–ಮರಣದ ಸಂಬಂಧವಾಗಿ ಕಾಣದ ಶಕ್ತಿಯನ್ನೇ ನಂಬಿರುವನು. ಆ ಶಕ್ತಿಯೇ ದೈವವಾಗಿ ರೂಪಗೊಂಡಿದೆ.

ಬೇಟೆಯಲ್ಲಿ ಕಂಡ ಅನುಭವಗಳನ್ನು ಅಭೂತವೆಂದು ಬಗೆದ ಮಾನವ ಅವುಗಳನ್ನು ಚಿತ್ರಗಳ ಮೂಲಕ ದಾಖಲಿಸುತ್ತಾ ಹೋಗಿದ್ದಾನೆ. ಇವು ಅವನ ಕಣ್ಣ ಮುಂದೆ ಕಂಡ ದೈತ್ಯ ರೂಪದ ಪ್ರಾಣಿಗಳಾದರೆ ಅವನಿಂದ ದೂರವಿರುವ ಆಕಾಶ, ಸೂರ್ಯ, ಚಂದ್ರ, ಅವುಗಳ ಚಲನೆಯ ಗತಿಯನ್ನು ಕಂಡು ಅದರಲ್ಲೂ ಒಂದು ಚೈತನ್ಯವನ್ನು ಕಂಡು ತನ್ನದೇ ಆದ ಕಲ್ಪನೆಯನ್ನು ಹೊಂದಿದ. ಪ್ರತಿ ವಸ್ತುವಿನಲ್ಲೂ ಚೇತನವನ್ನು ಕಾಣುತ್ತಾನೆ. ಆದಿವಾಸಿಗಳು ಮರ, ಗಿಡ, ಬಳ್ಳಿ, ನೀರು, ಗ್ರಹ, ಸೂರ್ಯ, ಚಂದ್ರ, ಹೀಗೆ ಪ್ರತಿಯೊಂದರಲ್ಲೂ ಚೇತನವನ್ನು ಗುರುತಿಸುತ್ತಾ ಅವುಗಳ ಆರಾಧನೆಯಲ್ಲಿ ತೊಡಗಿದರು. ಏಕೆಂದರೆ ಅವೆಲ್ಲವೂ ಒಂದಲ್ಲ ಒಂದು ರೀತಿ ಅವನ ನಿತ್ಯ ಬದುಕಿನಲ್ಲಿ ಸೇರಿ ಹೋಗಿದ್ದವು. ಸೂರ್ಯ ಚಂದ್ರರಿಂದ ರಾತ್ರಿ ಹಗಲು, ಅವುಗಳ ಚಲನೆ, ಬೆಳಕು, ಋತುಗಳು, ಕಾಲಗಳು, ಆ ಸಂದರ್ಭದಲ್ಲಿ ಪರಿಸರದಲ್ಲಾಗುವ ಬದಲಾವಣೆಗಳು ಇವೆಲ್ಲ ಒಂದು ರೀತಿ ಚಲನೆ ಮತ್ತು ಚೈತನ್ಯ ರೂಪದಲ್ಲಿ ಕಂಡು ದೈವವೆಂದು ಪೂಜಿಸಿದ.

ಪ್ರಾಚೀನ ಮಾನವನ ನೆಲೆ ಸುಭದ್ರವಾಗಿರಲಿಲ್ಲ. ಬೇಟೆಯಾಡಿಯೇ ಉದರ ಪೋಷಣೆ ಮಾಡಬೇಕಿದ್ದ ಅವರಿಗೆ ಆಕಾಶದಲ್ಲಿ ಒಮ್ಮೆಲೆ ಕಪ್ಪನೆಯ ಮೋಡ ಕವಿದು ಗುಡುಗು ಸಿಡಿಲು, ಭೂಕಂಪ ಮುಂತಾದ ನಿಸರ್ಗ ವಿಕೋಪಗಳಿಗೆ ತುತ್ತಾಗಬೇಕಾಯಿತು. ಸಹಜವಾಗಿಯೇ ಅವನ ಮನಸ್ಸಲ್ಲಿ ಅದನ್ನು ಶಾಂತಗೊಳಿಸುವ ಬದಲೀ ಉಪಾಯವನ್ನು ಯೋಚಿಸ ತೊಡಗಿದ. ಅದನ್ನು ಎದುರಿಸಿ ನಿಲ್ಲುವ ಶಕ್ತಿ ಇಲ್ಲದೆ ಭಯಕ್ಕೆ ಅದಕ್ಕೆ ಮೊರೆ ಹೋಗುವುದು ಒಳಿತು ಎನಿಸಿರಬೇಕು. ಯಾವುದೋ ಒಂದು ಸಂದರ್ಭದಲ್ಲಿ ಧೋ ಎಂದು ಸುರಿಯುವ ಮಳೆ ಅವನು ಸಲ್ಲಿಸಿದ ಕೋರಿಕೆ ಮೇರೆಗೆ ನಿಲ್ಲವುದು, ಕೋರಿಕೆ ಮತ್ತು ಮಳೆ ನಿಲ್ಲುವುದು ಏಕಕಾಲಕ್ಕೆ ಜರುಗಿದ್ದರಿಂದ ಆಪತ್ ಸ್ವರೂಪದಲ್ಲಿ ಮಳೆ ಬಂದಾಗಲೆಲ್ಲ ದೈವರೂಪದ ಆರಾಧನೆಯಾಗಿ ಮುಂದುವರಿಸಿಕೊಂಡು ಬಂದಿರುವುದು.

ಗಿಡ, ಮರ, ಬಳ್ಳಿ, ಸಸ್ಯ, ಇವೆಲ್ಲವುಗಳು ದಿನದಿಂದ ದಿನಕ್ಕೆ ಬೆಳವಣಿಗೆ ರೂಪಗಳು, ಅವುಗಳಿಂದ ಅವನಿಗಾಗುವ ಉಪಯೋಗಗಳು, ಅವುಗಳ ಬಗ್ಗೆ ಪೂಜ್ಯ ಭಾವನೆಯನ್ನು ಮೂಡಿಸಿರಬೇಕು. ಈಗಲೂ ಕೂಡ ಮರಗಳ ಪೂಜೆ ಭಾರತದಲ್ಲಿ ಹಾಗೇ ಮುಂದುವರಿದುಕೊಂಡು ಬಂದಿದೆ. ಅದಕ್ಕೆ ವೈದಿಕರು ಕೊಟ್ಟ ಕಾರಣಗಳು ಏನೇ ಇದ್ದರೂ ಅವು ಮಾತ್ರ ಆರಾಧನೆಯ ಮೂಲ ತಾತ್ವಿಕರೂಪಗಳು, ಬೇವಿನಮರ, ಅರಳಿಮರ, ಬನ್ನಿಮರಗಳ ಆರಾಧನೆಯನ್ನು ತಪ್ಪದೆ ಪಾಲಿಸಲಾಗುತದೆ. ಬೇವಿನ ಮರದ ಔಷಧೀಯ ಗುಣದಿಂದ ಅದರ ಮಹತ್ವವನ್ನು ತೀರ ಇತ್ತೀಚೆಗೆ ಕಂಡುಕೊಂಡಿರುವೆವು. ಆದರೆ ಅದನ್ನು ಬಳಕೆ ಮಾಡಿಕೊಂಡೇ ಆದಿವಾಸಿಗಳು ಮರ ತನಗೆ ಮಾಡಿದ ಉಪಕಾರಕ್ಕೆ ಅದನ್ನು ಪೂಜನೀಯವಾಗಿ ಕಂಡರು. ಅದನ್ನು ತಾನು ವಾಸಿಸುವ ಮನೆಯ ಸುತ್ತ ಮುತ್ತಲೇ ನೆಟ್ಟು ಬೆಳಸುವ ಪರಿಯೇ ಇದಕ್ಕೆ ಕಾರಣವಾಗಿದೆ. ಅದರಿಂದ ದೊರೆಯುವ ಆರೋಗ್ಯಕರವಾದ ಗಾಳಿ ಮಾನವನ ಉಸಿರಾಟಕ್ಕೆ ಯೋಗ್ಯವಾಗಿದೆ. ಇವೆಲ್ಲವನ್ನು ಅನುಭವಿಸಿಯೇ ತನ್ನ ಅರಿವಿಗೆ ಬಂದ ಮೇಲೆ ಮಾಡಿರಬೇಕು. ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಯುಗಾದಿ ಹಬ್ಬದಲ್ಲಿ ಬೇವು ಸವಿಯುವ ಪರಿಪಾಟವನ್ನಿಟ್ಟುಕೊಂಡಿದ್ದೇವೆ. ಹೆರಿಗೆಯಾದಾಗ ಬಾಣಂತಿ ಕೋಣೆಯಲ್ಲಿ ಬೇವಿನ ಟೊಂಗೆಗಳನ್ನು ಇಡುತ್ತಾರೆ. ಇದಕ್ಕೆ ಕಾರಣ ದುಷ್ಟಶಕ್ತಿಗಳು ಕೋಣೆಯನ್ನು ಪ್ರವೇಶಿಸದಿರಲಿ ಎಂಬ ನಂಬಿಕೆಯಾಗಿದೆ. ಅಂದರೆ ಬೇವಿನ ಮರ ಶಕ್ತಿ ದೇವತೆಯ ಸಂಕೇತವಾಗಿದೆ. ಆರೋಗ್ಯದ ದೃಷ್ಟಿಯಿಂದ ತಾಯಿ ಮತ್ತು ಮಗು ಆರೋಗ್ಯ ಸೂಕ್ಷ್ಮವಾಗಿರುವ ಅಂಥ ಸಂದರ್ಭದಲ್ಲಿ ಯಾವುದೇ ಸೋಂಕು ಸಂಭವಿಸದಿರಲಿ ಎಂಬುದು ಕೂಡ ಅಷ್ಟೇ ಸತ್ಯವಾಗಿದೆ. ಹಾಗೆ ನಮ್ಮ ಕೆಲವು ಹಳ್ಳಿಗಳಲ್ಲಿ ವರ್ಷಕ್ಕೆ ಒಂದು ಸಲ ಪ್ರತಿಯೊಬ್ಬರ ಮನೆಯಲ್ಲಿ 'ಕಳುವಮ್ಮ' ಎಂಬ ಹೆಸರಿನಲ್ಲಿ ದೇವಿ ಆರಾಧನೆ ಮಾಡಲಾಗುತ್ತದೆ(ಬಳ್ಳಾರಿ ಜಿ, ಹಗರಿಬೊಮ್ಮನಹಳ್ಳಿ ತಾ.). ಇದನ್ನು ಮಳೆಗಾಲದ ಸಮಯದಲ್ಲಿ ಮತ್ತು ಆರೋಗ್ಯ ನಿಮಿತ್ತ ಮಾಡುತ್ತಾರೆ. ಆ ಸಮಯದಲ್ಲಿ ಎಲ್ಲೆಂದರಲ್ಲಿ ಮಳೆಯಿಂದ ಊರಿನಲ್ಲಿ ನೀರು ಶೇಖರಣೆಯಾಗಿ ಕಾಯಿಲೆಗಳು ಹರಡುವ ಕಾಲವಾಗಿರುತ್ತದೆ. ಅಂಥ ಸಮಯದಲ್ಲಿ ಈ ಆರಾಧನೆಯನ್ನು ಮಾಡುವರು. ಮೊದಲು ಮನೆಯನ್ನು ಶುಚಿಗೊಳಿಸಿ ಮನೆಯಲ್ಲಿ ಎಲ್ಲರೂ ಸ್ನಾನಾದಿ ಶುದ್ಧರಾಗಿ, ಹೊಸ ಮಡಿಕೆಯಲ್ಲಿ ನೀರು ತುಂಬಿ ಅದರಲ್ಲಿ ಬೇವಿನ ಟೊಂಗೆಗಳನ್ನು ಇಟ್ಟು, ನೈವೇದ್ಯಾದಿಯಾಗಿ ಪೂಜಿಸಿ ರಾತ್ರಿಯೆಲ್ಲ ಮನೆಯಲ್ಲಿಟ್ಟು, ಬೆಳಗಿನ ಐದು ಗಂಟೆಗೆ ಊರಿನಿಂದ ದೂರದಲ್ಲಿ ಒಂದು ಕಟ್ಟೆಯ ಮೇಲೆ ಅದನ್ನು ಮಾಡಿದ ನೈವೇದ್ಯ ಸಮೇತ ಇಟ್ಟು ಬರುವ ಪದ್ಧತಿ ಇದೆ. ಅವರ ಪ್ರಕಾರ ದೇವಿಯನ್ನು ಮನೆಗೆ ಆಹ್ವಾನಿಸಿ, ಪೂಜೆ ಆರಾಧನೆಯೊಂದಿಗೆ ದೇವಿ ನೈವೇದ್ಯ ಸ್ವೀಕರಿಸಿ, ಸಂತೃಪ್ತಗೊಳಿಸಿ ಶಾಂತಳನ್ನಾಗಿ ಮಾಡಿ ಕಳಿಸಿಕೊಡುವುದಾಗಿದೆ.

ಸಪ್ತಮಾತೃಕೆಯರನ್ನು ಕುರಿತು ಡಾ. ದೇವರಕೊಂಡಾರೆಡ್ಡಿಯವರ ಲೇಖನದಲ್ಲಿ ಸಪ್ತಮಾತೃಕೆಯರಲ್ಲಿ ಒಬ್ಬಳಾದ ಕೌಮಾರಿಗೆ ಮರ, ಗಿಡ, ಸೊಪ್ಪು, ಹೂಗಳಲ್ಲಿ ನೆಲೆಸಿ ಆಕೆ

ಜನರನ್ನು ನೋಡಬೇಕು. ಬೆಂಗಳೂರು ಮತ್ತು ಕೋಲಾರ ಮುಂತಾದ ಕಡೆ ಈ ದೇವತೆಗಳನ್ನು ಬೇರೆ ಬೇರೆ ಕಡೆ ಪೂಜಿಸುತ್ತಾರೆ(ಅಂದರೆ ದೇವಾಲಯಗಳಲ್ಲೇ ಪೂಜಿಸಬೇಕೆಂದು ಇಲ್ಲ). ಹೆಚ್ಚಾಗಿ ನೀರಿನ ಆಶ್ರಯವಿರುವ ಕಡೆಯಲ್ಲೂ ಪೂಜಿಸುತ್ತಾರೆ. ಪೂಜಿಸುವ ಸಂದರ್ಭಗಳೆಂದರೆ ಮನೆಯಲ್ಲಿ ತೀವ್ರತರ ಕಾಯಿಲೆ ಬಿದ್ದಾಗ, ಇಲ್ಲವೆ ಕೇಡುಂಟಾದಾಗ ಸಹಜವಾಗಿ ಇಂತಹ ಪೂಜೆ ಮಾಡಲಾಗುತ್ತದೆ. ಪೂಜೆ ಮಾಡುವವರು ಹೆಂಗಸರೇ ಆಗಿರಬೇಕು(ಲಕ್ಷ್ಮಣ್ ತೆಲಗಾವಿ(ಸಂ); ಹರಿತಿ ಸಿರಿ, ಪುಟ ೯೪, ೯೭). ಪ್ರಕೃತಿಯಲ್ಲಿ ದೊರೆಯುವ ಹೂವು ಹಣ್ಣು ಸೊಪ್ಪುಗಳಿಂದಲೇ ಆಕೆಯನ್ನು ಅಲಂಕರಿಸುತ್ತಾರೆ. ಅಂದರೆ ಪ್ರಕೃತಿ ಪ್ರತೀಕವಾಗಿ ಆರಾಧಿಸುವುದು, ಇವು ಪ್ರಸ್ತುತ ಕಾಲದಲ್ಲಿ ನಡೆಯುತ್ತಿರುವ ಆರಾಧನೆಗಳು. ಇಂತಹ ಆರಾಧನೆಗಳು ಜನಸಾಮಾನ್ಯರ ಜೀವನದಲ್ಲಿ ಮಾನಸಿಕವಾಗಿ ತುಂಬಾ ಹತ್ತಿರದ ಸಂಬಂಧವನ್ನು ಹೊಂದಿರುತ್ತವೆ. ಅವರ ಜೀವನ ಅಂತಹ ಒಂದು ನಂಬಿಕೆಯೆಂಬ ನೆಲೆಗಟ್ಟಿನ ಮೇಲೆ ಸಾಗುತ್ತಿರುವುದು. ಗ್ರಾಮೀಣ ಪ್ರದೇಶಗಳಲ್ಲಿ ವರ್ಷಕ್ಕೊಮ್ಮೆ ಗ್ರಾಮದೇವತೆಗಳ ಉತ್ಸವಗಳು ನಡೆಯುತ್ತಿರುವುದು ಮಾತೃದೇವತೆಗಳ ಆರಾಧನೆಯ ಹಿನ್ನೆಲೆಯಲ್ಲಿಯೇ, ಈ ದೇವತೆಗಳು ಉಗ್ರಸ್ವರೂಪದಲ್ಲಿಯೇ ರೂಪಗೊಂಡಿರುವುದು ಮತ್ತು ನೆಲಸಿರುವುದು. ಮೂಲ ಬಲಿ ಆರಾಧನೆಯನ್ನೇ ಮುಂದುವರಿಸಿಕೊಂಡು ಬರಲಾಗಿದೆ. ಗಂಡುದೇವತೆಗಳಿಲ್ಲದ ಊರುಗಳಿವೆ. ಊರನ್ನು ಕಾಯುವ ಗ್ರಾಮದೇವತೆ ದ್ಯಾಮವನಿಲ್ಲದ ಊರುಗಳಿಲ್ಲ. ಮೂಲಸಂಸ್ಕೃತಿ ನಮ್ಮಲ್ಲಿ ಬೆರೆತು ಹೋಗಿದೆ. ಹಾಗಾಗಿ ಯಾವುದೇ ಧರ್ಮ, ಪಂಥ ಬಂದು ಹೋಗಲಿ, ಮಾತೃದೇವತಾ ಆರಾಧನೆ ದಕ್ಷಿಣದ ದ್ರಾವಿಡರಲ್ಲಿ ಹಾಗೆಯೇ ಉಳಿದುಕೊಂಡು ಬಂದಿದೆ.

ಇವೆಲ್ಲ ಅವರು ಕಂಡು ಅನುಭವಿಸಿದ ಆಧಾರದ ಮೇಲೆ ಇಂದು ನಾವು ಮಾಡುವ ಆಚರಣೆಗಳಾಗಿವೆ. ಅವರಿಗೆ ಈ ಸತ್ಯ ಗೊತ್ತೋ, ಗೊತ್ತಿಲ್ಲದೆಯೋ ಮಾಡಿರುವಂತವು. ಆದರೆ ಒಳಗೊಂಡಿರುವುದು ಮಾತ್ರ ಸತ್ಯವೆನ್ನುವುದು ಮರೆಯುವಂತಿಲ್ಲ. ಈ ಸತ್ಯ ಅವರಿಗೆ ಶಕ್ತಿಯಾಗಿ ಕಂಡಿದೆ. ಪ್ರಕೃತಿಯಲ್ಲಿ ಅವನು ಕಂಡ ಇಂಥ ವಿಸ್ಮಯಗಳು ಆರಾಧನೆಗೆ ಕಾರಣವಾಗಿವೆ. ಚಮತ್ಕಾರಗಳ ಹಿಂದಿರುವ ಅಲೌಕಿಕ ಶಕ್ತಿಯನ್ನು ಒಲಿಸಿಕೊಳ್ಳಬೇಕಿದೆ. ಅವನ್ನು ಒಲಿಸಿಕೊಳ್ಳಬೇಕೆಂದರೆ ಅದಕ್ಕೆ ಪ್ರಿಯವಾದುದನ್ನು ಕೊಡಬೇಕು ತಾನು ಬೇಟೆಗೆ ಹೋಗುವುದಕ್ಕಿಂಥ ಮುಂಚೆ ಆ ಅಲೌಕಿಕ ಶಕ್ತಿಯನ್ನು ಸ್ಮರಿಸಿ ಹೋಗುವುದು. ಅದು ಒಂದು ಕಲ್ಲಿನ ರೂಪದಲ್ಲಿರಲಿ, ಇಲ್ಲವೆ ಮರವಾಗಿರಲಿ ಇನ್ನಾವುದೋ ರೂಪದಲ್ಲಿದ್ದರೂ ಸರಿ, ಒಂದು ವೇಳೆ ತನಗೆ ಶೀಘ್ರವೇ ಅಂದುಕೊಂಡಂತೆ ಬೇಟೆ ಸಿಕ್ಕರೆ ಮೊದಲು ಅದಕ್ಕೆ ಅರ್ಪಿಸುವಂತೆ ಕೋರಿಕೊಂಡು ಹೋದಾಗ ಬೇಟೆ ದೊರೆತು ಅದರ ಮೇಲೆ ಒಂದು ರೀತಿಯ ನಂಬಿಕೆ ಹುಟ್ಟುತ್ತದೆ. ಕೋರಿಕೆ ಸಲ್ಲಿಸಿದರೆ ಈಡೇರಿಸುವ ಶಕ್ತಿ ಇದರಲ್ಲಿದೆ ಎಂಬ ಭಾವನೆಯಿಂದ ಪ್ರತಿ ದಿನ ಬೇಟೆಗೆ ಹೊರಡುವ ಮುನ್ನ ಅದಕ್ಕೆ ನಮಿಸಿಹೋಗುವುದು ರೂಢಿಸಿಕೊಂಡಿರಬಹುದು. ಅದೇ ನಿತ್ಯ ಆರಾಧನೆಗೆ ಕಾರಣವಾಗಿರಬಹುದು.

ಮಾನವನ ನಂಬಿಕೆಗಳು, ಆ ನಂಬಿಕೆಗಳಿಗೆ ತಕ್ಕಂತೆ ನಡೆದ ಪವಾಡಗಳು ಏನೇ ಇದ್ದರೂ ಅವು ಪ್ರಕೃತಿಯಲ್ಲಿ ನಡೆಯುವ ಘಟನೆಗಳು ಅದಕ್ಕೆ ಹೊರತಾಗಿ ಯಾವುದೂ ಜರುಗುತ್ತಿರಲಿಲ್ಲ. ಪಕೃತಿಯನ್ನೇ ದೇವರೆಂದು ನಂಬಿದ್ದ. ಅದರಲ್ಲೂ ವಿಶೇಷವಾಗಿ ಹೆಣ್ಣಿಗೂ, ಪ್ರಕೃತಿಗೂ ಹೋಲಿಕೆ ಮಾಡಿದ್ದಾನೆ. ಭೂಮಿಯಲ್ಲಿ ಬೀಜ ಬಿತ್ತನೆ ಮಾಡುವುದರ ಹಿಂದಿರುವ ದೊಡ್ಡ ನಂಬಿಕೆ ಹೆಣ್ಣಾಗಿದ್ದಾಳೆ. ಯಾವ ನಂಬಿಕೆಯಿಂದ ಮನುಷ್ಯ ಮಣ್ಣಿನಲ್ಲಿ ಬೀಜ ಬಿತ್ತುತ್ತಾನೋ ಅದು ಅವನ ನಂಬಿಕೆಯಂತೆ ಮೊಳಕೆವೊಡೆದು, ಸಸಿಯಾಗಿ, ಎಲೆಚಿಗುರಿ, ಮೈದುಂಬಿಕೊಂಡು ಹೂ ಅರಳಿ ಮತ್ತದೇ ಬೀಜ, ಗಿಡ ಆಗುವುದು. ಇವೆಲ್ಲ ಕ್ರಿಯಾವರ್ತ ಹೆಣ್ಣಿನ ಗರ್ಭಕ್ಕೆ ಹೋಲಿಕೆಯಾಗುತ್ತವೆ. ಪ್ರಕೃತಿಯಲ್ಲಿ ನಡೆಯುವ ಹಲವಾರು ವಿಸ್ಮಯಗಳಲ್ಲಿ ಹೆಣ್ಣಿನ ಪ್ರಜನನ ಅವಸ್ಥೆ ಇದು ತುಂಬಾ ವಿಶೇಷವೆನಿಸಿರಬೇಕು. ಸಂಭವಿಸುವ ಎಲ್ಲ ಘಟನೆಗಳ ಹಿಂದೆ ಕಾರಣವು ಒಂದಲ್ಲ ಒಂದು ಸಮಯದಲ್ಲಿ ಪವಾಡದಂತೆ ಬಯಲಾಗಿರಬಹುದು. ಆದರೆ ಇದು ಭೇದಿಸಲಾಗದ ಒಗಟಾಗಿ ಕಾಡಿರುವುದರಿಂದ ಹೆಣ್ಣಿನ ಪ್ರಜನನ ಕ್ರಿಯೆ ವಿಶೇಷವಾಗಿ ತೋರಿರುವುದರಿಂದ, ಅವಳು ಒಂದು ಅಘೋಚರ, ನಿಗೂಢಶಕ್ತಿಯಾಗಿ, ಗೋಚರಿಸಿದ್ದರಿಂದ ಅವಳಲ್ಲಿ ವಿಶೇಷ ಶಕ್ತಿ ಇದೆ ಎಂಬ ಭಾವನೆ ಬಂದು ತಾನು ನೋಡಿದ್ದ, ಭಯಗೊಂಡಿದ್ದ, ವಿಸ್ಮಯನಾಗಿದ್ದ ಎಲ್ಲ ಅಘೋಚರ ಘಟನೆಗಳಿಗಿಂತಲೂ ಇದು ಭಿನ್ನವಾಗಿ ಕಂಡಿರಬೇಕು. ಅವೆಲ್ಲಕ್ಕಿಂತಲೂ ಅಭೇದ್ಯವಾದ ಕಾರಣ ಹೆಣ್ಣಿನ ಮೂಲ, ಜೀವಿಯ ಆರಂಭವೆಂದು ಬಗೆದು ಆರಾಧನೆಗೆ ಪ್ರಧಾನ ಸ್ಥಾನವನ್ನು ನೀಡಿರಬೇಕು. ಹಾಗಾಗಿ ಮಾತೃದೇವತಾ ಆರಾಧನೆ ರೂಪಗೊಳ್ಳಲು ಕಾರಣವಾಯಿತು.

ಆರಾಧನೆಗೆ ಕಲ್ಪನೆಯ ಮೂರ್ತರೂಪವಾಗಿ ಹೆಣ್ಣಿನ ಪ್ರತಿರೂಪವನ್ನೇ ಬಳಕೆ ಮಾಡಿಕೊಂಡಿರಬೇಕು. ಕಲವೀರ ಮನ್ವಾಚಾರ ಅವರು ತಮ್ಮ ಸಂಶೋಧನೆಯಲ್ಲಿ ಪ್ರಾಕ್ಚಾರಿತ್ರಿಕ ಕಾಲದ ಸ್ತ್ರೀರೂಪದ ವಿಗ್ರಹಗಳನ್ನು ಉಲ್ಲೇಖಿಸಿದ್ದಾರೆ. ಪುರಾತನ ಶಿಲಾಯುಗದಲ್ಲಿ ಯುರೋಪ್ ಒಂದರಲ್ಲೆ ಸುಮಾರು ನೂರಾರು ವಿಗ್ರಹಗಳು ದೊರಕುತ್ತವೆ. ಇವು ಕಲ್ಲಿನಲ್ಲಿ, ದಂತದಲ್ಲಿ ಎಲುಬಿನಲ್ಲಿ ಹಾಗೂ ಮಣ್ಣಿನಲ್ಲಿ ಮಾಡಿದ ವಿಗ್ರಹಗಳಾಗಿವೆ. ಇವು ಸಾಮಾನ್ಯವಾಗಿ ನಗ್ನವಾಗಿದ್ದು, ದೊಡ್ಡದಾದ ಸ್ತನಗಳನ್ನು ಹಾಗೂ ದೊಡ್ಡದಾದ ಹೊಟ್ಟೆಯನ್ನು ಹೊಂದಿವೆ. ಇವುಗಳಿಗೆ ಕಾಲುಗಳಿರುವುದಿಲ್ಲ. ಆದರೆ ಇವುಗಳಲ್ಲಿ ಕೆಲವೊಂದು ಸಾಮಾನ್ಯ ಸ್ತ್ರೀಯರದ್ದಾಗಿರಬಹುದು, ಇಲ್ಲವೇ ಗರ್ಭಿಣಿಯರಾಗಿರಬಹುದು ಅಥವಾ ಬಹುತೇಕ ತಾಯಂದಿರ ವಿಗ್ರಹಗಳಾಗಿರಬೇಕೆಂದು ಊಹಿಸಲಾಗಿದೆ. ಇದೇ ಸಾಲಿಗೆ ಸೇರುವ ಫ್ರಾನ್ಸ್‌ನ ಡೋರ್ಡೋಗ್ನೆಯ ಲೌಸ್ಸೆಲ್ ಗುಹೆಯಲ್ಲಿ, ಸುಣ್ಣದ ಕಲ್ಲಿನ ಬಂಡೆಯ ಮೇಲೆ ಕೆತ್ತಲಾಗಿರುವ ವಿಗ್ರಹ ಕೈಯಲ್ಲಿ ಪ್ರಾಣಿಯ ಕೊಂಬನ್ನು ಹಿಡಿದಿದೆ. ಅರ್ಧ ಅಡಿ ಎತ್ತರವಿರುವ ವಿಗ್ರಹ ಮತ್ತು ಆಸ್ಟ್ರಿಯಾದ ವಿಲ್ಲೆಡ್ರೊಪ್ನ ಮಾತೃದೇವತೆ ಇವೆಲ್ಲ ಅದೇ ಕಾಲಕ್ಕೆ ಸೇರಿದ್ದವೆನ್ನಲಾಗಿದೆ. ಇವೆಲ್ಲ ದೈಹಿಕವಾಗಿ ಒಂದೇ ಲಕ್ಷಣವನ್ನು ಹೊಂದಿವೆ. ಸೊಂಟದ ಭಾಗ ಮತ್ತು ಎದೆಯ ಭಾಗಗಳು ದೊಡ್ಡವಾಗಿದ್ದು, ಎರಡೂ

ಕೈಗಳು ಮೊಲೆಯ ಮೇಲಿವೆ(ಕಲವೀರ ಮನ್ವಾಚಾರ; ಮಾತೃದೇವತಾ ಆರಾಧನೆ, ಪುಟ-೨೭, ೨೯). ಇವೆಲ್ಲ ಮಾತೃತ್ವಕ್ಕೆ ನೀಡಿದ ಪ್ರಾಧಾನ್ಯತೆಯನ್ನು ಎತ್ತಿ ಹಿಡಿದಿವೆ. ಮಾನವನಿಗೆ ವೈಶಿಷ್ಟ್ಯವಾಗಿ ಕಂಡಿದ್ದನ್ನೇ ನಿರ್ಮಿಸಿದ್ದಾನೆ. ಒಬ್ಬ ಕಲಾವಿದ ತನ್ನ ಮನಸ್ಸಿನ ಪರಿಣಾಮ ಬೀರಿದ್ದನ್ನೇ ತನ್ನ ಕಲೆಯಲ್ಲಿ ಬಿಂಬಿಸುತ್ತಾನೆ. ಹಾಗೆ ಇಲ್ಲಿ ಹೆಣ್ಣು, ಅವಳ ಗರ್ಭಾವಸ್ಥೆ, ತಾಯ್ತನ ತುಂಬಾ ಪರಿಣಾಮವನ್ನುಂಟು ಮಾಡಿದವುಗಳಾಗಿವೆ.

ಕೃಷಿಯ ಆರಂಭದಿಂದ ಬಲಿಯಂತಹ ಆಚರಣೆಗಳು ಆರಂಭವಾದವು. ಪೂರ್ವ ಶಿಲಾಯುಗದ ಮಾತೃದೇವತೆಗಳು ನೂತನ ಶಿಲಾಯುಗದಲ್ಲೂ ಮುಂದುವರಿದಿವೆ. ಕ್ರಿ.ಪೂ. ಸುಮಾರು ೧೫೦೦೦ದಿಂದ೫೦೦೦(ಕಲವೀರ ಮನ್ವಾಚಾರ; ಮಾತೃದೇವತಾ ಆರಾಧನೆ, ಪುಟ ೩೨). ಹಾಗೆಯೇ ಮುಂದುವರಿದು ಆರಾಧನೆಯಲ್ಲಿ ಕೃತಜ್ಞತಾ ಭಾವ ಕಂಡುಬಂದಿದೆ. ತಾವು ಆರಾಧಿಸುವ ದೈವವನ್ನು ತೃಪ್ತಿಪಡಿಸುವ ಮತ್ತು ಬಲಿ ಕೊಡುವುದು ಆರಂಭವಾಯಿತು ಎನ್ನಬಹುದು. ಯಾಕೆಂದರೆ ಮಾನವನು ಆರಾಧನೆಗಾಗಿ ಒಂದು ಆಕೃತಿಯನ್ನು ಆಯ್ಕೆ ಮಾಡಿಕೊಂಡ ಮೇಲೆ ಅದಕ್ಕೆ ಅವನು ತನಗೆ ಪ್ರಿಯವಾದುದನ್ನೇ ಅರ್ಪಿಸಿ ತನ್ನ ಭಯ, ಆತಂಕ, ದೂರ ಮಾಡಿಕೊಳ್ಳುವುದು ಒಂದು ಬಗೆಯಾದರೆ ಮತ್ತೊಂದು ಉದ್ದೇಶ ತಾನು ಅಂದುಕೊಂಡದ್ದನ್ನು ಈಡೇರಿಸುವಂತೆ ಬೇಡಿಕೊಳ್ಳುವುದು. ಅವೆಲ್ಲ ಈಡೇರಿದಾಗ ತನ್ನಂತೆ ಆ ವಿಗ್ರಹಕ್ಕೆ ಇಷ್ಟವಾದ ಮಾಂಸವನ್ನು ಅರ್ಪಿಸುವುದು. ಪ್ರಸ್ತುತ ನಾವು ಕೂಡ ದೇವರಿಗೆ ಇಷ್ಟವಾದ ತಿಂಡಿ, ತಿನಿಸು, ಹೂವು, ವಸ್ತ್ರ, ಆಭರಣವೆಂದು ಅರ್ಪಿಸುತ್ತೇವೆ.

ಪ್ರಕೃತಿಯಲ್ಲಿ ಪ್ರಳಯಸದೃಶ್ಯವಾಗಿ ಏನಾದರೂ ನಡೆದಾಗ ಬಿರುಗಾಳಿ, ಪ್ರವಾಹ, ಭಯಂಕರವಾದ ಗುಡುಗು, ಸಿಡಿಲು, ಭೂಕಂಪ ಇವೆಲ್ಲ ಒಂದು ತಕ್ಷಣಕ್ಕೆ ಕೋಪ ಬಂದಂತೆ, ಒಮ್ಮೆಲೆ ಭಯಂಕರವಾದ ವಿನಾಶವನ್ನುಂಟುಮಾಡುತ್ತವೆ. ಈ ವಿಕ್ಷುದ್ರವಾದ ಸಂದರ್ಭವನ್ನು ಶಾಂತಗೊಳಿಸಲು ಪ್ರಾಣಿಗಳನ್ನು ಬಲಿ ನೀಡಿ ರಕ್ತವನ್ನು ಭೂಮಿಗೆ ಚೆಲ್ಲುವ ಮೂಲಕ ಶಾಂತಗೊಳಿಸುವ ಭಾವವನ್ನು ಮಾನವ ಹೊಂದಿದ ಎನ್ನಬಹುದು. ಆದರೆ ಅದು ಬಹಳಕಾಲ ಇರುವಂತಹದಲ್ಲ. ಆದರೆ ಅವನಿಗೆ ತಾನೂ ರಕ್ತಾರ್ಪಣೆ ಮಾಡಿದ್ದಕ್ಕೆ ಶಾಂತವಾಯಿತು ಎಂದು ಬಲಿ ಕೊಡುವ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿರಬಹುದು. ಕೃಷಿಸಂಸ್ಕೃತಿ ಎಲ್ಲೆಲ್ಲೂ ಜಾರಿಯಲ್ಲಿತ್ತು. ತನ್ನ ಬೆಳೆ ಮತ್ತು ತನ್ನವರನ್ನು ರಕ್ಷಿಸಿಕೊಳ್ಳಬೇಕೆಂಬ ಇಚ್ಛೆ ಇಂತಹ ಆರಾಧನೆ ರೂಪ ತಳೆಯಲು ಕಾರಣವಾಗಿರಲೂಬಹುದು. ಮಾನವ ಈ ಅವಧಿಯಲ್ಲಿ ಪ್ರಾಣಿಗಳನ್ನು ಬಲಿ ಕೊಡುತಿದ್ದರಿಂದ ಪ್ರಾಣಿಗಳನ್ನು ಆಗಲೇ ಪಳಗಿಸಿ ಸಾಕುಪ್ರಾಣಿಯನ್ನಾಗಿ ಮಾಡಿಕೊಂಡಿರಬಹುದು, ಇಲ್ಲವೇ ತನ್ನ ಆಹಾರದ ಉದ್ದೇಶದಿಂದ ಪ್ರಾಣಿಗಳು ಸಿಕ್ಕಾಗಲೇ ಪಳಗಿಸಿ ಮುಂದಿನ ದಿನಕ್ಕೆ ಆಹಾರಕ್ಕೆಂದು ಸಾಕುತ್ತಿರಬಹುದು.

ಕಂಚಿನ ಯುಗದಲ್ಲಿ ಮಾತೃದೇವತೆಯ ವಿಕಾಸ ಪೂರ್ಣವಾಯಿತು. ಆದರೂ ಅದರ ಅವನತಿಯತ್ತ ಸಾಗಿದ್ದು ಈ ಕಾಲದಲ್ಲಿಯೇ. ಈ ಕಾಲವು ನಾಗರಿಕತೆಯತ್ತ ದಾಪು ಕಾಲನ್ನಿಡುವ ಸಂಧಿಕಾಲವೂ ಹೌದು. "ಬೇಟೆಯ ಹಂತದಿಂದ ಕೃಷಿಯನ್ನಾಧರಿಸಿ ಜೀವನ ನಿರ್ವಹಿಸುತ್ತಾ ಅಲೆಮಾರಿ ಜೀವನ ನಡೆಸುತ್ತಿದ್ದ ಮಾನವ, ಸಂಘಟಿತನಾಗಿ ಸಮುದಾಯದ ಮೂಲದಲ್ಲಿ ನೆಲೆ ನಿಂತ"(ಕಲವೀರ ಮನ್ವಾಚಾರ್; ಮತ್ರುದೇವತಾ ಆರಾಧನೆ, ಪುಟ ೩೫). ಮಾನವನ ಜೀವನ ಭೂಮಿ ಮೇಲೆ ಆರಂಭವಾದಂದಿನಿಂದ ಮಾತೃಪ್ರಧಾನತೆ ಹಂತಹಂತವಾಗಿ ವಿಕಾಸ ಹೊಂದುತ್ತಾ ಸಾಗಿ ಬಂದು ಈ ಕಾಲಾವಧಿಯಲ್ಲಿ ಶೃಂಗ ತಲುಪಿತ್ತೆನ್ನಬಹುದು. ಯಾವುದೇ ಒಂದು ವ್ಯವಸ್ಥೆ ಉತ್ತುಂಗಕ್ಕೇರಿ ನಿಂತ ಮೇಲೆ ಅದು ಹಾಗೆ ಬಹಳ ಕಾಲ ಮುಂದುವರಿಯುವುದಿಲ್ಲ. ಮತ್ತೊಂದು ಅದರ ಸ್ಥಾನವನ್ನು ಕಸಿಯುವ ಹವಣಿಕೆಯಲ್ಲಿರುತ್ತದೆ. ಹೆಣ್ಣಿಗಿದ್ದ ಪ್ರಧಾನ್ಯ ಸ್ಥಾನವನ್ನು ಕಿತ್ತುಕೊಂಡು ಅಥವಾ ಅವಕಾಶವಾದಿಯಾದದ್ದು ಪುರುಷ ಪ್ರಪಂಚವಾಗಿದೆ. ಒಂದು ಕಡೆ ನೆಲೆ ನಿಂತಿದ್ದರಿಂದ ವಾಸಕ್ಕೆ ಬೇಕಾದ ಭೂಮಿಗಾಗಿ ಅರಣ್ಯ ನಾಶ ಮಾಡಿ ವಾಸಕ್ಕೆ ಯೋಗ್ಯ ನೆಲೆಯನ್ನು ನದಿ ಬಯಲುಗಳಲ್ಲೇ ಕಂಡುಕೊಂಡ. ಗುಹಾವಾಸ ಇಲ್ಲಿ ಇಲ್ಲ. ನಾಶ ಮಾಡುವ ವಿನಾಶಕಾರಿ ಚಿಂತನೆ ಕೂಡ ಈ ಕಾಲಾವಧೀಯಲ್ಲೇ ಆರಂಭವಾಯಿತೆನ್ನಬಹುದು.

ಕೃಷಿಯನ್ನು ವಿಸ್ತರಣೆ ಮಾಡಬೇಕೆಂಬ ಉದ್ದೇಶದಿಂದ ಅರಣ್ಯ ಕಡಿದು ಕೃಷಿ ಚಟುವಟಿಕೆಯನ್ನು ಆರಂಭಿಸಿದ. ತಾನು ಪಳಗಿಸಿದ ಪ್ರಾಣಿಗಳನ್ನೇ ಉಳುಮೆಗೆ ಬಳಕೆ ಮಾಡಿಕೊಂಡಿರಬೇಕು. ಕಬ್ಬಿಣದ ಶೋಧದ ಪರಿಣಾಮವಾಗಿ ಕೃಷಿ ಸ್ತ್ರೀಯರ ಹಿಡಿತದಿಂದ ಪುರುಷನ ಉಸ್ತುವಾರಿಗೆ ಬಂದದ್ದು ಒಂದು ಕಾರಣವಾದರೆ, ಕುಟುಂಬ ಜಾರಿಯಲ್ಲಿದ್ದರಿಂದ ಹೆಚ್ಚುತ್ತಿರುವ ಕೌಟುಂಬಿಕ ಸದಸ್ಯರ ಸಂಖ್ಯೆಗೆ ಮನೆಯಲ್ಲೇ ಸ್ತ್ರೀಯರು ಮಾಡುವ ಸಣ್ಣ ಪ್ರಮಾಣದ ಉತ್ಪಾದನೆ ಸಾಕಾಗದೆ, ಉತ್ಪಾದನೆ ಹೆಚ್ಚು ಮಾಡುವ ಉದ್ದೇಶದಿಂದಲೂ ಕೃಷಿ ವಲಯ ವಿಸ್ತರಣೆ ಮಾಡಿರಬಹುದು. ಕೃಷಿಗೆ ಹೆಚ್ಚಿನ ಶ್ರಮ ವ್ಯಯ ಮಾಡಬೇಕಾದ್ದರಿಂದ ಪುರುಷನ ಅವಶ್ಯಕತೆಗೆ ಬೇಕಾದಂತೆ ಸ್ತ್ರೀಯರಿಗೆ ಅದರ ಮೇಲೆ ಹಿಡಿತ ಕಡಿಮೆಯಾಯಿತು.

ಸ್ತ್ರೀಯರ ಹಿಡಿತದಿಂದ ಕೃಷಿ ದೂರ ಉಳಿಯಲು ಮತ್ತೊಂದು ಕಾರಣ ಅವಳ ಮೇಲಿದ್ದ ಸಂತಾನೋತ್ಪತ್ತಿಯ ಜವಾಬ್ದಾರಿಯಾಗಿದೆ. ಆದಿವಾಸಿ ಮಾನವನಿಗೆ ಇದ್ದ ಎರಡು ಪ್ರಮುಖ ಹಸಿವೆಂದರೆ ಒಂದು ಲೈಂಗಿಕತೆ, ಮತ್ತೊಂದು ಬೇಟೆಯಾಡುವುದು(ಹಸಿವು). ಈ ಕಾರಣದಿಂದ ಸ್ತ್ರೀಯರು ಪ್ರಜನನ ಕ್ರಿಯೆಯ ನಿರಂತರತೆಯಿಂದ ಹೊರಬರಲಾಗದೆ, ಮುಖ್ಯ ಉತ್ಪಾದನಾ ಕ್ಷೇತ್ರವಾದ ಕೃಷಿಯ ಮೇಲೆ ಅವಳ ಯಜಮಾನಿಕೆ ನಿಧಾನವಾಗಿ ಕೈತಪ್ಪಿತು. ಸ್ತ್ರೀ ಆರ್ಥಿಕವಾಗಿ ಪಾರತಂತ್ರ್ಯವನ್ನು ಅನುಭವಿಸುವ ಮೊದಲ ಹೆಜ್ಜೆ ಈ

ಕಾಲಾವಧಿಯಲ್ಲಿಟ್ಟಳು. ಎರಡನೇ ಹೆಜ್ಜೆ ಅಥವಾ ಹಂತವೆಂದರೆ ಸಿಂಧೂ ನದಿ ನಾಗರಿಕತೆ. ಅಲ್ಲಿ ದೊರೆತ ಅವಶೇಷಗಳು ಮಾತೃಪ್ರಧಾನತೆಯ ಕುಸಿತವನ್ನು ಉಲ್ಲೇಖಿಸುತ್ತವೆ.

**೨. ೪. ಸಿಂಧೂ ನದಿ ನಾಗರೀಕತೆ ಕಾಲದಲ್ಲಿ ಮಾತೃಪ್ರಧಾನ ಅಂಶಗಳು.**

ಕ್ರಿ. ಪೂ. ಸುಮಾರು ೪೦೦೦-೨೫೦೦ ವರ್ಷಗಳ ಇತಿಹಾಸವನ್ನು ಹೊಂದಿರುವ ಈ ನಾಗರಿಕತೆ ಜಗತ್ತಿನ ಪ್ರಾಚೀನ ನಾಗರಿಕತೆಗಳ ಸಾಲಿಗೆ ಸೇರುತ್ತದೆ. ನಾಗರಿಕತೆಗಳು ಸಾಮಾನ್ಯವಾಗಿ ನದಿ ದಡದ ಮೇಲೆ ಉಗಮವಾಗಿರುತ್ತವೆ. ಭಾರತೀಯ ಸಂಸ್ಕೃತಿಗೆ ಈ ನಾಗರಿಕತೆ ಕೊಡುಗೆ ಅಪಾರ. ಇಲ್ಲಿ ದೊರೆತ ಅವಶೇಷಗಳು ಮತ್ತು ಕಟ್ಟಡಗಳು ಈ ನಾಗರಿಕತೆ ನಮಗೆ ಬಿಟ್ಟು ಹೋದ ಕಾಣಿಕೆ ಎನ್ನಬಹುದು. ವೇದಗಳು ನಮಗೆ ಸಾಹಿತ್ಯಕವಾಗಿ ಪ್ರಾಚೀನ ಇತಿಹಾಸವನ್ನು ಒದಗಿಸಿದರೆ, ಸಿಂಧೂ ನದಿ ನಾಗರಿಕತೆ ಅವಶೇಷಗಳ ಮೂಲಕ ನಮ್ಮ ಸಾಂಸ್ಕೃತಿಕ ಇತಿಹಾಸವನ್ನು ಮತ್ತಷ್ಟು ಪ್ರಾಚೀನ ಕಾಲಕ್ಕೆ ತೆಗೆದುಕೊಂಡು ಹೋಗಿವೆ.ಇಲ್ಲಿ ದೊರೆತ ಕಟ್ಟಡಗಳು, ಮುದ್ರೆಗಳು, ಸುಟ್ಟ ಮಣ್ಣಿನ ಗೊಂಬೆಗಳು, ಅಲಂಕಾರಕ್ಕೆ ಬಳಸುವ ದಂತದ ಸಾಮಾನುಗಳು ಇವೆಲ್ಲ ಈ ನಾಗರಿಕತೆಯನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ಧರ್ಮದ ಬಗ್ಗೆ ಅಧ್ಯಯನ ಮಾಡಲು ಪ್ರಮುಖ ಆಕರಗಳಾಗಿವೆ. ಪಟ್ಟಣಗಳೆಂದು ಹೇಳಲಾಗುವ ಹರಪ್ಪ, ಮೆಹಂಜೋದಾರೊ, ಲೋಥಾಲ್ ಪ್ರಮುಖ ಬಂದರಾಗಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಬಂದರಾಗಿತ್ತೆಂದರೆ ಜನನಿಬಿಡ ವ್ಯಾಪಾರಿ ನಗರವಾಗಿರಲೇಬೇಕು. ಇಲ್ಲಿಯ ನಗರಗಳು ತುಂಬಾ ವಿಶಾಲವಾಗಿ ಹರಡಿಕೊಂಡಿದ್ದಲ್ಲದೆ ಸುಸಜ್ಜಿತ ನಗರಗಳಾಗಿವೆ. ಆಧುನಿಕ ಕಾಲದ ಪಟ್ಟಣಗಳಂತೆ ಸೌಲಭ್ಯವನ್ನು ಹೊಂದಿದ್ದು, ಈ ನಗರ ವ್ಯವಸ್ಥೆಯನ್ನು ಅಧ್ಯಯನ ಮಾಡಿದರೆ ಇವರು ಪಟ್ಟಣ ಸಂಸ್ಕೃತಿಯನ್ನು ಹೊಂದಿದ್ದರು ಎಂಬುದು ತಿಳಿಯುತ್ತದೆ. ಈ ನಗರ ಪ್ರಮುಖ ವ್ಯಾಪಾರ ಕ್ಷೇತ್ರವಾಗಿತ್ತೆನ್ನಬಹುದು. ಕೃಷಿ ದೊಡ್ಡ ಪ್ರಮಾಣದ ಉತ್ಪಾದನಾ ಕ್ಷೇತ್ರವಾಗಿ ಬೆಳವಣಿಗೆಯನ್ನು ಹೊಂದಿ ಸರಕು ಸಾಗಾಣಿಕೆಗಾಗಿ ಮತ್ತೊಂದು ಸಂಸ್ಕೃತಿಯೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿರಬೇಕು. ವಸ್ತುವಿನಿಮಯದ ಬದಲಾಗಿ ಹಣವೆಂಬ ಚಲಾವಣೆ ಮಾಧ್ಯಮ ಪ್ರವೇಶ ಪಡೆದಿತ್ತು. ಅಲ್ಲಿ ವ್ಯಾಪಾರಿಸಂಸ್ಕೃತಿ ಇತ್ತೆಂದ ಮೇಲೆ ಎಲ್ಲವನ್ನು ವ್ಯಾಪಾರಿ ದೃಷ್ಟಿಕೋನದಿಂದ, ಹಣದ ಮೂಲಕ ಮೌಲ್ಯ ಕಟ್ಟುವುದು ಮಾನವನ ಸಹಜಗುಣವಾಗಿರುತ್ತದೆ. ಹಾಗಾಗಿ ಒಂದು ರೀತಿಯ ವ್ಯಾವಹಾರಿಕ ದೃಷ್ಟಿಕೋನ ರೂಢಿಸಿಕೊಂಡಿದ್ದ ಎಂದ ಮೇಲೆ ಅಲ್ಲಿ ಮಾತೃವಂಶೀಯತೆ ಅಸ್ಥಿರವಾಗಿತ್ತೆನ್ನಬಹುದು.

ಮಾತೃ ಆರಾಧನಾ ಪದ್ಧತಿ ಜಾರಿಯಿರುವ ಎಲ್ಲ ಲಕ್ಷಣಗಳು ಇವೆಯಾದರೂ ಗಂಡುದೈವಗಳು ಆಚರಣೆಯಲ್ಲಿರುವ ಬಗ್ಗೆ ನಿರ್ದಿಷ್ಟವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಸಿಂಧೂ ಕಣಿವೆಯಲ್ಲಿ ಪ್ರಧಾನವಾಗಿ ಕಂಡುಬರುವ ವಿಗ್ರಹಗಳೆಂದರೆ ನಗ್ನ ಸ್ತ್ರೀ ವಿಗ್ರಹಗಳು. ವಿಗ್ರಹಕ್ಕೆ ಅಲಂಕಾರಕ್ಕೆಂದು ಕಿವಿಯಲ್ಲಿ ಜುಮಕಿ ರೀತಿಯಲ್ಲಿ ಆಭರಣವನ್ನು ಹಾಕಿದಂತೆ

ಕಂಡುಬರುತ್ತದೆ. ಎಣ್ಣೆ ದೀಪ, ಧೂಪ ಉರಿಸಿದ ಗುರುತುಗಳು ಇವೆ(ಕಲವೀರ ಮನ್ವಾಚಾರ; ಮಾತೃದೇವತಾ ಆರಾಧನೆ, ಪುಟ ೪೪).

ಮಾತೃದೇವತಾ ಆರಾಧನೆ ಇತ್ತು ಎನ್ನುವುದು ಇಲ್ಲಿ ದೊರೆತಿರುವ ವಿಗ್ರಹಗಳಿಂದ ಖಚಿತವಾದರೂ ದೇವರಿಗೆ ಅಲಂಕಾರ ಮಾಡಲು ಆಭರಣಗಳನ್ನು ಅರ್ಪಿಸಿ ದೇವರನ್ನು ತೃಪ್ತಿ ಪಡಿಸುವ ಒಂದು ಬಗೆಯನ್ನು ಕಂಡುಕೊಂಡಿದ್ದರೆನ್ನಬಹುದು. ಆದಿಮಾನವ ಸಂಸ್ಕೃತಿಯಲ್ಲಿ ದೇವರನ್ನು ತೃಪ್ತಿ ಪಡಿಸಲು ಬಲಿ ಕೊಡುತ್ತಿದ್ದನು. ಆದರೆ ನಾಗರಿಕತೆ ಕಾಲದ ಮಾನವನಿಗೆ ದೇವರನ್ನು ಒಲಿಸಿಕೊಳ್ಳಲು ಇರುವ ಉದ್ದೇಶ ತನ್ನ ಮಹತ್ವಾಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವ ಮಾರ್ಗವಿದೆ. ವಸ್ತು ಒಡವೆ ಕೊಡುವ ಮೂಲಕ ಲಾಭದ ದೃಷ್ಟಿಕೋನದಿಂದ ನೋಡುವ ಪ್ರವೃತ್ತಿ ಬೆಳೆದಿದೆ.

ಸಿಂಧೂ ನಾಗರಿಕತೆಯಲ್ಲಿ ದೊರೆತ ವಿಗ್ರಹಗಳನ್ನು ಮುರೆಯವರು ಮೂರು ರೀತಿಯಲ್ಲಿ ವಿಂಗಡಿಸಿದ್ದಾರೆ. ಮೊದಲನೆಯದಾಗಿ ಪೂಜನೀಯ ಸ್ತ್ರೀ, ಎರಡನೆಯದಾಗಿ ಪೂಜನೀಯ ತಾಯಿ, ನಂತರ ಮಾನುಷಾಕಾರಗೊಂಡ ಯೋನಿ(ಕಲವೀರ ಮನ್ವಾಚಾರ; ಮಾತೃದೇವತಾ ಆರಾಧನೆ, ಪುಟ ೪೬). ಇಲ್ಲಿ ದೊರೆತ ಮಣ್ಣಿನ ವಿಗ್ರಹಗಳಲ್ಲಿ ಸ್ತ್ರೀ ಮತ್ತು ಪುರುಷರ ವಿಗ್ರಹಗಳೂ ದೊರೆಯುತ್ತವೆ. ಅದರ ಆಧಾರದ ಮೇಲೆ ಅವರ ಸಂಸ್ಕೃತಿಯನ್ನು ಅಧ್ಯಯನ ಮಾಡಲು ಅನುಕೂಲವಾಗುತ್ತದೆ. ಅದರಲ್ಲೂ ಸ್ತ್ರೀಯರ ಬಗ್ಗೆ ಮುರೆ ಅವರು ಮಾಡಿದ ವಿಂಗಡಣೆ ಸ್ತ್ರೀಯರನ್ನು ಸಮಾಜದಲ್ಲಿ ನೋಡುವ ರೀತಿ ಮಾತೃಸಂಸ್ಕೃತಿಯಲ್ಲಿದ್ದಂತೆ ಗೌರವದಿಂದ ಕೂಡಿತ್ತು. ಅವರ ಸ್ಥಾನಕ್ಕನುಗುಣವಾಗಿ ವ್ಯತ್ಯಾಸವಿರಲಿಲ್ಲ. ಆಧುನಿಕ ಸಮಾಜದಲ್ಲಿ ಮದುವೆಯಾದ ಮುತ್ತೈದೆ ಹೆಣ್ಣುಮಕ್ಕಳಿಗೆ ಮಾತ್ರ ಹೆಚ್ಚು ಗೌರವಾಧಾರ ತೋರಿಸಿ, ಅವಿವಾಹಿತ, ವಿಧವಾ, ಪಾತಿವ್ರತ್ಯದಂತಹ ಕಲ್ಪನೆಗಳಿಂದ ಸ್ತ್ರೀಯರನ್ನು ಕೀಳಾಗಿ ಕಾಣುವ ಮನೋವೃತ್ತಿ ಇರಲಿಲ್ಲವೆನಿಸುತ್ತವೆ. ಏಕೆಂದರೆ ವೈದಿಕರಂತೆ ನೀತಿ, ನಿಯಮ, ಕಟ್ಟಳೆಗಳ ಹೆಸರಲ್ಲಿ ಶಾಸನಗಳ ಮೂಲಕ ನಿರ್ಬಂಧಿಸುವ ಧಾರ್ಮಿಕ ವ್ಯವಸ್ಥೆ ಇರಲಿಲ್ಲ. ಧರ್ಮ ಲಿಖಿತ ರೂಪದಲ್ಲಿರುವುದಕ್ಕೂ, ಆಚರಣೆಗಳ ರೂಪದಲ್ಲಿರುವುದಕ್ಕೂ ಯಾವುದೇ ಆಧಾರಗಳು ದೊರೆತಿಲ್ಲವಾದ್ದರಿಂದ ದೊರೆತ ಆಧಾರಗಳು ಅವಕ್ಕೆ ಪುಷ್ಠಿಕೊಡುವುದಿಲ್ಲ. ಅಲ್ಲಿ ದೊರೆತ ನಗರ ವ್ಯವಸ್ಥೆಯಲ್ಲಿ ದೇವರ ಆರಾಧನೆಗೆ ಸಂಬಂಧಿಸಿದಂತೆ ಧಾರ್ಮಿಕ ಅದ್ಧೂರಿ ಆಚರಣೆಗಳಿಗೆ ಸಂಬಂಧಿಸಿದಂತೆ ದೇವಾಲಯಗಳಾಗಲಿ, ಅದಕ್ಕೆ ಸಹಸಂಬಂಧಿಯಾಗುವಂತಹ ಯಾವ ಅವಶೇಷಗಳು ದೊರೆತಿಲ್ಲ. ಸುಟ್ಟ ಇಟ್ಟಿಗೆಗಳಿಂದ ಮನೆಗಳ ನಿರ್ಮಾಣ ಮಾಡುವಷ್ಟು ವೈಚಾರಿಕ ಮನೋಭಾವನೆ ಹೊಂದಿದ್ದ ಮಾನವ ದೇವಾಲಯ ನಿರ್ಮಾಣ ಮಾಡಿದ್ದಾನೆ ಎಂಬ ಪ್ರಶ್ನೆ ಮೂಡುತ್ತದೆ. ಒಂದು ವೇಳೆ ದೇವಾಲಯಗಳು ನಿರ್ಮಾಣವಾಗಿದ್ದರೆ ಅದರ ಅವಶೇಷಗಳು ದೊರೆಯುತ್ತಿದ್ದವು. ದೇವಾಲಯವಾಗಲೀ ದೇವರ ಮೂರ್ತಿಶಿಲ್ಪವಾಗಲೀ, ದೊರೆತಿಲ್ಲ ಅಂದ ಮೇಲೆ ದೇವರ

ಹೆಸರಿನಲ್ಲಿ ಧರ್ಮ ಒಂದು ಸಂಘಟನಾತ್ಮಕ ಶಕ್ತಿಯಾಗಿ ಇನ್ನೂ ಉದಯವಾಗಿರುವ ಸಾಧ್ಯತೆ ಇರಲಿಲ್ಲ. ಧರ್ಮ ಮಾನವನ ಅಭಿವೃದ್ಧಿಗೆ ಪೂರಕವಾಗಿತ್ತಲ್ಲದೆ, ವರ್ಗ–ಜಾತಿ, ಉಚ್ಚ–ನೀಚ, ಪಾಪ–ಪುಣ್ಯ, ಸ್ವರ್ಗ–ನರಕದಂತಹ ಭ್ರಮಾತ್ಮಕ ಕಲ್ಪನೆ ಇರಲಿಕ್ಕಿಲ್ಲ.

ಸ್ತ್ರೀಗೆ ಮಾತೃಪ್ರಧಾನತೆಯಲ್ಲಿ ಇದ್ದ ಸ್ಥಾನವೇ ಮುಂದುವರಿದಿತ್ತೆನ್ನಬಹುದು. ಹೆಣ್ಣು ಶಕ್ತಿ ಸ್ವರೂಪವಾಗಿ ಚಾಮುಂಡಿ, ಕಾಳಿ, ದುರ್ಗೆಯರಂತೆ ಸ್ವತಂತ್ರವಾಗಿ ಗುರುತಿಸಿಕೊಳ್ಳುವ ಅಸ್ಮಿತೆಯನ್ನು ಹೊಂದಿದ್ದರೆನ್ನಬಹುದು. ತಾಯಿ ಮತ್ತು ಮಗುವಿನ ವಿಗ್ರಹ ದೊರೆತಿರುವುದರಿಂದ ಅವಳು ಒಂದು ಜೀವಿಯ ಸೃಷ್ಟಿ ಮತ್ತು ಅದರ ಪೋಷಕಿಯಾಗಿ ರಕ್ಷಕಿಯಾಗಿ ಮಾನ್ಯತೆ ಪಡೆದಿದ್ದಳು. ತಾಯಿ ಮಗುವನ್ನು ಜೊತೆಯಾಗಿ ಬಿಂಬಿಸಿರುವುದು, ಹಾಲುಣಿಸುವಿಕೆ, ಇದೆಲ್ಲ ಅಶ್ಲೀಲವೆಂಬ ಭಾವ ಆ ಸಮಾಜಕ್ಕೆ ಅಂಟಿಕೊಂಡಿರಲಿಲ್ಲ. ಅಂದು ಸ್ತ್ರೀಯರ ಮೊಲೆಗಳನ್ನು ಇಡೀ ವಿಗ್ರಹದಲ್ಲಿ ಒಂದು ಮುಖ್ಯ ಭಾಗದಂತೆ ತೋರಿಸಿರುವುದಕ್ಕೆ ಅದರ ಹಿಂದಿರುವ ಉದ್ದೇಶ ಪವಿತ್ರವಾಗಿತ್ತು. ಅಂಥ ಪವಿತ್ರ ಭಾವನೆಗಳನ್ನು ಹೊಂದಿದ್ದ. ಅಂದಿನ ನಾಗರಿಕ ಜನಾಂಗವನ್ನು ಅನಾಗರಿಕ ಎನ್ನುವ ಇಂದಿನ ಸಮಾಜ ಅನಾಗರಿಕವೆಂದು ತಪ್ಪಾಗಿ ಭಾವಿಸುತ್ತದೆ. ಅದೇ ವಿಗ್ರಹ ಕುರಿತಂತಾಗಲಿ, ಒಟ್ಟಾಗಿ ಸ್ತ್ರೀಯರ ಕುರಿತಂತಾಗಲಿ, ನಾವು ನಾಗರಿಕರೆಂದು ಕರೆದುಕೊಳ್ಳುವ ಇವತ್ತಿನ ಗಂಡಸರಿಗೂ ಎಷ್ಟೊಂದು ಅಪವಿತ್ರ ಭಾವನೆ ಇದೆ ಎಂದರೆ ಅವರು ಸ್ತ್ರೀಯರನ್ನು ಒಟ್ಟಾಗಿ ಗುರುತಿಸುವುದು. ಲೈಂಗಿಕ ದೃಷ್ಟಿಕೋನದಿಂದ ಎಂದರೆ ತಪ್ಪಾಗುವುದಿಲ್ಲ.

ಮುರೆ ಅವರು ಹೇಳಿದಂತೆ ಆ ಕಾಲದಲ್ಲಿ ಯೋನಿ ಆರಾಧನೆ ಇತ್ತೆನ್ನಲಾಗಿದೆ. ಮತೃದೇವತಾ ಆರಾಧನೆಯಲ್ಲಿ ಯೋನಿ ಆರಾಧನೆ ಒಂದು ವಿಶಿಷ್ಟ ಆರಾಧನಾ ಪದ್ಧತಿಯಾಗಿದೆ. ಹೆಣ್ಣು ಮತ್ತು ಭೂಮಿಯನ್ನು ಸಮಾನವಾಗಿ ಭಾವಿಸುವ ಮನೋಭಾವನೆ ಅವರಲ್ಲಿ ಉಂಟಾಗಿ, ಸ್ತ್ರೀಯನ್ನಷ್ಟೆ ಅಲ್ಲದೆ ಅವಳ ಗರ್ಭದಿಂದ ಹೊರಬರುವ ಅವಳ ದೇಹದ ಭಾಗವನ್ನು ವಿಶೇಷವಾಗಿ ಕಂಡಿರಬೇಕು. ಭೂಮಿ ಮತ್ತು ಹೆಣ್ಣಿಗೆ ಸಾಮ್ಯವನ್ನು ಗುರುತಿಸಿ ಹೆಣ್ಣಿನ ಪ್ರಜನನದ ಅಂಗ ಯೋನಿಪೂಜೆ ಮಾನ್ಯತೆಯನ್ನು ಹೊಂದಿತ್ತು. ಇಂದಿಗೂ ಕೂಡ ಹದಿನೆಂಟು ಶಕ್ತಿಪೀಠಗಳು ಇದ್ದು, ಅಲ್ಲಿ ಶಕ್ತಿ ದೇವತಾ ಆರಾಧನೆ ಮುಂದುವರಿದುಕೊಂಡು ಬಂದಿದೆ. ಅದರಲ್ಲಿ ಅಸ್ಸಾಂನ ಗೌಹಾಟಿ ಕಾಮಾಖ್ಯ ಯೋನಿಪೀಠ ಹದಿಮೂರನೇ ಪೀಠವಾಗಿದೆ. ಇಲ್ಲಿ ಯೋನಿಯಿಂದ ನೀರು ಹರಿಯುವ ರೂಪದಲ್ಲಿದೆ. ಅದನ್ನು ಪವಿತ್ರವೆಂದೇ ಭಾವಿಸಲಾಗಿದೆ. ವರ್ಷದಲ್ಲಿ ಆರು ದಿನಗಳ ಕಾಲ ಸ್ತ್ರೀ ಋತುಚಕ್ರ ಕ್ರಿಯೆಯಂತೆ ಕೆಂಪು ಬಣ್ಣದ ನೀರು ಹರಿಯುವುದು ವಿಶೇಷವೆನ್ನಲಾಗಿದೆ. ಅಲ್ಲಿ ಯೋನಿ ಪೂಜೆಯಲ್ಲದೆ, ಉಪದೇವತೆಗಳಂತೆ ಯೋಗಿನಿಯರ ಪೂಜೆಯೂ ನಡೆಯುತ್ತದೆ. ಅಲ್ಲದೆ ಅಲ್ಲಿ ಬಲಿ ನೀಡಲಾಗುತ್ತದೆ. ಆದರೆ ಶಕ್ತಿಯನ್ನು ಶಿವನೊಂದಿಗೆ ಸಮೀಕರಿಸುವ ಪೌರಾಣಿಕ ಕಥೆಯನ್ನು ಈ ಪೀಠಕ್ಕೆ ಕಲ್ಪಿಸಲಾಗಿದೆ.

ದಕ್ಷಯಜ್ಞದಲ್ಲಿ ದಾಕ್ಷಾಯಣಿ ಯಜ್ಞಕುಂಡದಲ್ಲಿ ಬಿದ್ದು ಅರೆಬೆಂದಾಗಲೆ ಶಿವ ಬಂದು ಆಕೆಯನ್ನು ರಕ್ಷಿಸಿ ದಾಕ್ಷಾಯಣಿಯನ್ನು ಹೊತ್ತು ಕೋಪದಿಂದ ನರ್ತಿಸುವಾಗ, ಆಕೆಯ ಅರೆಬೆಂದ ಅಂಗಾಂಗಳು ಬಿದ್ದ ಸ್ಥಳವೆಲ್ಲವೂ ಇಂದಿನ ಶಕ್ತಿ ಪೀಠಗಳಾಗಿವೆ. ಅದರಲ್ಲಿ ಯೋನಿ ಬಿದ್ದ ಸ್ಥಳವೇ ಕಾಮಾಖ್ಯ ಯೋನಿಪೀಠವಾಗಿದೆ ಎಂಬ ಕಥೆ ಇದೆ. ಅಲ್ಲದೆ ಶಿವ ಉಗ್ರ ತಪಸ್ಸು ಮಾಡಿದ ಕ್ಷೇತ್ರವೆನ್ನಲಾಗಿದೆ.

ಈ ನಾಗರಿಕತೆಯಲ್ಲಿ ನಗ್ನವಾಗಿರುವ ನೃತ್ಯದ ಭಂಗಿಯಲ್ಲಿರುವ ಕಂಚಿನ ಸ್ತ್ರೀ ವಿಗ್ರಹ ದೊರಕಿದೆ. ವಿದ್ವಾಂಸರ ಪ್ರಕಾರ ಇದು ನೃತ್ಯ ಮಾಡುವ ಭಂಗಿಯೇ ಆಗಿದ್ದರೂ ನೃತ್ಯ ಒಂದು ಪರಿಶುದ್ಧವಾದ ಕಲೆಯೂ ಆಗಿರಬಹುದು, ಇಲ್ಲವೆ ಏರಿಳಿತವಾಗುವ ಮನುಷ್ಯನ ಭಾವಾಭಿವ್ಯಕ್ತಿಯನ್ನು ಹೊರಹಾಕುವ ಒಂದು ರೀತಿಯೂ ಆಗಿರಬಹುದು. ಇಲ್ಲಿ ನೃತ್ಯದ ಒಂದು ಭಂಗಿಯೇ ಆಗಿರುವುದಾದರೆ, ಅವಳು ಪ್ರಸಿದ್ಧ ನೃತ್ಯಗಾರ್ತಿಯೇ ಇರಬಹುದು. ನೃತ್ಯವೆಂಬ ಪ್ರಕಾರವಿದ್ದು ಅದಕ್ಕೆ ವೇದಿಕೆ ನಿರ್ಮಾಣವಾಗಿತ್ತೆನ್ನುವುದಾದರೆ, ಅದು ಯಾವುದೇ ಆರ್ಥಿಕ ಹಿತಾಸಕ್ತಿಗಳ ಕೈಯಲ್ಲಿ ಸಿಕ್ಕು ಸ್ತ್ರೀಯರನ್ನು ಕಲಾಭಿವ್ಯಕ್ತಿ ಹೆಸರಲ್ಲಿ ಶೋಷಣೆ ಮಾಡುವುದಾಗಿರಲಿಲ್ಲ. ಅದೊಂದು ಶುದ್ಧ ಕಲೆಯಾಗಿರಬಹುದೇ ಹೊರತು ಪೌರೋಹಿತ್ಯ, ರಾಜಪ್ರಭುತ್ವಗಳ, ಶ್ರೀಮಂತರನ್ನು ರಂಜಿಸುವುದಕ್ಕೆ ಇದ್ದ ಶೋಷಿತ ಸಮುದಾಯ ವಾಗಿರಲಿಲ್ಲವೆಂದು ಖಚಿತವಾಗಿ ಹೇಳಬಹುದು.

"ಸಿಂಧೂ ನದಿ ನಾಗರಿಕತೆಯಲ್ಲಿ ಅವಶೇಷಗಳ ಮೂಲಕ ಕಂಡುಬರುವ ಮತ್ತೊಂದು ಆರಾಧನೆ ವೃಕ್ಷಾರಾಧನೆ. ವೃಕ್ಷವು ಮೊದಲು ಒಂದು ವೃಕ್ಷವಾಗಿದ್ದು ನಂತರ ಮಾನುಷಾಕಾರವನ್ನು ಹೊಂದುವಂತೆ ಹಲವು ಮುದ್ರೆಗಳಲ್ಲಿ ಚಿತ್ರಿಸಲಾಗಿದೆ. ಎರಡು ಮುದ್ರಿಕೆಗಳಲ್ಲಿ ಒಂದರಲ್ಲಿ ಓರ್ವ ಸ್ತ್ರೀ ಬೇವು ಅಥವಾ ಬನ್ನಿಯ ಮರದ ಕೆಳಗೆ ಕುಳಿತಿದ್ದು, ನೀಳವಾದ ದೇಹವನ್ನು ಎರಡೂ ಕೈಗಳನ್ನು ಪಡೆದಿದ್ದಾಳೆ. ಅವಳ ದೇಹವು ಬಳ್ಳಿಯ ಮಾದರಿಯಲ್ಲಿದ್ದು, ವೃಕ್ಷವೇ ಅವಳಾಗಿದ್ದಾಳೆ. ಅವಳ ಮುಂದೆ ಹುಲಿಯು ಕುಳಿತಿದ್ದು ಅದು ಅವಳನ್ನು ನೋಡುತ್ತಿರುವಂತಿದೆ".

"ಇನ್ನೊಂದು ಮುದ್ರೆಯಲ್ಲಿ ಮರದಿಂದ ಬೇರ್ಪಟ್ಟು ಹೊರಬಂದು ನಿಂತಿದ್ದಾಳೆ. ಮರವಾಗಿದ್ದವಳು ರೂಪಾಂತರಗೊಂಡು ಮಾನುಷಾಕಾರಗೊಂಡಿದ್ದಾಳೆ. ಹಿಂದೆ ಮುದ್ರೆಯಲ್ಲಿ ಕಂಡುಬರದ ಅಂಗಗಳು ಇಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ. ಆದರೆ ಈ ಮುದ್ರೆಯಲ್ಲಿ ಸ್ತನಗಳು ಎದ್ದು ಕಾಣುತ್ತವೆ. ಅಲ್ಲದೆ ದೇಹವು ಮನುಷ್ಯಳಾಗಿದ್ದರೆ, ಕೆಳಗಿನ ಭಾಗವು ಬಾಲವನ್ನು ಹೊಂದಿರುವ ಪ್ರಾಣಿಯಾಗಿದೆ. ಕೊಂಬಿನಿಂದ ತಲೆಯನ್ನು ಅಲಂಕರಿಸಿಕೊಂಡಿದೆ. ಮುಂದೆ ನಿಂತಿರುವ ಹುಲಿಯನ್ನು ಮುಟ್ಟುವಂತೆ ಬಾಗಿದ್ದಾಳೆ. ಇದು ವೃಕ್ಷದೇವತೆಯಾಗಿರುವಂತೆ ಪ್ರಾಣಿದೇವತೆಯೂ ಆಗಿರುವಳು"(ಕಲವೀರ ಮನ್ವಾಚಾರ; ಮಾತೃದೇವತಾ ಆರಾಧನೆ, ಪುಟ ೪೯). ಮೊದಲನೇ ಮುದ್ರಿಕೆಯಲ್ಲಿರುವುದು ವೃಕ್ಷದೇವತೆ ಮತ್ತು ವನ್ಯದೇವತೆಯೂ ಹೌದು ಎನ್ನಬಹುದು. ಹುಲಿ ವನ್ಯಸಂಕುಲ ಮತ್ತು ಕ್ರೂರಪ್ರಾಣಿಯೂ ಹೌದು. ವನ್ಯ ಸಂಕುಲ,

ವೃಕ್ಷಸಂಕುಲ, ಮಾನವಸಂಕುಲ ಭೂಮಿ ಮೇಲಿನ ಸರ್ವರಕ್ಷಕ ಶಕ್ತಿ ದೇವತೆಯಾಗಿದ್ದಾಳೆ. ಹುಲಿ ಇಲ್ಲಿ ದುಷ್ಟ, ದರ್ಪದ, ದಾಳಿ ಮಾಡುವ ಭಕ್ಷಕ ಪ್ರಾಣಿಯಾಗಿದೆ, ಅಂತಹ ಪ್ರಾಣಿಯನ್ನು ಪಳಗಿಸಿ ಅಡಿಯಾಳಾಗಿ ಮಾಡುಕೊಳ್ಳುವ ಸಂಕೇತವಾಗಿದೆ ಎನ್ನಬಹುದು. ಇವಳೇ ಮುಂದೆ ಶಕ್ತಿ ದೇವತೆ ದುರ್ಗೆಯಾಗಿರಬಹುದು.

ಎರಡನೇ ಮುದ್ರಿಕೆಯಲ್ಲಿರುವ ವಿಗ್ರಹ ಪ್ರಕೃತಿ ದೇವತೆಯಾಗಿದ್ದಾಳೆ. ಸಕಲ ಜೀವರಾಶಿಗಳನ್ನು ತನ್ನಲ್ಲಿ ಅಡಗಿಸಿಕೊಂಡು ಸಕಲ ಜಿವಾತ್ಮಳಾಗಿದ್ದಾಳೆ. ಸಕಲವನ್ನು ನಿಯಂತ್ರಿಸುವ ತಂತ್ರಾತ್ಮಿಕೆಯಾಗಿದ್ದಾಳೆ. ಮೊಲೆಯನ್ನು ಹೊಂದಿರುವುದರಿಂದ ಎಲ್ಲ ಜೀವರಾಶಿಗಳ ಪೋಷಕಿಯಾಗಿದ್ದಾಳೆ. ಅವಳು ಮಾತೃತ್ವದ ಸೌಮ್ಯರೂಪವೂ ಹೌದು, ಬಾಹ್ಯವಾಗಿ ಪ್ರಕೃತಿಯಿಂದ ಹೊರಬಂದಿರುವ, ಆದರೆ ಪ್ರಕೃತಿಯಲ್ಲಿಯ ಎಲ್ಲ ಅಂಶವನ್ನು ಒಳಗೊಂಡಿರುವ ಸೌಮ್ಯರೂಪದ ದೇವತೆಯಾಗಿರುವಳು. ತನ್ನ ಪೋಷಣೆಯಲ್ಲಿ(ಪ್ರಕೃತಿಯಲ್ಲಿ) ರಕ್ಷಿಸಿಕೊಂಡು ಬಂದಿರುವ ತನ್ನ ಯಾವುದಾದರೂ ಒಂದು ಅಂಶಕ್ಕೆ(ಮಕ್ಕಳಿಗೆ) ಯಾವುದೇ ರೂಪದಿಂದ ತೊಂದರೆ ಬಂದರೂ ಅವರನ್ನು ರಕ್ಷಿಸುವ ದೇವತೆಯಾಗಿ ದುಷ್ಟರಿಂದ ಕಾಪಾಡಿಕೊಳ್ಳುವ ಮಾತೃಸ್ವರೂಪಿಯಾಗಿ ಆರಾಧಿಸಲ್ಪಟ್ಟಿದ್ದಾಳೆ. ಈಕೆ ಮುಂದೆ ವೈದಿಕ ಕಾಲಕ್ಕೆ ಸೌಮ್ಯರೂಪದ ದೇವತೆಯರ ಸಾಲಿಗೆ ಸೇರುತ್ತಾಳೆ. ಲಕ್ಷ್ಮಿ, ಸರಸ್ವತಿ, ಸಪ್ತ ಮಾತೃಕೆಯರು ಈ ದೇವತೆಗಳ ಉದಾಹರಣೆಗಳು.

ಸಿಂಧೂ ನದಿ ನಾಗರಿಕತೆಯ ಕಾಲಾವಧಿಯಲ್ಲಿ ಕೃಷಿಯು ಪುರುಷನ ಹಿಡಿತಕ್ಕೆ ಬಂದು ಅವನೇ ಪ್ರಧಾನವಾಗಿದ್ದರೂ ನಗರ ವ್ಯವಸ್ಥೆಯಿದ್ದರೂ ಮಾತೃಪ್ರಧಾನತೆ ಅಂಶಗಳು ಅಸ್ತಿತ್ವದಲ್ಲಿದ್ದವು. ರಾಜ್ಯವ್ಯವಸ್ಥೆ ಅಸ್ತಿತ್ವದಲ್ಲಿಲ್ಲದೆ ಇರುವುದರಿಂದ ಸ್ತ್ರೀಯರ ಸ್ಥಾನಗಳು ಗೌರವದಿಂದ ಕೂಡಿದ್ದವು ಎಂದು ಹೇಳಬಹುದು. ಹೆಣ್ಣು ಪ್ರಕೃತಿಯ ಎಲ್ಲ ರೂಪಗಳಲ್ಲಿ ಆರಾಧಿಸಲ್ಪಡುತ್ತಿದ್ದಳು.

# ಅಧ್ಯಾಯ ಮೂರು

## ಶಾಸನಗಳಲ್ಲಿ ರಾಜಪ್ರಭುತ್ವ ಮತ್ತು ಸ್ತ್ರೀಯರು

೩.೧. ದ್ರಾವಿಡ ಸಂಸ್ಕೃತಿಯಲ್ಲಿ ಸ್ತ್ರೀಯರಿಗಿದ್ದ ಪ್ರಾಧಾನ್ಯತೆ.
೩.೨. ಕರ್ನಾಟಕದ ಮೇಲೆ ಮೌರ್ಯರ ಪ್ರಭಾವ
೩.೩. ರಾಜಪ್ರಭುತ್ವ ಮತ್ತು ಸ್ತ್ರೀಯರು.

### ೩. ೧. ದ್ರಾವಿಡ ಸಂಸ್ಕೃತಿಯಲ್ಲಿ ಸ್ತ್ರೀಯರಿಗಿದ್ದ ಪ್ರಾಧಾನ್ಯತೆ.

ಪ್ರಾಚೀನ ರಾಜಪ್ರಭುತ್ವದಲ್ಲಿ ನಮಗೆ ಐತಿಹಾಸಿಕವಾಗಿ ಶಾಸನೋಕ್ತ ದಾಖಲೆಗಳು ದೊರೆಯುವುದರಿಂದ ಆ ಕಾಲದ ಇತಿಹಾಸ ರಚನೆಗೆ ಅವು ಸಹಾಯಕವಾಗುತ್ತದೆ. ಮೌರ್ಯರು ದಕ್ಷಿಣ ಭಾರತದ ಮೇಲೆ ದಾಳಿ ಮಾಡಿ ದಕ್ಷಿಣ ಭಾರತವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರಿಂದ ಈ ಕಾಲಾವಧಿಯಲ್ಲಿ ನಮಗೆ ದೊರೆತ ಶಾಸನಗಳು ಸ್ತ್ರೀಯರ ಬಗ್ಗೆ ಮಹತ್ವದ ದಾಖಲೆಯನ್ನು ಒದಗಿಸದೇ ಹೊದರೂ ಅವರ ಪ್ರಭಾವ ಕರ್ನಾಟಕದ ಜನತೆ ಮೇಲೆ ಕಾಣಬಹುದಾಗಿದೆ. ಅದೇ ಆಧಾರವನ್ನಿಟ್ಟುಕೊಂಡು ನಾವು ಆ ಕಾಲದ ಮಹಿಳೆಯರ ಸಮಾಜವನ್ನು ಕುರಿತು ಅಧ್ಯಯನ ಮಾಡುವುದು ಸಮಂಜಸವೆನಿಸುವುದಿಲ್ಲ. ಕರ್ನಾಟಕದ ಮಹಿಳೆಯರನ್ನು ಕುರಿತು ಅಧ್ಯಯನ ಮಾಡಲು ನಮಗೆ ಸರಿಯಾದ ಶಾಸನೋಕ್ತ ಇಲ್ಲವೇ ಸಾಹಿತ್ತಿಕ ದಾಖಲೆಗಳು ಇಲ್ಲವಾಗಿವೆ. ಅಶೋಕನ ಶಾಸನಗಳಿಂದ ಅಲ್ಲಿ ಬ್ರಹ್ಮಗಿರಿಯ ದಕ್ಷಿಣಕ್ಕಿದ್ದ ಪ್ರದೇಶವನ್ನು ಈ ಕಾಲದಲ್ಲಿ ತಮಿಳೇತರ ವಡಗರು ಅಂದರೆ ಕಬಿನಿ–ಕಾವೇರಿಯ ನಡುವಣ ಪ್ರದೇಶ, ವೆಂಕಟಾದ್ರಿಯ ಉತ್ತರಭಾಗ ಮತ್ತು ತಮಿಳರು ಮಧ್ಯ ಕಾವೇರಿಯಿಂದ ಕನ್ಯಾಕುಮಾರಿಯವರೆಗೆ ಹಂಚಿಕೊಂಡಿದ್ದರು. ಅಶೋಕ ತನ್ನ ಹೆಬ್ಬಂಡೆ ಶಾಸನ ೧೩ ಮತ್ತು ೨ರಲ್ಲಿ ಸಕ್ರಮವಾಗಿ ಚೋಳ, ಪಾಂಡ್ಯ ರಾಜ್ಯಗಳಿಂದ ತಾಂಬ್ರಪರ್ಣಿಯ ವರೆಗೆ ಧರ್ಮಪ್ರಸಾರಕ್ಕೆ ಕಳಿಸಿದ್ದು ಮತ್ತು ಇವು ತನ್ನ ರಾಜ್ಯದ ಹೊರಗಿನ ಪ್ರದೇಶಗಳಾಗಿದ್ದವೆಂದು ಸ್ಪಷ್ಟಪಡಿಸಿರುವನು (ಶೆಟ್ಟರ್ ಷ.; ಶಂಗಂ ತಮಿಳಗಂ ಮತ್ತು ಕನ್ನಡ ನಾಡು, ನುಡಿ, ಪುಟ ೭೭, ೭೮). ಇದು ತಮಿಳೇತರರ ಭೂಪ್ರದೇಶವಾಗಿತ್ತು. ಅಲ್ಲಿ ವಡಗರು ಎನ್ನುವ ಒಂದು ಜನಾಂಗವಿತ್ತು. ಅದು ಕರ್ನಾಟಕಕ್ಕೆ ಸೇರಿದ್ದು ಎನ್ನವುದು ವಿದ್ವಾಂಸರ ಅಭಿಪ್ರಾಯ. ಈ ವಡಗರಲ್ಲಿ ಪ್ರಮುಖರಾದವರು ಪುನ್ನಾಟ, ಎರುಮೈ, ತುಳು, ಕೊಂಗ, ಕಟುಂಬ(ಕದಂಬ), ಮೊಹರ್, ಕೋಶರ್ ಇವರು ಬ್ರಹ್ಮಗಿರಿಯ ಕ್ಷಿಪ್ರ ನೈಋತ್ಯದಲ್ಲಿ ಆಳುತ್ತಿದ್ದರೆನ್ನಲಾಗುತ್ತಿದೆ(ಶೆಟ್ಟರ್ ಷ.; ಶಂಗಂ ತಮಿಳಗಂ ಮತ್ತು ಕನ್ನಡ ನಾಡು–ನುಡಿ, ಪುಟ ೭೮).

ಸಣ್ಣ ಪುಟ್ಟ ರಾಜ್ಯ ವ್ಯವಸ್ಥೆ ಇದ್ದ ಬಗ್ಗೆ ಮಾಹಿತಿ ಇದೆ. ಮತ್ತು ತಮಿಳರು, ಕನ್ನಡಿಗರು ತಮ್ಮ ಪ್ರದೇಶಗಳನ್ನು ಹಂಚಿಕೆ ಮಾಡಿಕೊಂಡಿದ್ದರ ಬಗ್ಗೆ ಮಾಹಿತಿ ಇದೆ. ಅಂದರೆ ಇವರು ಭೂಪ್ರದೇಶವನ್ನು ಹಂಚಿಕೊಂಡು ಆಳಿರುವುದರಿಂದ ಮೂಲತಃ ಎರಡೂ ಒಂದೇ ಭೂಪ್ರದೇಶವಾಗಿದ್ದು ನಂತರ ಹಂಚಿಕೊಂಡಿವೆ. ಎರಡೂ ಜನಾಂಗ ಒಂದೇ ದ್ರಾವಿಡ ವರ್ಗಕ್ಕೆ ಸೇರಿದವರೆನ್ನುವುದಂತೂ ಖಚಿತ. ಹಾಗಾಗಿ ನಮಗೆ ಆ ಕಾಲದ ಕನ್ನಡಿಗ ಸ್ತ್ರೀಯರನ್ನು ಅಧ್ಯಯನ ಮಾಡಲು ಶಂಗಂ ಸಾಹಿತ್ಯದಂತೆ ಯಾವುದೇ ಕನ್ನಡಿಗರ ಸಾಹಿತ್ಯ ದೊರೆಯದ ಕಾರಣಕ್ಕೆ ತಮಿಳರ ಶಂಗಂ ಸಾಹಿತ್ಯವನ್ನು ಅಧ್ಯಯನ ಮಾಡುವುದರ ಮೂಲಕ ಮೌರ್ಯ ಶಾತವಾಹನ ಪೂರ್ವದ ಕನ್ನಡಿಗ ಮಹಿಳೆಯರ ಬಗ್ಗೆ ತಿಳಿದುಕೊಳ್ಳಬಹುದು. ಮೂಲತಃ

ನಾವು ದ್ರಾವಿಡ ಸಂಸ್ಕೃತಿಯನ್ನು ಅಧ್ಯಯನ ಮಾಡಬೇಕಾದರೆ ತಮಿಳರ ಶಂಗಂ ಸಾಹಿತ್ಯದಿಂದ ಮಾಡಬಹುದು. ಶಾತವಾಹನರ ಮೇಲೆ ಮೌರ್ಯರ ಪ್ರಭಾವವಿದ್ದೇ ಇತ್ತು. ಶಾತವಾಹನರಿಂದ ನಮಗೆ ಹಲವಾರು ಮಾಹಿತಿ ದೊರೆಯುತ್ತವೆ. ಹಾಗಾಗಿ ಶಾತವಾಹನರ ಕಾಲದಲ್ಲಿ ಸ್ತ್ರೀಯರ ಬಗ್ಗೆ ಇತಿಹಾಸ ರಚಿಸಲು ಸಹಾಯಕವಾಗುತ್ತದೆ. ಆದರೆ ಮೌರ್ಯ ಮತ್ತು ಶಾತವಾಹನರಿಗಿಂತಲೂ ಪೂರ್ವದಲ್ಲಿ ಕರ್ನಾಟಕದಲ್ಲಿ ಮಹಿಳೆಯರ ಬಗ್ಗೆ ಅಧ್ಯಯನ ಮಾಡಲು ನಮಗೆ ಮಾಹಿತಿ ದೊರೆಯುವುದಿಲ್ಲ. ಕರ್ನಾಟಕ ಮತ್ತು ತಮಿಳುನಾಡಿನವರು ಒಂದೇ ದ್ರಾವಿಡ ಜನಾಂಗಕ್ಕೆ ಸೇರಿದವರಾಗಿರವುದರಿಂದ ಅವರಲ್ಲಿದ್ದ ಸಾಮಾಜಿಕ ವ್ಯವಸ್ಥೆಯೇ ಇಲ್ಲಿ ಇರುವ ಸಾಧ್ಯತೆ ಇದೆ. ಹಾಗಾಗಿ ನಮಗೆ ತಮಿಳರ ಶಂಗಂ ಸಾಹಿತ್ಯ ಈ ಅವಧಿಯಲ್ಲಿ ಒಟ್ಟಾಗಿ ದ್ರಾವಿಡ ಮಹಿಳೆಯರ ಜೀವನ ಅಧ್ಯಯನ ಮಾಡಲು ಶಂಗಂ ಸಾಹಿತ್ಯ ಸಹಾಯಕವಾಗಿದೆ. ಶಂಗಂ ಸಾಹಿತ್ಯದ ಆಧಾರದ ಮೇಲೆ ಕರ್ನಾಟಕದ ಮಹಿಳೆಯರ ಜೀವನ ತಿಳಿದುಕೊಳ್ಳಬಹುದು.

ಮೊದಲನೆಯದಾಗಿ ಹೆಣ್ಣುಮಕ್ಕಳ ಜನನವನ್ನು ಹೇಗೆ ಸ್ವೀಕರಿಸುತ್ತಿದ್ದರು ಎಂಬುದುನ್ನು ನೋಡಬೇಕು. ಸಂಗಂ ಕಾಲದ ಜನರು ಹೆಣ್ಣುಮಕ್ಕಳ ಜನನವನ್ನು ಸ್ವಾಗತಿಸುತ್ತಿದ್ದರು. ಅವರು ಹೆಣ್ಣು ಮಗುವಿಗೋಸ್ಕರ ದೇವರಲ್ಲಿ ಪ್ರಾರ್ಥಿಸುತ್ತಿದ್ದರು. ಹೆಣ್ಣುಮಗು ಜನಿಸದೇ ಹೋದರೆ ಆಘಾತ, ನಿರಾಶೆಯನ್ನು ವ್ಯಕ್ತಪಡಿಸುತ್ತಿದ್ದರು( Balasubramaniam C.; The Status of Women In Tamilnadu During The Sangam Age, p. 5, 6). ವೈದಿಕರಲ್ಲಿ ಹೆಣ್ಣುಮಗುವಿನ ಜನನ ಕುರಿತು ತಿರಸ್ಕಾರ ಭಾವವಿದೆ. ಈಗಲೂ ತಮಿಳರು ಹೆಣ್ಣು ಮಗು ಜನಿಸದಿದ್ದರೆ ನಿರಾಶರಾಗುತ್ತಾರೆ. ದ್ರಾವಿಡರಿಗೂ ವೈದಿಕರಿಗೂ ಎಷ್ಟೊಂದು ವೈರುಧ್ಯವಿದೆ. ಆದರೆ ದುರದೃಷ್ಟವಶಾತ್ ನಾವು ನಮ್ಮ ಸಂಸ್ಕೃತಿಯನ್ನು ಈ ವಿಚಾರದಲ್ಲಿ ತಳ್ಳಿ ಹಾಕಿ ವೈದಿಕರಂತೆ ಗಂಡುಮಗುವಿನ ಜನನವನ್ನು ಸ್ವೀಕರಿಸಿದಷ್ಟು ಸಂತೋಷದಿಂದ ಹೆಣ್ಣುಮಗುವಿನ ಜನನವನ್ನು ಸ್ವೀಕರಿಸುವುದಿಲ್ಲ. ಹೆಣ್ಣು ಮಗುವೆಂದು ಗೊತ್ತಾದ ತಕ್ಷಣ ಗರ್ಭಪಾತ ಮಾಡಿಸುವಷ್ಟು ಹೆಣ್ಣನ್ನು ತಿರಸ್ಕರಿಸುವ ಮನೋಭಾವನೆ ಬೆಳೆಸಿಕೊಂಡಿದ್ದೇವೆ.



ಹೆಣ್ಣುಮಗುವಿನ ಜನನವನ್ನು ಸ್ವೀಕರಿಸಿದಷ್ಟೇ ಸಂತೋಷದಿಂದ ಹೆಣ್ಣುಮಗುವನ್ನು ಬೆಳೆಸುತ್ತಿದ್ದರು. ಬಾಲ್ಯದಲ್ಲಿ ಅವರಿಗೆ ದೊರೆಯಬೇಕಾದ ಶಿಕ್ಷಣ ಮತ್ತು ಸಾಹಿತ್ಯ, ಸಂಗೀತ ಮತ್ತು ನಾಟಕದಲ್ಲಿ ಉತ್ತಮ ತರಬೇತಿ ನೀಡುತ್ತಿದ್ದರು. ಜೊತೆಗೆ ಪುರುಷರಿಗಿಂತಲೂ ಭಿನ್ನವಾದ ಶಿಕ್ಷಣವನ್ನು ನೀಡುತ್ತಿದ್ದರು. ಗೃಹವಿಜ್ಞಾನ ಶಿಕ್ಷಣವನ್ನು ಆಧುನಿಕ ಮಾದರಿಯಲ್ಲಿ ಸಂಗಂ ಕಾಲದಲ್ಲಿಯೇ ನೀಡುತ್ತಿದ್ದು, ಮನೆಯನ್ನು ನಿರ್ವಹಿಸಿಕೊಂಡು ಹೋಗುವ ತರಬೇತಿಯನ್ನು ಅಜ್ಜಿ ಮತ್ತು ತಾಯಿಯಿಂದ ಕಲಿಯುತ್ತಿದ್ದರು. ಐವತ್ತಕ್ಕಿಂತಲೂ ಹೆಚ್ಚಿನ ಕವಿಯತ್ರಿಯರು ಸಂಗಂ ಸಾಹಿತ್ಯದಲ್ಲಿ ಇದ್ದರು. ಅವರ ಹೆಸರುಗಳನ್ನು ಸಹ ಉಲ್ಲೇಖಿಸಲಾಗಿದೆ. ಸಂಗೀತಕ್ಕೆ ಸಂಬಂಧಿಸಿದಂತೆ ಸ್ತ್ರೀಯರು ಮೃದು ಮಧುರ ಕಂಠವನ್ನು ಹೊಂದಿದ್ದರು. ಸುಮಧುರ

ಮಿಡಿಯುವ ಭಾವನೆಗಳನ್ನು ಒಳಗೊಂಡ ಲುಲ್ಲುಬಿ(Lullaby) ಇದು ಸಂಗಂ ಕವನಗಳಲ್ಲಿ ಅತ್ಯಂತ ಆಸಕ್ತಿಯುತ ಭಾಗವೆನ್ನಲಾಗುತ್ತದೆ( Balasubramaniam C.; The Status of Women In Tamilnadu During The Sangam Age, p. 7, 8). ನೃತ್ಯಗಾರ್ತಿಯರಿದ್ದರೂ ಅವರೆಲ್ಲ ಇತಿಹಾಸದಲ್ಲಿ ಉಲ್ಲೇಖಿಸಲಾದ ಪಾತ್ರ ಅಥವಾ ಸೂಳೆ ಪರಂಪರೆಯವರಲ್ಲ. ಹೆಣ್ಣುಮಕ್ಕಳಿಗೆ ಶಿಕ್ಷಣ ಸಾಹಿತ್ಯದ ಜೊತೆಗೆ ನೃತ್ಯ ಮತ್ತು ನಾಟಕಗಳನ್ನು ಹೇಳಿಕೊಡಲಾಗುತ್ತಿತ್ತು. ರಂಗದ ಮೇಲೆ ವಿವಿಧ ಕಥಾವಸ್ತುಗಳನ್ನೊಳಗೊಂಡ ನಾಟಕಗಳನ್ನು ಪ್ರದರ್ಶಿಸುತ್ತಿದ್ದು, ಅದರಲ್ಲಿ ಪ್ರೇಮಕಥೆಗಳು ಇದ್ದವು. ನಾಟಕಕ್ಕೆ ಅಂಕಪರದೆಗಳನ್ನು ಬಳಸುತ್ತಿದ್ದರು. ಅಲ್ಲೆಲ್ಲ ಪ್ರಕೃತಿಯ ಚಿತ್ರಣವನ್ನು ತೋರಿಸುತ್ತಿದ್ದರೆನ್ನಲಾಗುತ್ತದೆ. ಒಂದು ರೀತಿ ದ್ರಾವಿಡರದು ಮುಂದುವರಿದ ಸಂಸ್ಕೃತಿ. ಅವರ ಸಾಮಾಜಿಕ ಜೀವನವನ್ನು ನೋಡಿದರೆ ಬಹು ಶ್ರೀಮಂತವಾಗಿತ್ತೆನಿಸುತ್ತದೆ. ಅಲ್ಲದೆ ಇವುಗಳನ್ನು ಅವರು ಯಾರಿಂದಲೂ ಪಡೆದುಕೊಂಡಿರುವಂತವಲ್ಲ. ಇವು ಅವರೇ ಸೃಷ್ಟಿಸಿದವು. ಆಗಿವೆ. ಹಾಗಾಗಿ ಇಲ್ಲಿ ಉಲ್ಲೇಖಿತವಾಗಿರುವುದು ಮೂಲ ದ್ರಾವಿಡ ಸಂಸ್ಕೃತಿಯಾಗಿದೆ.

ಈ ಮೇಲಿನ ಶಂಗಂ ಸಾಹಿತ್ಯದ ಉಲ್ಲೇಖವನ್ನು ನೋಡಿದರೆ ಎಲ್ಲೂ ಸ್ತ್ರೀಯರಿಗೆ ದ್ವಿತೀಯ ಸ್ಥಾನ ನೀಡಿಲ್ಲವೆನಿಸುತ್ತದೆ. ದ್ರಾವಿಡ ಮಹಿಳೆಯರು ತಮ್ಮ ಪುರುಷರಂತೆ ಅವರ ವ್ಯಕ್ತಿತ್ವಕ್ಕೆ ಸರಿಹೊಂದುವಂತಹ ಶಿಕ್ಷಣವನ್ನು ನಿಡುವುದರಲ್ಲಿ ವಂಚನೆ ಮಾಡಿಲ್ಲವೆನಿಸುತ್ತದೆ. ಸಾಹಿತ್ಯದ ವಿಚಾರದಲ್ಲೂ ಅಷ್ಟೇ, ಅಲ್ಲಿ ಉಲ್ಲೇಖವಾದ ಐವತ್ತಿಕ್ಕಂತಲೂ ಹೆಚ್ಚಿನ ಕವಯತ್ರಿಯರಿದ್ದರೆಂದರೆ ಅವರಿಗೆ ಶಿಕ್ಷಣ ಕೊಡುವಲ್ಲಿ ಹೆಣ್ಣೆಂಬ ತಾರತಮ್ಯವನ್ನು ಮಾಡಿಲ್ಲವೆನಿಸುತ್ತದೆ. ಅವರ ಸಾಹಿತ್ಯ ಮತ್ತು ಅವರ ಹೆಸರುಗಳು ಉಳಿದುಕೊಂಡು ಬಂದಿವೆಯೆಂದರೆ ಸ್ತ್ರೀ ಸಾಹಿತ್ಯವೆಂದು ಅದನ್ನು ಕಡೆಗಣಿಸಿಲ್ಲ. ಅದಕ್ಕೆ ತನ್ನದೇ ಆದ ಮೌಲ್ಯವಿದೆಯಾದ್ದರಿಂದ ಹಾಗೆ ಉಳಿದುಕೊಂಡು ಬಂದಿದೆ. ಆರ್ಯರಂತೆ ದ್ರಾವಿಡರು ಸ್ತ್ರೀಯರ ವಿಚಾರದಲ್ಲಿ ಶಿಕ್ಷಣದಲ್ಲಿ ವಂಚನೆ ಮಾಡಿಲ್ಲವೆನ್ನಬಹುದು.

ಹೆಣ್ಣು ಮಕ್ಕಳಿಗೆ ಕ್ರೀಡೆಗಳೆಂದರೆ ಇತ್ತೀಚಿನವರೆಗೂ ಅವರ ಕ್ಷೇತ್ರವಲ್ಲವೆಂಬ ಭಾವನೆ ಇದೆ. ಆದರೆ ಸಂಗಂ ಕಾಲದಲ್ಲಿ ದ್ರಾವಿಡರು ಹೆಣ್ಣುಮಕ್ಕಳಿಗೆ ಕ್ರೀಡೆಗಳನ್ನು ಏರ್ಪಡಿಸುತ್ತಿದ್ದರು. ಹೂವನ್ನು ಕೀಳುವ ಸ್ಪರ್ಧೆ, ನದಿಗಳಲ್ಲಿ ನೀರಿನಲ್ಲಿ ಮುಳುಗುವ ಸ್ಪರ್ಧೆ, ಸಣ್ಣ ಚಂಡಿನ ಆಟಗಳು, ಇನ್ನೂ ಹಲವಾರು ಆಟಗಳಲ್ಲಿ ಭಾಗವಹಿಸುತ್ತಿದ್ದರು(Balasubramaniam C.; The Status of Women In Tamilnadu During The Sangam Age, p. 6. 7). ಇತಿಹಾಸದುದ್ದಕ್ಕೂ ಹೆಣ್ಣುಮಕ್ಕಳಿಗೆ ಕ್ರೀಡೆಗಳನ್ನು ಏರ್ಪಡಿಸುವುದನ್ನು ನಮಗೆ ಎಲ್ಲೂ ಮಾಹಿತಿ ದೊರಕುವುದಿಲ್ಲ. ಇಲ್ಲಿ ಏರ್ಪಡಿಸಿರುವ ಕ್ರೀಡೆಗಳು ದೈಹಿಕ ಚಟುವಟಿಕೆಗೆ ಸಂಬಂಧಿಸಿದವು. ಗಂಡುಮಕ್ಕಳಂತೆ ಹೆಣ್ಣುಮಕ್ಕಳು ದೈಹಿಕ ಚಟುವಟಿಕೆಯ ಕ್ರೀಡೆಗಳಲ್ಲಿ ಭಾಗವಹಿಸುತ್ತಿದ್ದರು. ಆರ್ಯರಂತೆ ದ್ರಾವಿಡರು ಸ್ತ್ರೀಯರನ್ನು ಸಾಮಾಜಿಕ ಕ್ಷೇತ್ರಗಳಿಂದ ದೂರ ಇಟ್ಟಿರಲಿಲ್ಲ.

ಆದರೆ ಇತಿಹಾಸ ಮತ್ತು ಪ್ರಸ್ತುತ ಕಾಲವನ್ನು ನೋಡಿದರೆ ನಾವು ಸಂಪೂರ್ಣವಾಗಿ ನಮ್ಮದಲ್ಲದ ಸಂಸ್ಕೃತಿಯನ್ನು ಆಚರಿಸುತ್ತಿದ್ದು ಹೆಣ್ಣುಮಕ್ಕಳನ್ನು ವಂಚಿಸಿ ಕಟ್ಟಿಹಾಕುತ್ತಿದ್ದೇವೆ ಎಂದೆನಿಸುತ್ತದೆ. ಇಂಥ ಒಂದು ಪ್ರಬಲವಾದ ಸಂಸ್ಕೃತಿಯ ಮೇಲೆ ಅನ್ಯ ಸಂಸ್ಕೃತಿ ದಾಳಿ ಮಾಡಲಾಗಿ ತಾತ್ಕಾಲಿಕ ಕಣ್ಮರೆಯಾಗುವಂತೆ ಮಾಡಲಾಗಿದೆ. ಮೂಲತಃ ಮಹಿಳೆಯರನ್ನು ಸಾಮಾಜಿಕ ಚಟುವಟಿಕೆಯಿಂದ ವಂಚಿತರನ್ನಾಗಿ ಮಾಡುವುದು ನಮ್ಮ ದ್ರಾವಿಡ ಸಂಸ್ಕೃತಿಯಲ್ಲಿ ಇಲ್ಲವೆನ್ನಬಹುದು.

ದ್ರಾವಿಡ ಕುಟುಂಬಗಳಲ್ಲಿ ಹೆಣ್ಣುಮಕ್ಕಳಿಗೆ ಮಾನ್ಯತೆ ಇತ್ತೇ ಎಂಬ ಪ್ರಶ್ನೆ ಮೂಡುತ್ತದೆ. ಹೆಣ್ಣುಮಕ್ಕಳ ಅಭಿಪ್ರಾಯಗಳಿಗೆ ಬೆಲೆ ಇತ್ತು. ಅವರ ಅನಿಸಿಕೆಗಳನ್ನು ಮನ್ನಿಸುತ್ತಿದ್ದರು. ಪ್ರೀತಿ ಮಾಡುವ ಯುವಕನನ್ನು ಸಂಗಾತಿಯಾಗಿ ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರವಿತ್ತು. ಆಯ್ಕೆ ಪ್ರಶ್ನೆ ಬಂದಾಗ ಮದುವೆಯಾಗುವ ಯುವತಿಯೇ ಯುವಕನನ್ನು ಆಯ್ಕೆ ಮಾಡಿಕೊಳ್ಳಬಹುದಿತ್ತು. ಆಯ್ಕೆ ಮಾಡಿಕೊಳ್ಳಲು ಎತ್ತಿನ ಕಾಳಗದಲ್ಲಿ ಗೆಲ್ಲಬೇಕಿತ್ತು. ಎತ್ತಿನ ಜೊತೆ ಹೋರಾಡಿ ಗೆದ್ದ ಯುವಕನನ್ನು ತನ್ನ ಹೃದಯಕ್ಕೆ ಆಹ್ವಾನಿಸುತ್ತಿದ್ದಳಂತೆ. ಅದೇ ರೀತಿ ಇನ್ನೊಂದು ಫೈರ್ ಗೇಮ್ ಇತ್ತು. ಇದು ಬೆಂಕಿಯೊಂದಿಗಿನ ಸಾಹಸವಿದ್ದಿರಬಹುದು. ಇದರಲ್ಲಿ ಗೆದ್ದ ಯುವಕನನ್ನು ವಿವಾಹ ಮಾಡಿಕೊಡುವಂತೆ ತಂದೆ ತಾಯಿಗಳಲ್ಲಿ ಕೇಳುತ್ತಿದ್ದಳು. ಅವರು ಅದಕ್ಕೆ ಒಪ್ಪಿ ವಿವಾಹ ಮಾಡಿಕೊಡುತ್ತಿದ್ದರೆಂದು ಮಾಹಿತಿ ಇದೆ(Balasubramaniam C.; The Status of Women In Tamilnadu During The Sangam Age, p.10). ವಿವಾಹ ನಂತರ ವಿವಾಹವಾದ ಹೆಣ್ಣಿಗೂ ಅಷ್ಟೇ ಗೌರವ ಕೊಡುತ್ತಿದ್ದರು. 'Lamp of Home' ಎಂದು ಉಲ್ಲೇಖಿಸಲಾಗಿದೆ. ಹೆಣ್ಣಿಲ್ಲದ ಮನೆ ಕತ್ತಲೆ ಆವರಿಸಿದಂತೆ. ಅವಳಿಲ್ಲದೆ ನಡೆಯುವುದೇ ಇಲ್ಲ. ಗೃಹಿಣಿ ಮನೆಯಲ್ಲಿ ಎಲ್ಲರಿಗೂ ಮಾರ್ಗದರ್ಶನ ಮಾಡುತ್ತಾ ಮುನ್ನಡೆಸುವವಳಾಗಿದ್ದಳು. ಗಂಡ ಹೆಂಡತಿಯನ್ನು ಅಷ್ಟೇ ಆದರದಿಂದ ನೋಡಿಕೊಳ್ಳುತ್ತಿದ್ದ. ಇಬ್ಬರ ಸಂಬಂಧ ಒಂದು ಹಕ್ಕಿಗೆ ಎರಡು ರೆಕ್ಕೆಗಳಿದ್ದಂತೆ ಇದ್ದರು. ಗಂಡನಿಗೆ ಹೆಂಡತಿ ಕಿಂಗ್ ಪಿನ್ ಇದ್ದಂತೆ. ಅಂದರೆ ಆ ಮನೆಗೆ ಅವಳು ಗವರ್ನರ್ ಇದ್ದಂತೆ. ಎಲ್ಲರೊಂದಿಗೆ ಸಹಕಾರ, ಕರುಣೆಯಿಂದ ಗಂಡನ ಜೊತೆ ಜೀವಿಸುತ್ತಿದ್ದಳು(Balasubramaniam C.; The Status of Women In Tamilnadu During The Sangam Age, p. 17, 18). ಈ ಹೇಳಿಕೆಗಳನ್ನು ನೋಡಿದಾಗ ದ್ರಾವಿಡ ಮಹಿಳೆಯರಿಗೆ ಕುಟುಂಬದಲ್ಲಿ ಅವಳದೇ ಆದ ಅಧಿಕಾರಗಳಿದ್ದವು. ಅಲ್ಲಿ ಗಂಡನ ಹಸ್ತಕ್ಷೇಪವಿಲ್ಲದಿರುವುದು ಮತ್ತು ಮನೆಯ ಒಡತಿ ಅವಳೇ ಅಗಿದ್ದಳೆನಿಸುತ್ತದೆ. ಹಾಗಾದರೆ ಹೆಣ್ಣನ್ನು ದಾಸೀ ರೂಪದಲ್ಲಿ ದ್ರಾವಿಡ ಪುರುಷರು ನಡೆಸಿಕೊಂಡಿಲ್ಲ. ಅವಳು ಅವನಂತೆ ಕುಟುಂಬದ ಒಂದು ಭಾಗವಾಗಿದ್ದಳು. ಅವಳಿಗೆ ಅಲ್ಲಿ ಪೂರ್ಣ ಸ್ವಾತಂತ್ರ್ಯವಿತ್ತು. ಆದರೆ ಒಂದು ಆಶ್ಚರ್ಯದ ಸಂಗತಿ ಎಂದರೆ ಕೆಲವು ಮಹಿಳೆಯರು ಸತಿ ಹೋಗುವುದಾಗಿ ಒಪ್ಪಂದ ಮಾಡಿಕೊಂಡಿದ್ದರೆಂದು ಉಲ್ಲೇಖಿಸಲಾಗಿದೆ. ಆದರೆ ಇದು ಸತಿಪತಿಗಳ ಮಧ್ಯ

ಇದ್ದ ಅನ್ಯೋನ್ಯ ಬಾಂಧವ್ಯದ ಬಂಧನವಿತ್ತು. ಸ್ವಾರ್ಥ ಕಾರಣಗಳಿಂದ ರೂಪಿಸಿದ ಕೃತ್ಯವಿದು ಎಂದೆನಿಸುವುದಿಲ್ಲ. ಏಕೆಂದರೆ ಅಂತಹ ಯಾವ ಅಂಶಗಳ ಹಿನ್ನಲೆ ಇಲ್ಲಿ ಕಂಡುಬರುವುದಿಲ್ಲ.

ತಮಿಳು ದ್ರಾವಿಡ ಮಹಿಳೆಯರು ಕೆಲವೊಮ್ಮೆ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರೆನ್ನಲಾಗಿದೆ. ತುಂಬಾ ಧೈರ್ಯವಂತ ಹೆಣ್ಣುಮಕ್ಕಳು ತಮ್ಮ ಸಹೋದರ ಇಲ್ಲವೇ ಗಂಡನೊಂದಿಗೆ ಯುದ್ಧಕ್ಕೆ ಹೋಗುತ್ತಿದ್ದರು. ಯುದ್ಧಭೂಮಿಯಲ್ಲಿ ಯುದ್ಧ ಉಡುಗೆಗಳನ್ನು ತೊಟ್ಟು ಹೋಗುತ್ತಿದ್ದಳೆನ್ನಲಾಗುತ್ತದೆ. ಹಾಗೆ ಯುದ್ಧಭೂಮಿಯಲ್ಲಿ ಶೌರ್ಯವನ್ನು ಪ್ರದರ್ಶಿಸುವ ಹೆಣ್ಣುಮಕ್ಕಳಿಗೆ 'ಮುದಿನ್ ಮುಲ್ಲಿ' ಎಂದು ಕರೆಯುತ್ತಿದ್ದರು (Balasubramaniam C.; The Status of Women In Tamilnadu During The Sangam Age, p. 17). ದ್ರಾವಿಡರಲ್ಲಿ ರಾಜ್ಯವ್ಯವಸ್ಥೆ ಇದ್ದು, ಆಗಾಗ ಯುದ್ಧಗಳು ಸಂಭವಿಸುತ್ತಿದ್ದಿರಬೇಕು.

ಭೂಪ್ರದೇಶ ಮತ್ತು ಜನಾಂಗದ ದೃಷ್ಟಿಕೋನದಿಂದ ಒಂದೇ ಮೂಲವನ್ನು ಹೊಂದಿರುವುದರಿಂದ ತಮಿಳರ ಸ್ತ್ರೀಯರ ಜೀವನಶೈಲಿಗೂ ಕನ್ನಡಿಗ ಮಹಿಳೆಯರ ಜೀವನ ಶೈಲಿಗೂ ಅಂತಹ ವ್ಯತ್ಯಾಸವೇನೂ ಇರಲು ಸಾಧ್ಯವಿಲ್ಲವೆನಿಸುತ್ತದೆ. ಶಂಗಂ ಸಾಹಿತ್ಯದಲ್ಲಿ ಸ್ತ್ರೀಯರಿಗೆ ದೊರೆತಿದ್ದ ಪ್ರಾಧಾನ್ಯತೆ ಮತ್ತು ಎಲ್ಲ ಕ್ಷೇತ್ರಗಳಲ್ಲೂ ಅವರ ಸಹಭಾಗಿತ್ವವನ್ನು ಅಧ್ಯಯನ ಮಾಡಿದಾಗ ಮಾತೃಸತ್ತೆಯ ಅಂಶಗಳು ಕಾಣುತ್ತವೆ. ಸ್ತ್ರೀಯರು ಗೌರವದಿಂದ ಜೀವಿಸುತ್ತಿದ್ದರು. ಮುಖ್ಯವಾಗಿ ಅವರಿಗೆ ಸಮಾಜ ಮತ್ತು ಕುಟುಂಬ ಎರಡೂ ಕಡೆ ಸ್ವಾತಂತ್ರ್ಯವಿತ್ತು.

**೩. ೨. ಕರ್ನಾಟಕದ ಮೇಲೆ ಮೌರ್ಯರ ಪ್ರಭಾವ**

ಮನುಷ್ಯ ತನ್ನ ವೈಚಾರಿಕತೆ ಮತ್ತು ಆವಿಷ್ಕಾರಗಳಿಂದ ಇತಿಹಾಸದ ಕಾಲಘಟ್ಟದಲ್ಲಿ ಪ್ರಗತಿಯತ್ತ ಸಕ್ರಿಯನಾಗಿ ಮುಂದುವರಿದುಕೊಂಡೇ ಬಂದಿದ್ದಾನೆ. ಪ್ರಸ್ತುತ ಕಾಲದಲ್ಲಿ ನಿಂತು ನೋಡಿದಾಗ ಮಾನವ ಸೃಷ್ಟಿಸಿದ ಈ ಸಮಾಜದ ರಾಜಕೀಯ, ಆರ್ಥಿಕ, ಸಾಮಾಜಿಕ, ಮತ್ತು ಧಾರ್ಮಿಕ ರಂಗವೂ ವ್ಯವಸ್ಥಿತವಾಗಿ ರಚನೆಯಾಗುವುದರ ಹಿಂದೆ ಮಾನವನ ಹುಚ್ಚು ಮಹತ್ವಾಕಾಂಕ್ಷೆ ಇದೆ. ಅದೇನೆಂದರೆ ಎಲ್ಲವೂ ತನ್ನ ವಶದಲ್ಲಿರಬೇಕೆಂಬ, ಮತ್ತು ಅವು ತನ್ನ ಅಧೀನದಲ್ಲೇ ಮುಂದುವರಿಯಬೇಕೆಂಬುದು. ಇದೇ ಉದ್ದೇಶದಿಂದಲೇ ರಾಜಪ್ರಭುತ್ವಗಳು ಹುಟ್ಟಿಕೊಂಡಿದ್ದು. ಕಾಲದ ಚಲನೆಯ ಗತಿಯಲ್ಲಿ ಸ್ತ್ರೀ ಪ್ರಧಾನಳಾಗಿರುವವರೆಗೂ ಇಂಥ ಯಾವ ಆಕಾಂಕ್ಷೆಗಳೂ ಇದ್ದಂತೆ ಕಂಡುಬರುವುದಿಲ್ಲ. ಕಾರಣ ಆಗ ಇದ್ದುದು ಬರೀ ಜೀವಿಸುವಿಕೆ ಮತ್ತು ಅದಕ್ಕೆ ಬೇಕಾದ ಪ್ರಾಥಮಿಕ ಅಗತ್ಯತೆಗಳು ಮಾತ್ರ. ಅಷ್ಟೇ ಅವರ ಜೀವನದ ಆಕಾಂಕ್ಷೆಯಾಗಿತ್ತು. ಆದರೆ ಯಾವಾಗ ಸ್ತ್ರೀಯನ್ನು ಅಪ್ರಧಾನಳನ್ನಾಗಿ ಗುರುತಿಸಿ ಪುರುಷ ತನ್ನ ನಂತರದ, ದ್ವಿತೀಯ ಸ್ಥಾನಕ್ಕೆ ತಳ್ಳಿದನೋ ಅಂದಿನಿಂದಲೇ ಪುರುಷ ವಿಷಯಾಸಕ್ತನಾಗಿ ರಾಜಪ್ರಭುತ್ವದ ಮಹತ್ವಾಕಾಂಕ್ಷೆಯ ವರ್ತುಲದಲ್ಲಿ ಸಿಲುಕಿ ಮಾನವ ಮಾನವನನ್ನೇ ಕಡೆಗಣಿಸಿ

ವರ್ಗ ಸೃಷ್ಟಿಸಿದ. ತಮ್ಮ ಅಸ್ತಿತ್ವಕ್ಕೆ ಕಾರಣಳಾದ ಸ್ತ್ರೀಯನ್ನೇ ಅಸಮರ್ಥಳೆಂದು ಕುಟುಂಬದಲ್ಲಿ ಬಂಧಿಸಿಟ್ಟ. ಇಂಥ ರಾಜಪ್ರಭುತ್ವಗಳ ಉಗಮದ ಆರಂಭದ ಅವಧಿಯಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಹೇಗಿದ್ದವು ಎಂಬುದನ್ನು ಅಧ್ಯಯನ ಮಾಡುವುದು ನನ್ನ ಅಧ್ಯಯನದ ಮುಂದಿನ ಹಂತವಾಗಿದೆ. ಈ ಅಧ್ಯಾಯದಲ್ಲಿ ರಾಜಪ್ರಭುತ್ವದ ಆರಂಭಿಕ ಕಾಲದಿಂದ ಹತ್ತನೇ ಶತಮಾನದವರೆಗಿನ ಅವಧಿಯನ್ನು ಕುರಿತಾಗಿ ಸಂಕ್ಷಿಪ್ತವಾದ ಪರಿಕಲ್ಪನೆಯನ್ನು ಇಲ್ಲಿ ಮಾಡಿದ್ದೇನೆ.

ಇತಿಹಾಸದ ಅಧ್ಯಯನ ಸಿಂಧೂ ನದಿ ನಾಗರಿಕತೆಯಿಂದಲೇ ಆರಂಭವಾಗುತ್ತದೆ. ಸಿಂಧೂ ನದಿ ಮತ್ತು ಅಲ್ಲಿಯ ಜನಾಂಗ ಅನ್ಯ ಜನಾಂಗದ ಪ್ರವೇಶಕ್ಕೆ ಒಂದು ರೀತಿಯಲ್ಲಿ ತಡೆಗೋಡೆಯಂತ್ತಿತ್ತು. ಈ ಅವಧಿಯಲ್ಲಿ ಭಾರತದ ಇತರೆಡೆಗಳಲ್ಲಿ ಅನ್ಯಸಂಸ್ಕೃತಿಯ ಜನರು ಅಸ್ತಿತ್ವದಲ್ಲಿ ಇದ್ದ ಯಾವುದೇ ದಾಖಲೆಗಳು ನಮಗೆ ದೊರೆಯುವುದಿಲ್ಲ. ಅಂದ ಮಾತ್ರಕ್ಕೆ ಅಲ್ಲಿ ಮಾನವನ ಅಸ್ತಿತ್ವವೇ ಇಲ್ಲವೆಂಬ ತೀರ್ಮಾನಕ್ಕೆ ಬರುವುದು ತಪ್ಪು ಚಿಂತನೆಯಾಗುತ್ತದೆ. ಆದರೆ ಸಿಂಧೂ ನದಿ ತೀರದ ಜನಾಂಗದಂತಹ ಪ್ರಬಲವಾದ ಒಂದು ನಾಗರಿಕ ಜನಾಂಗ ಇರಲಿಲ್ಲವೆಂಬುದು ಈಗಿನ ಸದ್ಯದ ತೀರ್ಮಾನವಾಗಿದೆ. ಇಂಥ ಒಂದು ಪ್ರಬಲವಾದ ಸಂಸ್ಕೃತಿಯ ಅವಸಾನ ಭಾರತಕ್ಕೆ ದುರದೃಷ್ಟವೋ, ಅದೃಷ್ಟವೋ ತಿಳಿಯದು. ಇಂಥ ಸಂದಿಗ್ಧತೆಗೆ ಉತ್ತರ ಹಲವಾರು, ಏಕೆಂದರೆ ಅನ್ಯಸಂಸ್ಕೃತಿಯ ಜನಾಂಗಗಳು ಭಾರತವನ್ನು ಮುಕ್ತವಾಗಿ ಪ್ರವೇಶ ಮಾಡುವುದಕ್ಕೆ ಅವಕಾಶ ಮಾಡಿಕೊಟ್ಟಿತು. ಅವೆಲ್ಲ ಪ್ರಬಲವಾದ ಗಂಡಾಳಿಕೆಯ ಜನಾಂಗಗಳೇ ಆಗಿದ್ದವು. ಸಿಂಧೂ ನದಿ ನಾಗರಿಕತೆ ಕಾಲದಲ್ಲಾಗಲೇ ಮಾತೃಪ್ರಧಾನ ಸಂಸ್ಕೃತಿ ಪ್ರಭಾವ ಕಡಿಮೆಯಾಗಿತ್ತು ಎನ್ನುವುದು ಅಲ್ಲಿ ದೊರೆತ ಕುರುಹುಗಳಾಧಾರದ ಮೇಲೆ ತೀರ್ಮಾನಕ್ಕೆ ಬರಲಾಗಿದೆ. ಸಿಂಧೂ ನದಿ ನಾಗರಿಕತೆ ಅವಸಾನ ಮಾತೃಪ್ರಧಾನ ಸಂಸ್ಕೃತಿ ಅಳಿಸಿ ಹಾಕಿ ಅದೇ ಅವಶೇಷಗಳಿಂದ ಆರ್ಯರು ಪುರುಷ ಪ್ರಧಾನ ವೈದಿಕ ಸಮಾಜವನ್ನು ನಿರ್ಮಾಣ ಮಾಡಿದರು. ಭಾರತದ ಮೂಲನಿವಾಸಿಗಳಾದ ದ್ರಾವಿಡರು ಆರ್ಯರ ಸಾಂಸ್ಕೃತಿಕ ದಾಳಿಗೆ ತತ್ತರಿಸಿ ಕ್ರಮೇಣ ಜನನಿಬಿಡವಾಗಿದ್ದ ದಕ್ಷಿಣಕ್ಕೆ ಸರಿದಿರಬೇಕು. ಇಲ್ಲಿಯೇ ತಮ್ಮ ಜೀವನ ಆರಂಭಿಸಿರುವ ಸಾಧ್ಯತೆ ಇದೆ.

ಆರ್ಯರ ಆಗಮನದ ನಂತರ ಉತ್ತರ ಭಾರತ ಸತತವಾಗಿ ವಿದೇಶಿಯರ ದಾಳಿಗೆ ಒಳಗಾಗತ್ತಲೇ ಮುಂದುವರಿಯುತ್ತದೆ. ಒಂದು ರೀತಿಯಲ್ಲಿ ಅತಿಕ್ರಮಣದ ಮೂಲಕವೇ ನೆಲೆ ಕಂಡುಕೊಂಡ ಆರ್ಯರು ಬಹುಕಾಲ ನೆಮ್ಮದಿಯಿಂದ ಜೀವಿಸಲಿಲ್ಲವೆಂದೇ ಹೇಳಬಹುದು, ಇದಕ್ಕೆ ಕಾರಣ ಅವರ ಆಕ್ರಮಣ ಪ್ರವೃತ್ತಿ. ಅದಕ್ಕೆ ಪೂರಕವೆಂಬಂತೆ ಅವರ ಹೇರುವಿಕೆಯ ಮನೋಭಾವ. ಆಡಳಿತ ನಡೆಸುವ ಉದ್ದೇಶದಿಂದ ರಾಜ್ಯಗಳ ನಿರ್ಮಾಣವನ್ನು ಮಾಡಿಕೊಂಡರು. ಆದರೆ ಅದು ಬರೀ ಆಡಳಿತಕ್ಕೆ ಮಾತ್ರ ಸೀಮಿತವಾಗಿರದೆ, ಅವರ ಮಹತ್ವಾಕಾಂಕ್ಷೆ ಪೈಪೋಟಿಗಿಳಿಯುವಂತೆ ಮಾಡಿತು. ಅದು ಯುದ್ಧಕ್ಕೆ ನಾಂದಿ ಹಾಡಿತು. ಕ್ರಿ.ಶಕದ ಆರಂಭದ ವೇಳೆಗೆ ಆಂತರಿಕ ಪೈಪೋಟಿಯ ಜೊತೆಗೆ ವಿದೇಶಿ ದಾಳಿಯನ್ನು ಎದುರಿಸಬೇಕಾಯಿತು. ಅವರಂತೆ ಹಲವಾರು ವಿದೇಶಿ ಸಂಸ್ಕೃತಿಗೆ ಸೇರಿದ ಜನಾಂಗಗಳು

ಉತ್ತರ ಭಾರತದ ಮೇಲೆ ಆಕ್ರಮಣ ಮಾಡಿದರು. ಕೆಲವರು ಇಲ್ಲಿಯೇ ನೆಲೆಯೂರಿದರು, ಕೆಲವರು ವಾತಾವರಣಕ್ಕೆ ಹೊಂದಿಕೊಳ್ಳದೇ ಮರಳಿದರು. ಗ್ರೀಕರು, ಹೂಣರು, ಗೂರ್ಜರ ಶಕರು, ಮುಂತಾದವರು. ಈ ವೇಳೆಗೆ ಉತ್ತರಭಾರತದಲ್ಲಿ ಗುಪ್ತರ ಬಲಿಷ್ಠ ಸಾಮ್ರಾಜ್ಯ ಉದಯವಾಯಿತು. ನಂತರ ಉದಯವಾದ ಬೌದ್ಧಧರ್ಮ ವೈದಿಕರಿಗೆ ಅಭದ್ರತೆ ಹುಟ್ಟಿಸಿತು, ವೈದಿಕರು ಭೌತಿಕ ಆಚರಣೆಗೆ ಮಹತ್ವ ನೀಡಿದ್ದರೆ, ಬೌದ್ಧಧರ್ಮ ಬೌದ್ಧಿಕವಾಗಿ ತತ್ವಾಚರಣೆಗಳಿಗೆ ಮಾತ್ರ ಮಹತ್ವ ನೀಡಿದ್ದರಿಂದ, ವೈದಿಕ ಧರ್ಮದಿಂದ ದೂರವಾಗಿ ಜನ ಅತಿ ಬೇಗನೆ ಬೌದ್ಧಧರ್ಮದ ಕಡೆಗೆ ತಿರುಗಿನೋಡುವಂತಾಯಿತು. ಬೌದ್ಧಧರ್ಮಕ್ಕೆ ದೊರೆತ ಮೌರ್ಯರ ರಾಜಾಶ್ರಯ, ಅಶೋಕನು ಬೌದ್ಧಧರ್ಮೀಯನಾಗಿ ತೋರಿದ ಅತಿಯಾದ ಒಲವು ಇಡೀ ಭಾರತದಾದ್ಯಂತವಲ್ಲದೆ, ವಿದೇಶಗಳಲ್ಲೂ ಪ್ರಚಾರ ಪಡೆಯಿತು. ಆ ಕಾಲಘಟ್ಟದಲ್ಲಿ ಭದ್ರವಾಗಿ ನೆಲೆಯೂರಿತು.

ಈ ಎಲ್ಲ ಸಾಮಾಜಿಕ ಬದಲಾವಣೆ, ರಾಜಕೀಯ ಪೈಪೋಟಿ, ಧಾರ್ಮಿಕ ಪ್ರಭಾವ ವಿದೇಶಿಯರ ದಾಳಿಯ ಮಧ್ಯೆ ಸ್ತ್ರೀಯರ ಬದುಕಿನಲ್ಲಿ ಸ್ಥಿತ್ಯಂತರಗಳಾದವು. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಅವಳಿಗೆ ದೊರೆತದ್ದು ಪತ್ನಿಯಾಗಿ ಪುರುಷನ ನಂತರದ ಸ್ಥಾನ. ಹೆಚ್ಚಿನ ಸೇವೆ ಮತ್ತು ವಿಲಾಸಿ ಜೀವನಕ್ಕಾಗಿ ದಾಸಿ, ಸೇವಕಿಯರನ್ನು ನೇಮಿಸಿಕೊಂಡು ಅವರಿಂದ ಎಲ್ಲ ರೀತಿಯ ಅನುಕೂಲತೆ, ಸೇವೆಯನ್ನು ಪಡೆದರು. ತಮ್ಮ ಸೇವೆ ಹೊರತು ಅವರಿಗೆ ಸಮಾಜದಲ್ಲಿ ಸ್ಥಾನ ಮತ್ತು ವೃತ್ತಿ ಇಲ್ಲದಂತೆ ಮಾಡಿದರು. ಅಶೋಕನಂತಹ ಧರ್ಮಿಷ್ಠರೆನಿಸಿಕೊಂಡ ದೊರೆಗಳ ಕಾಲದಲ್ಲಿಯೂ ಸ್ತ್ರೀಯರ ಬದುಕಿನಲ್ಲಿ ಬದಲಾವಣೆಯಾಗಲಿಲ್ಲ. ತಾವು ನಂಬಿದ ಧರ್ಮದ ಪ್ರಚಾರಕ್ಕಾಗಿ ಪ್ರದೇಶಗಳನ್ನು ಆಕ್ರಮಿಸಿಕೊಂಡ. ಆದರೆ ಮನುಕುಲದ ಅಭಿವೃದ್ಧಿಗೆ ಕಾರಣಳಾದ ಸ್ತ್ರೀ ಧರ್ಮವನ್ನು ಕಾಪಾಡಲಿಲ್ಲ. ಅವರಿಗೆ ಸಾಮಾಜಿಕ ಸ್ಥಾನ ದೊರೆಯಲಿಲ್ಲ. ಸ್ತ್ರೀಯರಿಗೆ ಸಂಬಂಧಪಟ್ಟಂತೆ ನಮಗೆ ಸ್ಪಷ್ಟ ಶಾಸನೋಕ್ತ ಮಾಹಿತಿ, ಇಲ್ಲವೇ ಇತರೆ ಅಧಾರಗಳು ದೊರೆಯುವುದಿಲ್ಲ. ಸ್ತ್ರೀಯರು ಉತ್ತಮ ಸ್ಥಾನ ಹೊಂದಿದ್ದ ಬಗ್ಗೆಯಾಗಲಿ, ಮನ್ನಣೆ ದೊರೆತಿರುವ ಕುರಿತಾಗಲಿ ಆಧಾರಗಳೇ ದೊರೆಯುವುದಿಲ್ಲ. ಅಂದ ಮೇಲೆ ಸ್ತ್ರೀಯರು ಸಮಾಜದಲ್ಲಿ ಏನು ಅಲ್ಲದೇ ಹೋಗಿದ್ದರೆನ್ನಬಹುದು. ವಿಶಾಲ ಭಾರತದ ಬಹುಭಾಗ ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತು. ಅದರಲ್ಲೂ ದಕ್ಷಿಣ ಭಾರತದಲ್ಲಿ ಕರ್ನಾಟಕ ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಕರ್ನಾಟಕದಲ್ಲಿ ದೊರೆತ ಅಶೋಕನ ಶಾಸನಗಳೇ ಅದಕ್ಕೆ ನಿದರ್ಶನವಾಗಿವೆ.

ಆರ್ಯರ ದಾಳಿಯ ಸಂದರ್ಭದಲ್ಲಿ ದಕ್ಷಿಣಕ್ಕೆ ಸರಿದ ದ್ರಾವಿಡರು ಇಲ್ಲಿಯೇ ತಮ್ಮ ನೆಲೆಯನ್ನು ಕಂಡುಕೊಂಡಿದ್ದರು. ಆದರೆ ಆರ್ಯರು ರಚಿಸಿಕೊಂಡಂತಹ ರಾಜ್ಯವ್ಯವಸ್ಥೆಯನ್ನು ದ್ರಾವಿಡರು ರಚನೆ ಮಾಡಿಕೊಂಡಿದ್ದರ ಬಗ್ಗೆ ಯಾವುದೇ ಮಾಹಿತಿ ಇಲ್ಲ. ಆದರೂ ಇಲ್ಲಿ ವಡಗರು ಆಳ್ವಿಕೆ ಮಾಡುತ್ತಿದ್ದರೆಂದು ಮಾಹಿತಿ ಇದೆ. ಬ್ರಹ್ಮಗಿರಿಯ ಕ್ಷಿಪ್ರ ನೈರುತ್ಯ ಪ್ರದೇಶದಲ್ಲಿ ಆಳುತ್ತಿದ್ದ ವಡಗರಲ್ಲಿ ಪ್ರಮುಖರಾದ ಪುನ್ನಾಟ, ಎರುಮೈ, ತುಳು, ಕೊಂಗ, ಕಟಂಬು,

ಮೋಹರ್, ಕೋಶರ್ ಮುಂತಾದವರು(ಶೆಟ್ಟರ್ ಷ.; ಶಂಗಂ ತಮಿಳಗಂ ಮತ್ತು ಕನ್ನಡ ನಾಡು–ನುಡಿ, ಪುಟ ೭೮). ಆದರೆ ದಕ್ಷಿಣದಲ್ಲಿ ಅವರದೇ ಸಂಸ್ಕೃತಿಯ ಆಡಳಿತ ವ್ಯವಸ್ಥೆ ಇತ್ತೆಂಬುದು ಅಶೋಕನ ಶಾಸನಗಳಿಂದಲೇ ತಿಳಿದುಬರುತ್ತದೆ. ಆದರೆ ಉತ್ತರ ಭಾರತದಂತೆ ದಕ್ಷಿಣ ಭಾರತ ಸುಲಭವಾಗಿ ವಿದೇಶಿಯರ ದಾಳಿಗೆ ಒಳಗಾಗಲಿಲ್ಲ. ಒಂದು ವೇಳೆ ದಾಳಿ ಮಾಡಬಯಸಿದರೆ, ಉತ್ತರದಲ್ಲಿ ಆಳ್ವಿಕೆ ಮಾಡುತ್ತಿದ್ದ ದೊರೆಗಳನ್ನು ಎದುರಿಸಿ ದಕ್ಷಿಣದತ್ತ ಕಾಲಿಡುವಷ್ಟರೊತ್ತಿಗೆ ಅವರು ಇಲ್ಲಿಯ ಜನಾಂಗಗಳೊಂದಿಗೆ ಬೆರೆತು ಇಲ್ಲಿಯವರೇ ಆದಂತೆ ಅಗುತ್ತಿದ್ದರು. ಅವರಿಗೆ ಅಷ್ಟು ಸಮಯ ಬೇಕಾಗುತ್ತಿತ್ತು. ಹಾಗೆ ಇಲ್ಲಿ ನೆಲೆಯೂರಿದವರೆ ಶಕರು, ಕುಶಾನರು, ಹೂಣರು ಹೀಗೆ ಅನೇಕರು ಗ್ರೀಕರಂತೆ ಇಲ್ಲಿಯ ವಾತಾವರಣಕ್ಕೆ ಹೊಂದಿಕೊಳ್ಳಲಾಗದೆ ಇಲ್ಲಿಂದ ಕಾಲ್ತೆಗೆಯಬೇಕಾಗುತ್ತಿತ್ತು. ದಕ್ಷಿಣ ಭಾರತಕ್ಕೆ ಬೇರೆ ದಿಕ್ಕಿನಿಂದ ಬರಲು ಪ್ರಕೃತಿಸಹಜವಾಗಿಯೇ ನಿರ್ಮಾಣವಾದ ಆಗಾಧ ಜಲಾವೃತ್ತ ಭದ್ರತೆ ನೀಡಿದೆ. ವಿದೇಶಿಯರು ಒಳನುಸುಳಲು ಅವಕಾಶವನ್ನೇ ಕೊಡದಂತೆ ಸಮುದ್ರ ತಡೆಯುತ್ತಿತ್ತು. ವಿಂಧ್ಯ ಪರ್ವತಗಳ ಸಾಲು ಕೂಡ ಭದ್ರತೆಯನ್ನು ಒದಗಿಸಿತ್ತು. ಈ ಕಾರಣದಿಂದ ಕರ್ನಾಟಕ ಒಳಗೊಂಡಂತೆ ದಕ್ಷಿಣ ಭಾರತ ಪ್ರಾಚೀನ ಕಾಲದಲ್ಲಿ ವಿದೇಶಿ ದಾಳಿಗಳಿಂದ ಸುರಕ್ಷಿತವೆನ್ನಬಹುದು. ಹಾಗಾಗಿ ಇಲ್ಲಿಯ ಪ್ರಕೃತಿಸಂಪತ್ತು ಕೂಡ ಇಲ್ಲಿಯ ಜನರಷ್ಟೇ ಸುರಕ್ಷಿತವಾಗಿತ್ತು. ಆದರೆ ಅಶೋಕನಂತಹ ದೇಶಿ ದೊರೆಗಳಿಂದ ಸುರಕ್ಷಿತವಾಗಿ ಉಳಿಯಲಿಲ್ಲ. ಮೌರ್ಯರ ಕಾಲದಲ್ಲೇ ಮೊದಲ ಬಾರಿಗೆ ದೇಶಿ ದೊರೆಗಳಿಂದ ದಾಳಿಯನ್ನು ಎದುರಿಸಿದರು. ಆದರೆ ಇದಕ್ಕೂ ಮೊದಲು ಕರ್ನಾಟಕದಲ್ಲಿ ಸಣ್ಣ ಪುಟ್ಟ ದೊರೆಗಳು ಇದ್ದ ಉಲ್ಲೇಖ ಶಂಗಂ ಸಾಹಿತ್ಯದಲ್ಲಿಯೂ ದೊರಕುತ್ತದೆ. ಅಷ್ಟು ಬಿಟ್ಟರೆ ನಮಗೆ ಹೆಚ್ಚಿನ ಮಾಹಿತಿ ದೊರಕುವುದಿಲ್ಲ. ಕೃಷಿ ಮೂಲ ಸಂಸ್ಕೃತಿಯವರಾದ ದ್ರಾವಿಡರ ನೆಲೆಯಾಗಿದ್ದ ಇಲ್ಲಿ ಮುಂದೆ ಬಂದ ಶಾತವಾಹನರ ಕಾಲದಲ್ಲಿ ಕೃಷಿ ಒಮ್ಮೆಲೆ ನೆಲಕಚ್ಚಿ ವ್ಯಾಪಾರಿ ಸಂಸ್ಕೃತಿ ತಲೆ ಎತ್ತಿದ್ದನ್ನು ಕಾಣುತ್ತೇವೆ. ಇಂಥ ಒಂದು ಸಂಸ್ಕೃತಿ ಬಹುಶಃ ಆಕ್ರಮಣಕಾರರಿಂದಲೇ ಒದಗಿದ್ದಿರಬೇಕು. ಇಂಥ ಅರ್ಥವ್ಯವಸ್ಥೆ ಅಶೋಕನ ಕಾಲದ ವ್ಯಾಪಾರಿ ಸಂಸ್ಕೃತಿಯ ಪ್ರಭಾವದ್ದೇ ಇರುವ ಸಾಧ್ಯತೆ ಇದೆ.

ಅಶೋಕ ಕರ್ನಾಟಕದ ಬಹುಭಾಗವನ್ನು ತನ್ನ ಆಳ್ವಿಕೆಗೆ ಒಳಪಡಿಸಿಕೊಂಡಿದ್ದ ಎನ್ನುವುದು ಅವನ ಶಾಸನಗಳ ಆಧಾರದಿಂದ ನಮಗೆ ತಿಳಿದುಬರುತ್ತದೆ. ಅಶೋಕನ ಆಕ್ರಮಣಕ್ಕೆ ತಡೆಯೊಡ್ಡುವ ರಾಜ್ಯಗಳು ಇಲ್ಲಿದ್ದವೆನ್ನುವುದು ನಾವು ಗಮನಿಸಬೇಕಾದ ಅಂಶವಾಗಿದೆ. ಸಮಾಜ ಸಂಘಟನೆ ಮತ್ತು ನೀತಿಭೋಧನೆಯ ಕಾರ್ಯವನ್ನು ಸುವರ್ಣಗಿರಿಯಿಂದ ದಕ್ಷಿಣಕ್ಕೆ ವಿಸ್ತರಿಸುವ ಅಭೀಪ್ಸೆಯನ್ನು ಹೊಂದಿದ್ದರೂ ಸ್ವಾತಂತ್ರ್ಯ ಪ್ರಿಯರಾದ ಇಲ್ಲಿಯ ಜನಾಂಗಗಳು ಅವನ ಅರಸೊತ್ತಿಗೆಯನ್ನಾಗಲಿ, ಪ್ರತಿಪಾದಿಸುತ್ತಿದ್ದ ಧರ್ಮವನ್ನಾಗಲಿ ಬಳಸುತ್ತಿದ್ದ ಲಿಪಿ–ಭಾಷೆಯನ್ನಾಗಲಿ ಒಪ್ಪದೆ ಇವೆಲ್ಲವನ್ನೂ ಸಾರಾಸಗಟಾಗಿ ತಿರಸ್ಕರಿಸಿದರೆಂದು ತೋರುತ್ತದೆ (ಶೆಟ್ಟರ್ ಷ.; ಶಂಗಂ ತಮಿಳಗಂ ಮತ್ತು ಕನ್ನಡ ನಾಡು–ನುಡಿ, ಪುಟ ೭೮).

ಅಶೋಕನ ಆಕ್ರಮಣ ಮತ್ತು ಧರ್ಮಪ್ರಚಾರವನ್ನು ಇಲ್ಲಿಯ ಜನ ವಿರೋಧಿಸಿದರು. ಅದಕ್ಕೆ ಅಶೋಕ ನಿರಾಸಕ್ತನೇನೂ ಆಗಿರಲಿಲ್ಲ, ಅದಕ್ಕೆ ಅವನು ಸೈನಿಕ ಕಾರ್ಯಾಚರಣೆ ಆರಂಭಿಸಿದ. ಸನ್ನತಿಯವರೆಗೂ ಸೈನಿಕ ಕಾರ್ಯಾಚರಣೆ ಕೈಗೊಂಡು, ಸುವರ್ಣಗಿರಿಯಲ್ಲಿ ಆರ್ಯಪುತ್ರನಿಗೆ ರಾಜಧಾನಿ ಪಟ್ಟಣವನ್ನು ನಿರ್ಮಿಸಿಕೊಟ್ಟು, ಅಲ್ಲಿಂದ ಕೆಳಗಣ ಪ್ರದೇಶದಲ್ಲಿ ನೆಲೆಸಿದ್ದ ಬೃಹತ್ ಶಿಲಾಯುಗದ ಜನಾಂಗಗಳನ್ನು ಸುಲಭವಾಗಿ ವಶಪಡಿಸಿಕೊಳ್ಳುತ್ತ ಇಸಿಲದವರೆಗೂ ಮುನ್ನಡೆದು, ಅಲ್ಲಿ ಒಂದು ಸೇನಾಠಾಣ್ಯವನ್ನು ಅಶೋಕ ಸ್ಥಾಪಿಸಿದ ಚಿತ್ರ ನಮಗೆ ದೊರಕುವುದು. ಅಲ್ಲಿಂದ ವಡಗರಲ್ಲಿ ಕೆಲವರನ್ನು ತನ್ನೆಡೆಗೆ ಸೆಳೆದುಕೊಳ್ಳುತ್ತಾ ಇವರನ್ನು ತಮಿಳರ ವಿರುದ್ಧ ಎತ್ತಿ ಕಟ್ಟಲು ಪ್ರಯತ್ನಿಸಿದಾಗ ಇದರ ಲಾಭವನ್ನು ಉತ್ತರದ ನಾಯಕರು ಪಡೆದುಕೊಳ್ಳಲು ಹಿಂಜರಿಯಲಿಲ್ಲ. ಆದರೆ ಸ್ವಾತಂತ್ರ್ಯ ಪ್ರಿಯರಾದ ಅವರು ತಮಿಳರ ಆಧಿಪತ್ಯವನ್ನು ಎದುರಿಸಿದಂತೆ ಮೌರ್ಯರ ಆಧಿಪತ್ಯವನ್ನು ಎದುರಿಸಿದರು. ಒಂದೆರಡು ಬಾರಿ ಮಾಡಿದ ಪ್ರಯತ್ನಗಳು ಫಲ ಕೊಡದಿದ್ದಾಗ ತನ್ನ ರಾಜಕೀಯ ಆಮಿಷವನ್ನು ಕಡಿತಗೊಳಿಸಿ, ಧರ್ಮಪ್ರಸಾರ, ವೈದ್ಯಕೀಯ ನೆರವು ಮೊದಲಾದವುಗಳನ್ನು ಒದಗಿಸಿ, ದಕ್ಷಿಣ ಜನಾಂಗಗಳ ಮೈತ್ರಿ ಸಂಪಾದಿಸಿಕೊಳ್ಳಲು ಅಶೋಕ ಪ್ರಯತ್ನಪಟ್ಟನು. ಇವೂ ಹೆಚ್ಚು ಫಲಿಸದಿದ್ದಾಗ ತನ್ನ ಗಮನವನ್ನು ಬನವಾಸಿ ಮತ್ತು ಸಿಂಹಳದೆಡೆ ಕೇಂದ್ರೀಕರಿಸಿದ(ಶೆಟ್ಟರ್ ಷ.; ಶಂಗಂ ತಮಿಳಗಂ ಮತ್ತು ಕನ್ನಡ ನಾಡು–ನುಡಿ, ಪುಟ ೭೮). ಅಶೋಕ ದಕ್ಷಿಣದಲ್ಲಿ ಧರ್ಮ ಪ್ರಚಾರ ಮತ್ತು ಭದ್ರವಾಗಿ ನೆಲೆ ನಿಲ್ಲುವುದಕ್ಕಾಗಿ ಸಾಕಷ್ಟು ಪ್ರಯತ್ನ ಪಟ್ಟ ಮತ್ತು ಆ ನಿಟ್ಟಿನಲ್ಲಿ ಸಾಕಷ್ಟು ಯಶಸ್ವಿಯೂ ಆಗಿದ್ದಾನೆ, ತಾನು ಹೊಂದಿದ ಯಶಸ್ಸಿನಲ್ಲಿ ತನ್ನ ಉದ್ದೇಶಗಳನ್ನು ತಕ್ಕಮಟ್ಟಿಗೆ ಈಡೇರಿಸಿಕೊಂಡಿದ್ದಾನೆ. ಒಬ್ಬ ಶ್ರೇಷ್ಠ ದೊರೆಯಾಗಿದ್ದರೂ ಸಾಮ್ರಾಜ್ಯ ಧರ್ಮ ವಿಸ್ತರಣೆ ಇಲ್ಲಿ ಮೂಲ ಉದ್ದೇಶವಾಗಿದೆ.

ಸಾಮ್ರಾಜ್ಯ ವಿಸ್ತರಣೆಯ ಜೊತೆಗೆ ಧರ್ಮಪ್ರಚಾರದ ಉದ್ದೇಶ ಹೊಂದಿದ್ದ ಕಾರಣಕ್ಕೆ ಸ್ವತಃ ತಾನೇ ಇಲ್ಲಿ ಬೆಟ್ಟಿ ಕೊಟ್ಟಿರಬಹುದು. ಇದಕ್ಕೆ ಪ್ರಮುಖ ದಾಖಲೆ ಒದಗಿಸುವುದು ಅಶೋಕನ ಶಾಸನಗಳು. ಅದರಲ್ಲೂ ಭಾರತದಲ್ಲಿ ದೊರೆತ ಆತನ ಚಿತ್ರವಿರುವ ಏಕೈಕ ಸನ್ನತಿಯ ಉಬ್ಬು ಶಿಲ್ಪ ಮತ್ತು ಅಶೋಕನ ಬಗ್ಗೆ ಇದ್ದ ಕಲ್ಪನೆಯ ಮೂರ್ತ ರೂಪವಾಗಿದೆ. ಈ ಶಿಲ್ಪವನ್ನು ನಾವು ಗಮನಿಸಿದಾಗ ಅಶೋಕನ ಸುತ್ತ ಸ್ತ್ರೀ ಸಮೂಹ ಇರುವುದು. ಈ ಸ್ತ್ರೀಯರು ಒಂದು ಸೇವಕ ಸಮುದಾಯಕ್ಕೆ ಸೇರಿದವರೇ ಎಂಬ ಕಲ್ಪನೆ ಬರುತ್ತದೆ. ವಿವಸ್ತ್ರರಾಗಿರುವ ಅವರೆಲ್ಲ ಆ ಕಾಲದ ದೊರೆಗಳಿಗೆ ಮನರಂಜನೆ ನೀಡಲು ಇದ್ದ ಒಂದು ಮಹಿಳಾವರ್ಗವೆನಿಸುತ್ತದೆ. ಆರ್ಯರ ದಸ್ಯು, ದಾಸಿಯರು ಎಂದು ಹೇಳಲಾಗುವ, ಮೇಲ್ವವರ್ಗದವರ ಮತ್ತು ರಾಜರ ಸೇವೆಗೆ ಇರುವ ದಾಸಿ ಸಂಪ್ರದಾಯವೆನಿಸುತ್ತದೆ.

ಆಕ್ರಮಣಕಾರರ ಜೊತೆಗೆ ಅವರ ಸಂಪ್ರದಾಯಗಳು ದಕ್ಷಿಣ ಭಾರತಕ್ಕೆ ಕಾಲಿಟ್ಟವೆನ್ನಬಹುದು. ಉತ್ತರ ಭಾರತಕ್ಕಿಂತಲೂ ದಕ್ಷಿಣ ಭಾರತದಲ್ಲಿ ಆತನ ಆಳ್ವಿಕೆಯ

ಸಾಮಾಜಿಕ ಸಂಚಲನವನ್ನುಂಟು ಮಾಡಿದವುಗಳಾಗಿರುತ್ತವೆ. ಸವಾರಿಯ ಹೆಜ್ಜೆ ಗುರುತುಗಳು ಇತಿಹಾಸದಲ್ಲಿ ದಾಖಲೆಯಾಗಿ ಉಳಿಯಬಹುದಷ್ಟೆ. ಆದರೆ ನಿರಂತರ ಚಲಿಸುವ ಮೂಲ ಸಂಸ್ಕೃತಿಯು ಹಾಗೆ ಮುಂದುವರೆಯುತ್ತಲೇ ಇರುತ್ತದೆ. ಅದನ್ನು ಯಾವ ದಾಳಿಕೋರರಿಗೂ ಕಿತ್ತು ಹಾಕಲು ಆಗಿಲ್ಲ. ಅದು ಪ್ರಾಚೀನ ಗ್ರೀಸ್ ಆಕ್ರಮಣದಿಂದ ಹಿಡಿದು ಆಧುನಿಕ ಕಾಲದ ಬ್ರಿಟೀಷರವರೆಗೂ ಅನ್ವಯಿಸುತ್ತದೆ. ದಕ್ಷಿಣದಲ್ಲಿ ಮಾತೃದೇವತಾ ಆರಾಧನೆ ಇಂದಿಗೂ ಮುಂದುವರೆದಿರುದಿರುವದೇ ಇದಕ್ಕೆ ಸಾಕ್ಷಿಯಾಗಿದೆ.

**೩.೩. ರಾಜಪ್ರಭುತ್ವ ಮತ್ತು ಸ್ತ್ರೀಯರು.**

ಅನ್ಯಸಂಸ್ಕೃತಿಗೆ ಸೇರಿದ ವಿದೇಶಿ ಜನಾಂಗಗಳು ಉತ್ತರ ಭಾರತವನ್ನು ಆಕ್ರಮಿಸಿಕೊಂಡಾಗ ಅಲ್ಲಿ ಆದ ಸಾಮಾಜಿಕ ಬದಲಾವಣೆಗಳನ್ನು ನಾವು ನೋಡಿದ್ದೇವೆ. ಅದರಲ್ಲೂ ಸ್ತ್ರೀಯರ ಮೇಲೆ ಆದ ಪರಿಣಾಮ ಹೆಚ್ಚೆಂದೇ ಹೇಳಬಹುದು. ಅದರಲ್ಲೂ ಅವರ ವೈಯಕ್ತಿಯ ಜೀವನ ಮತ್ತು ಆತ್ಮ ಗೌರವಕ್ಕೆ ಪೆಟ್ಟು ಬಿದ್ದಿರುವುದನ್ನು ಕಾಣಬಹುದು. ಅನ್ಯ ಸಂಸ್ಕೃತಿಯೊಂದಿಗೆ ಅನಿವಾರ್ಯವಾಗಿ ಸಂಭವಿಸಿದ ವಿವಾಹಗಳಿಂದ ತಮ್ಮ ತನವನ್ನು ಕಳೆದುಕೊಳ್ಳುವಂತೆ ಆಯಿತು. ಪುರುಷರು ಹೆಚ್ಚಿನ ಸವಲತ್ತುಗಳನ್ನು ಬಯಸಿ ಅದಕ್ಕಾಗಿ ಸ್ತ್ರೀಯರನ್ನು ಸೇವಕಿ, ದಾಸಿಯರೆಂಬ ಕೆಳ ಸಮುದಾಯದ ವರ್ಗವನ್ನು ಹುಟ್ಟುಹಾಕಿದರು. ಇವರ ಜೀವನ ಮೇಲ್ವರ್ಗದವರ ಸೇವೆಗೆ ಮೀಸಲಾಯಿತು.

ಸ್ತ್ರೀಯರ ವ್ಯಕ್ತಿತ್ವಕ್ಕೆ ಹಾನಿಯುಂಟು ಮಾಡುವ ನೃತ್ಯ, ದಾಸಿ, ವೇಶ್ಯೆ ಪದ್ಧತಿಯಂಥ ಸ್ತ್ರೀವಿರೋಧಿ ಸಂಪ್ರದಾಯಗಳು ಉತ್ತರ ಭಾರತದ ರಾಜ್ಯಗಳು ದಕ್ಷಿಣ ಭಾರತದ ಮೇಲಿನ ಆಕ್ರಮಣದಿಂದ, ಮಾತೃಪ್ರಧಾನರಾಗಿದ್ದ ದಕ್ಷಿಣದ್ರಾವಿಡರಿಗೆ ಬಳುವಳಿಯಂತೆ ಬಂದವು. ರಾಜ್ಯಗಳ ಆಕ್ರಮಣ ಕೇವಲ ರಾಜಕೀಯ ವಲಯಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ, ಇತರೆ ವಲಯಗಳ ಮೇಲೂ ತನ್ನ ಪ್ರಭಾವವನ್ನು ಬೀರುತ್ತದೆ. ಅದರಲ್ಲೂ ಆಕ್ರಮಣಕ್ಕೊಳಗಾದ ರಾಜ್ಯಗಳ ಸಂಸ್ಕೃತಿಯ ಮೇಲೆ ಆಗುವ ಪರಿಣಾಮ ಹೆಚ್ಚು ಎಂದೇ ಹೇಳಬಹುದು. ಅಲ್ಲಿಯ ಮೂಲವಾಸಿಗಳಿಗೆ ಅನ್ಯಸಂಸ್ಕೃತಿಯವರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ. ಏಕೆಂದರೆ ಅವರಿಗೆ ವಿರೋಧಿಸುವ ಯಾವ ಶಕ್ತಿಯೂ ಇರುವುದಿಲ್ಲ. ಹೀಗೆ ಅನಿವಾರ್ಯವಾಗಿ ಬಂದವುಗಳು ತಮ್ಮ ಪ್ರಭುತ್ವವನ್ನು ಮೆರೆಯುತ್ತವೆ. ಮೂಲ ಸಂಸ್ಕೃತಿ ಅಲ್ಪಕಾಲ ಮರೆಯಲ್ಲಿ ಉಳಿಯುತ್ತದೆ. ಕೆಲ ಕಾಲ ಅಶೋಕನ ಆಳ್ವಿಕೆಗೆ ಒಳಪಟ್ಟ ಅವಧಿಯಲ್ಲಿ ಕರ್ನಾಟಕದ ಮೇಲಾದ ಸಾಂಸ್ಕೃತಿಕ ದಾಳಿಯ ಪರಣಾಮವನ್ನು ಮುಂದೆ ಶಾತವಾಹನ ಕಾಲದಲ್ಲಿ ಕಾಣುತ್ತೇವೆ. ಮೂಲ ಆಚಾರ ವಿಚಾರಗಳ ಮೇಲೆ ಕೆಟ್ಟ ಪರಿಣಾಮ ಬೀರಿತೋ ಅಥವಾ ಒಳ್ಳೆಯ ಪರಿಣಾಮ ಬೀರಿತೋ ಎಂದು ಹೇಳುವುದು ನನ್ನ ಉದ್ದೇಶವಲ್ಲ. ಆದರೆ ಪಲ್ಲಟ ಉಂಟಾಯಿತೆಂದು ಹೇಳಬಹುದು. ಆ ಪಲ್ಲಟ ಮಾತೃಸಂಸ್ಕೃತಿಯನ್ನು

ಪ್ರಭಾವ ಅಧಿಕವೆಂದೇ ಹೇಳಬಹುದು. ಇಲ್ಲಿ ಕೆಲಕಾಲ ಅಶೋಕ ನೆಲೆಸಿರುವ ಸಾಧ್ಯತೆ ಇದೆ.

ಆರ್ಯರ ಹಾಗೂ ಇತರೆ ಸಂಸ್ಕೃತಿಯವರ ಪ್ರಭಾವದಿಂದ ಈಗಾಗಲೇ ದಕ್ಷಿಣದಲ್ಲಿ ಮಾತೃಪ್ರಧಾನತೆ ಕುರುಹಾಗಿ ಅಲ್ಲಲ್ಲಿ ಉಳಿದುಕೊಂಡಿತ್ತು. ಅನ್ಯರ ಆಕ್ರಮಣ ರಾಜಕೀಯ ಒತ್ತಡದ ಪ್ರಭಾವದಿಂದ ಆಕ್ರಮಿತ ಪ್ರದೇಶದವರು ಅನ್ಯರೊಂದಿಗೆ ಹೊಂದಿಕೊಳ್ಳುವುದು ಅನಿವಾರ್ಯವಾಗುತ್ತದೆ. ಇಂತಹ ಬದಲಾವಣೆಯು ಅವರ ಸಾಮಾಜಿಕ ಸ್ಥಿತಿಗತಿಯನ್ನು ಮುಂದೆ ಸಾಮ್ರಾಜ್ಯಗಳ ಆಳ್ವಿಕೆಯ ಕಾಲದಲ್ಲಿ ನೋಡಬಹುದು.

ಕ್ರಿ.ಪೂ. ೧೮೭ರ ಹೊತ್ತಿಗೆ ಮೌರ್ಯ ಅರಸು ಮನೆತನದ ಆಳ್ವಿಕೆ ಕೊನೆಗೊಂಡಿದ್ದರಿಂದ ಕರ್ನಾಟಕದ ಮೇಲೂ ಅವರ ಹಿಡಿತ ದುರ್ಬಲವಾಯಿತು. ನಂತರ ಮಗಧ, ಶುಂಗ, ಕಣ್ವ ಮನೆತನಗಳು ಕ್ರಿ.ಪೂ. ೩೦ರ ವರೆಗೆ ಆಳ್ವಿಕೆ ಮಾಡಿದರು. ಆ ಕಾಲಕ್ಕೆ ಕರ್ನಾಟಕದ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸ್ಥಿತಿಗತಿ ತಿಳಿಯಲು ಸಾಧ್ಯವಿಲ್ಲ. ಕಾರಣ ನಮಗೆ ಅಂಥ ದಾಖಲೆಗಳಾವೂ ದೊರೆಯುವುದಿಲ್ಲ. ಇದೇ ಸಮಯದಲ್ಲಿ ದಕ್ಷಿಣದಲ್ಲಿ ಶಾತವಾಹನರೆಂಬ ಆಂಧ್ರಭೃತ್ಯರು ರಾಜಕೀಯ ಸಂಘಟನೆ ಮಾಡಿದರು. ಹಾಗೆಯೇ ಅದನ್ನು ಶಾತವಾಹನೀ ರಾಷ್ಟ್ರವೆಂದು ಕರೆಯಲಾಗುತ್ತದೆ. ಹಾಗಾದರೆ ಆ ಶಾತವಾಹನೀ ಪ್ರದೇಶ ಯಾವುದೆಂದರೆ ಆಂಧ್ರದ ಸ್ವಲ್ಪ ಭಾಗ ಸೇರಿದಂತೆ ಬಳ್ಳಾರಿ ಪ್ರದೇಶವನ್ನು ಒಳಗೊಂಡಿತ್ತು(ಸುಂದರ ಅ.; ಕರ್ನಾಟಕ ಚರಿತ್ರೆ ಸಂಪುಟ ೧, ಪುಟ ೩೦೧). ದಕ್ಷಿಣದ ದ್ರಾವಿಡರ ಮಾತೃಪ್ರಧಾನ ಅಂಶಗಳನ್ನು ಶಾತವಾಹನರು ಅಗತ್ಯವಿದ್ದಲ್ಲಿ, ಪೂಜನೀಯವೆನಿಸುವ ಸ್ಥಾನಗಳಲ್ಲಿ ಉಳಿಸಿಕೊಂಡು ಬಂದಿದ್ದರು. ಸ್ತ್ರೀಯರಿಗೆ ಪ್ರಾಧಾನ್ಯತೆಯಿರಲಿಲ್ಲ. ಆದರೂ ತಮ್ಮ ಹುಟ್ಟಿನ ಬಗ್ಗೆ ಜನ್ಮದಾತನಿಗಿಂತಲೂ ಜನ್ಮದಾತೆಗೆ ಹೆಚ್ಚು ಮಹತ್ವ ಕೊಡವುದನ್ನು ಉಳಿಸಿಕೊಂಡಂತಿತ್ತು. ಹಾಗಾಗಿ ಅವರು ತಾಯಿಯಿಂದಲೇ ತಮ್ಮನ್ನು ಗುರುತಿಸಿಕೊಳ್ಳುತ್ತಿದ್ದರು. ಗೌತಮಿಪುತ್ರ ಸಾತಕರ್ಣಿ, ವಾಸಿಷ್ಠೀ ಪುತ್ರ ಪುಲಮಾಯಿ, ಹಾರಿತೀ ಪುತ್ರ ಸಾತಕರ್ಣಿ, ಹೀಗೆ ಸ್ತ್ರೀಯರು ಹಕ್ಕು ಕಳೆದುಕೊಂಡಿದ್ದರೂ ಕೂಡ ತಮ್ಮ ಗುರುತಿಸುವಿಕೆಯನ್ನು ಹೊಂದಿದ್ದರು. ಅದೂ ಅವರ ತಾಯ್ತನದ ಕಾರಣಕ್ಕೆ ಎಂಬುದನ್ನು ಮರೆಯುವಂತಿಲ್ಲ.

ಇಲ್ಲಿ ಪ್ರಸ್ತಾಪಿಸಲಾಗುವ ವಿಚಾರ ಮಾತೃಪ್ರಧಾನ ಸಂಸ್ಕೃತಿ ಪೂರ್ಣ ಮರೆಯಾಗಿದ್ದರೂ ಕೆಲವು ಲಕ್ಷಣ ಅಥವಾ ಅಂಶಗಳನ್ನು ಉಳಿಸಿಕೊಂಡು ಬಂದಿತೆನ್ನುವುದು ಅಷ್ಟೇ ಸತ್ಯ. ಹಲವಾರು ಸಂಸ್ಕೃತಿಗಳ ದಾಳಿ ಮತ್ತು ಪುರುಷಪ್ರಧಾನತೆಯ ಮಧ್ಯೆಯೂ ತನ್ನ ಮೂಲ ಅಂಶಗಳು ಉಳಿಸಿಕೊಂಡಿರುವುದು ದ್ರಾವಿಡರು ಮಾತೃಪ್ರಧಾನರಾಗಿದ್ದ ಕಾರಣಕ್ಕೆ. ಅವಕಾಶ ದೊರೆತ ಕಡೆಯಲ್ಲೆಲ್ಲ ಅವರ ಸ್ವತಂತ್ರ ಅಸ್ತಿತ್ವ ಗುರುತಿಸುವಿಕೆ ಇದೆ. ಡಾ.ಕೆ. ಗೋಪಾಲಾಚಾರಿಯವರ ವಿವರಣೆಯಂತೆ ಅಮರಾವತಿಯ ೧೪೫ ಶಾಸನಗಳಲ್ಲಿ ೭೨, ಕುಡಾದಲ್ಲಿನ ೩೦ರಲ್ಲಿ ೧೩, ನಾಸಿಕದಲ್ಲಿನ ೨೯ರಲ್ಲಿ ೧೬ ಶಾಸನಗಳಲ್ಲಿ ಹೆಚ್ಚಿನವು ಸ್ತ್ರೀಯರು

ಸ್ವತಃ ದಾನ ಮಾಡಿದ ಕುರಿತು ಮತ್ತು ಹಲವು ಸ್ತ್ರೀಯರು ಸೇರಿ ದಾನ ಮಾಡಿದ ಕುರಿತಾದ ಸಂಗತಿಗಳಿವೆ.

ಗೌತಮಿಪುತ್ರ ಸಾತಕರ್ಣಿಯ ತಾಯಿಯು ಭದ್ರಯಾನೀಯ ಪಂಗಡಕ್ಕೆ ನಾಸಿಕದ ಮೂರನೇ ಗುಹೆಯನ್ನು ಕೊಟ್ಟಿದ್ದಳು(ಆದಿಕಾಲ; ಕರ್ನಾಟಕದ ಪರಂಪರೆ-ಸಂಪುಟ-೧, ಪುಟ ೧೨೭). ಮೇಲ್ನೋಟಕ್ಕೆ ಇವು ಧಾರ್ಮಿಕ ಕಾರ್ಯಗಳು ಎಂದೆನಿಸಿದರೂ ಇದರ ಹಿಂದಿರುವುದು ಆರ್ಥಿಕ ಬಲ ಎಂಬುದನ್ನು ಮರೆಯುವಂತಿಲ್ಲ. ದೇವಾಲಯಗಳಿಗೆ ದಾನ ದತ್ತಿಗಳನ್ನು ನೇರವಾಗಿ ಸ್ತ್ರೀಯರೇ ಕೊಡುವುದಕ್ಕೂ ಸ್ತ್ರೀಯರ ಹೆಸರಿನಲ್ಲಿ ಮನೆಯ ಯಜಮಾನ ಕೊಡುವುದಕ್ಕೂ ತುಂಬಾ ವ್ಯತ್ಯಾಸವಿದೆ. ದಾನದ ಹಿಂದಿರುವ ಆರ್ಥಿಕ ಶಕ್ತಿ ಗಂಡಸಿನದ್ದಾಗಿರುತ್ತದೆಯೇ ಹೊರತು ಸ್ತ್ರೀಯರದ್ದಲ್ಲ. ಆದರೆ ಶಾತವಾಹನರ ಕಾಲಕ್ಕೆ ಅಲ್ಪಮಟ್ಟಿಗೆ ದಾನದ ಒಡತಿ ಸ್ತ್ರೀಯಾಗಿದ್ದಳೆಂದೆನಿಸುತ್ತದೆ. ಇಲ್ಲಿ ದೇವಾಲಯಗಳಿಗೆ ದಾನ, ದತ್ತಿಯಾಗಿ ಭೂಮಿ ಮತ್ತು ಸಂಪತ್ತನ್ನು ಕೊಡುವ ಪದ್ಧತಿ ಇನ್ನೂ ಬೆಳೆದುಬಂದಿರಲಿಲ್ಲ. ಸಂಪತ್ತು ಪುರುಷನ ಕೈಗೆ ಹಸ್ತಾಂತರವಾದ ಕಾಲಘಟ್ಟದ ನಂತರ ದೇವಾಲಯಗಳಿಗೆ ಭೂಮಿ ಮತ್ತು ಸಂಪತ್ತು ಹರಿದುಬಂದು ದೇವಾಲಯಗಳು ಆರ್ಥಿಕ ಶಕ್ತಿಯಾಗಿ ಬೆಳೆದುಬಂದವು. ಇಲ್ಲಿ ಗುಹಾಲಯಗಳ ನಿರ್ಮಾಣಕ್ಕೆ ಅಗತ್ಯವಾದಷ್ಟೇ ಆರ್ಥಿಕ ನೆರವು ರಾಣಿಯರಿಂದ ದೊರೆತಿದೆ. ಆಸ್ತಿಯ ಒಡೆತನ ಹೆಣ್ಣಿಗೆ ಸೇರಿದ್ದರಿಂದ ದಾನದ ಒಡತಿ ಅವಳೇ ಆಗಿರುವಳು. ಶಾತಕರ್ಣಿಯ ಮಗಳು ಶಿವಸ್ಕಂದ ನಾಗಸಿರಿ ಬನವಾಸಿಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದಳೆಂದು ಮಾಹಿತಿ ಇದೆ(ಸುಂದರ ಅ.; ಕರ್ನಾಟಕ ಚರಿತ್ರೆ ಸಂಪುಟ-೧, ಪುಟ ೩೦೭). ಸ್ತ್ರೀಯರು ದಾನ ನೀಡಿದ ಕುರಿತು ಶಾಸನೋಕ್ತವಾಗಿ ಅಧ್ಯಯನ ಮಾಡುವ ಆರಂಭಿಕ ಹಂತದ ಈ ಕಾಲಾವಧಿಯಲ್ಲಿ ದಾನ ಮತ್ತು ಧಾರ್ಮಿಕ ಕಾರ್ಯದಲ್ಲಿ ಸ್ತ್ರೀಯರು ಅಲ್ಪಮಟ್ಟಿಗೆ ಸ್ವತಂತ್ರ ಹೊಂದಿದ್ದರೆನ್ನಬಹುದು. ಇಲ್ಲಿ ಧರ್ಮಪ್ರಸಾರವೆನ್ನುವುದು ಸ್ಮಾರಕ ಮತ್ತು ಗುಹಾಲಯಗಳಲ್ಲಿ ಬುದ್ಧ ಮತ್ತು ಹಿಂದೂ ದೇವರ ಮೂರ್ತಿಗಳ ನಿರ್ಮಾಣ ಮಾಡುವುದು, ಅವುಗಳನ್ನು ವೀಕ್ಷಿಸುತ್ತಿದ್ದ ಸಾರ್ವಜನಿಕರಿಗೆ ಅವು ಯಾವ ಪ್ರಮಾಣದಲ್ಲಿ ಪ್ರಭಾವ ಬೀರುತ್ತಿದ್ದವೋ ಅಷ್ಟಕ್ಕೆ ಮಾತ್ರ ಸೀಮಿತವಾಗಿತ್ತು. ಸಮಾಜಕ್ಕೆ ತಲುಪಿಸುವಿಕೆ ಇತ್ತೇ ಹೊರತು ಒತ್ತಡ ಇರಲಿಲ್ಲ. ಇಲ್ಲಿ ಆಮಿಷಗಳಾಗಲಿ, ಪಾಪ-ಪುಣ್ಯಗಳ ಭಯವನ್ನಾಗಲಿ ಜನರಿಗೆ ಒಡ್ಡಿ ತಮ್ಮ ಧರ್ಮವನ್ನು ಪ್ರಚಾರ ಮಾಡುವ ಯಾವುದೇ ಒತ್ತಡದ ಅಂಶಗಳು ಕಂಡುಬರುವುದಿಲ್ಲ. ಪೌರೋಹಿತ್ಯಶಾಹಿಯ ಪ್ರಭಾವವಾಗಲಿ, ಜಮೀನ್ದಾರಿಕೆ ದಬ್ಬಾಳಿಕೆಯಾಗಲಿ, ರಾಜಕೀಯ ಒತ್ತಡವಾಗಲಿ ಇವೆಲ್ಲವುಗಳ ಪ್ರಭಾವವಿತ್ತೇ ಹೊರತು, ಹೇರುವಿಕೆ ಇರಲಿಲ್ಲ. ಹಾಗಾಗಿ ಸ್ತ್ರೀಯರು ಅಲ್ಪಮಟ್ಟಿಗೆ ಧಾರ್ಮಿಕ ಕಾರ್ಯಗಳಲ್ಲಿ ಸ್ವತಂತ್ರರಾಗಿದ್ದರು.

ಶಾತವಾಹನ ಕಾಲಘಟ್ಟದಲ್ಲಿ ಆಸ್ತಿಯ ಹಕ್ಕಿನ ವಿಚಾರವಾಗಿ ಮಾತೃವಂಶೀಯ ವ್ಯವಸ್ಥೆ ಜಾರಿ ಇರುವ ಸಾಧ್ಯತೆ ಇದೆ. ಗಂಡು ಮಕ್ಕಳಿಗೆ ಆಸ್ತಿ ಅನುಭೋಗಿಸುವ ಹಕ್ಕು ಇದ್ದು

ಒಡೆತನವಾಗಲಿ, ವಿಲೇವಾರಿ ಮಾಡುವುದಾಗಲಿ, ದಾನ ದತ್ತಿ ಕೊಡುವುದಾಗಲಿ ಮಾಡುವಂತ್ತಿರುವುದಿಲ್ಲ. ಅರಸೊತ್ತಿಗೆಯಲ್ಲಿ ರಾಜರು ತಾಯಿಯ ಮೂಲಕ ಗುರುತಿಸುವಿಕೆ ಇದೆ. ಎಂದರೆ ಸಾಮಾನ್ಯ ವರ್ಗದವರಲ್ಲೂ ಇದೇ ವ್ಯವಸ್ಥೆ ಇರುವ ಸಾಧ್ಯತೆ ಇದೆ. ಅಂದರೆ ತಂದೆ ಹೆಸರಿನಿಂದ ಮಗನ ಗುರುತಿಸುವಿಕೆ ಜೊತೆಗೆ ತಂದೆಯಿಂದ ಮಗನಿಗೆ ಆಸ್ತಿ ಹಸ್ತಾಂತರ, ಅದೇ ರೀತಿ ಶಾತವಾಹನರ ಕಾಲದಲ್ಲಿ ತಾಯಿಯಿಂದ ಮಕ್ಕಳ ಗುರುತಿಸುವಿಕೆ ಹೆಣ್ಣುಮಕ್ಕಳಿಗೆ ಆಸ್ತಿಯ ಹಸ್ತಾಂತರ ಇರುವುದು. ಇದೊಂದು ಕಾನೂನು. ಒಂದು ವೇಳೆ ಆಸ್ತಿಯ ಒಡೆಯ ಗಂಡಾಗಿದ್ದರೆ ಹೆಣ್ಣಿನಿಂದ ಗುರುತಿಸುವಿಕೆ ಇರಲು ಸಾಧ್ಯವಿರಲಿಲ್ಲ.

ಶಾತವಾಹನರ ಕಾಲದಲ್ಲಿ ಬ್ರಾಹ್ಮಣರು ಪ್ರಾಶಸ್ತ್ಯ ಪಡೆದುಕೊಂಡಿದ್ದರು. ರಾಣಿ ನಾಯಿನಿಕೆಯ ನಾಣೇಘಾಟದ ಶಾಸನದಲ್ಲಿ ಹದಿನೈದಕ್ಕೂ ಹೆಚ್ಚು ವೈದಿಕ ಯಜ್ಞಗಳನ್ನು ಮಾಡಿಸಿದ ಸಂದರ್ಭದಲ್ಲಿ ಬ್ರಾಹ್ಮಣರಿಗೆ ನೀಡಿದ ಗೋದಾನ, ಭೂದಾನ ದಾಖಲಿಸಿದೆ(ರಾಜಾರಾಮ ಹೆಗಡೆ; ಲೌಕಿಕ–ಅಲೌಕಿಕ, ಪುಟ ೫೪). ಇಲ್ಲಿ ರಾಣಿಯರು ಯಜ್ಞಗಳನ್ನು ಮಾಡಿಸುವ ಮತ್ತು ಆ ಸಂದರ್ಭದಲ್ಲಿ ದಾನಗಳನ್ನು ನೀಡುವಷ್ಟು ಪ್ರಾಧಾನ್ಯತೆಯನ್ನು ಹೊಂದಿದ್ದರು. ಬ್ರಾಹ್ಮಣರು ದಾನಗಳನ್ನು ಪಡೆಯುತ್ತಿದ್ದರು. ಪಡೆದ ದಾನಗಳಿಂದ ಪ್ರಬಲವರ್ಗವಾಗಿ ರೂಪಗೊಂಡಿರಲಿಲ್ಲ. ಬೌದ್ಧಧರ್ಮಕ್ಕೆ ಆಶ್ರಯದಾತರಾಗಿದ್ದರೂ ಬ್ರಾಹ್ಮಣರ ಬಗ್ಗೆ ವಿಶೇಷ ಅಭಿಮಾನ ಮುಚ್ಚಿಡುವಂತದ್ದಾಗಿರಲಿಲ್ಲ. ನಾಸಿಕದ ಬೌದ್ಧ ಗುಹಾಲಯದಲ್ಲಿ ಗೌತಮಿ ಬಾಲಶ್ರೀ ಶಾತಕರ್ಣಿಯನ್ನು 'ಏಕಬ್ರಹ್ಮಣ ವರ್ಣಸಂಕರವನ್ನು ತಡೆದವನು' ಎಂದು ಪ್ರಶಂಸಿಸಿದೆ(ರಾಜಾರಾಮ ಹೆಗಡೆ; ಲೌಕಿಕ–ಅಲೌಕಿಕ, ಪುಟ ೫೪).

ಅನ್ಯಸಂಸ್ಕೃತಿ ದಾಳಿಗೆ ದಕ್ಷಿಣ ಭಾರತ ಒಳಗಾಯಿತೆಂದ ಮಾತ್ರಕ್ಕೆ ಒಮ್ಮೆಲೇ ವ್ಯವಸ್ಥೆ ಬದಲಾಗಲಿಲ್ಲ. ಇಲ್ಲಿ ಸ್ತ್ರೀಯರು ಇನ್ನು ಪೂಜನೀಯ ಸ್ಥಾನವನ್ನು ಕಳೆದುಕೊಂಡಿರಲಿಲ್ಲ. ಬೌದ್ಧಧರ್ಮದ ಅಷ್ಟೊಂದು ಪ್ರಭಾವ ಇದ್ದರೂ ತಮ್ಮ ಮೂಲ ಮಾತೃದೇವತಾ ಆರಾಧನೆಯನ್ನು ಹಾಗೆಯೇ ಮುಂದುವರಿಸಿದ್ದಾರೆ ಎನ್ನುವುದಕ್ಕೆ ಸ್ತ್ರೀದೈವಗಳ ಆರಾಧನೆಗೆ ನೀಡಿದ ಪ್ರಾಧಾನ್ಯತೆ ನೋಡಬಹುದು. ಸನ್ನತಿಯ ಗಜಲಕ್ಷ್ಮಿ ವಿಗ್ರಹ, ಆನೆ ತನ್ನ ಸೊಂಡಿಲಿನಿಂದ ಅಮೃತ ಕಲಶಗಳನ್ನು ಎತ್ತಿ ಲಕ್ಷ್ಮಿಗೆ ಅಭಿಷೇಕ ಮಾಡುತ್ತಿವೆ. ವಿಶೇಷವಾದ ಇಂಥ ವಿಗ್ರಹ ದೊರೆತಿರುವುದು ಇದೇ ಮೊದಲನೆಯದು. ಇದು ದೊರೆತಿರುವುದು ಶಾತವಾಹನರ ಕಾಲಾವಧಿಯಲ್ಲಿ. ಮುಂದೆ ಬಾದಾಮಿ ಚಾಲುಕ್ಯರ ಕಾಲಕ್ಕೆ ಗುಹಾಂತರ ದೇವಾಲಯಗಳಲ್ಲಿ ಇದೇ ರೀತಿಯ ಗಜಲಕ್ಷ್ಮಿ ವಿಗ್ರಹಗಳನ್ನು ನಿರ್ಮಿಸಲು ಶಾತವಾಹನ ಕಾಲದ ಈ ಮೂರ್ತಿ ಶಿಲ್ಪವೇ ಸ್ಫೂರ್ತಿಯಾಗಿವೆ. ಮಾತೃಸಂಸ್ಕೃತಿ ಇನ್ನೂ ಆಚರಣೆಯಲ್ಲಿತ್ತು. ಉತ್ತರದ ಆರ್ಯರಿಗೆ ಹೋಲಿಸಿಕೊಂಡಾಗ, ದಕ್ಷಿಣದಲ್ಲಿ ದ್ರಾವಿಡ ಸ್ತ್ರೀಯರಿಗೆ ಹಿಂದೆ ಇದ್ದ ಉತ್ತಮ ಸ್ಥಾನವನ್ನು ಕೆಲವು ಸಂದರ್ಭಗಳಲ್ಲಿ ಹಾಗೇ ಮುಂದುವರಿಸಿಕೊಂಡು ಬಂದಿದ್ದಾರೆನ್ನುವುದು ನಿಜವೆನಿಸುತ್ತದೆ. ಜನಸಾಮಾನ್ಯರ

ವಿಚಾರದಲ್ಲಿಯೂ ಪಿತೃಪ್ರಧಾನ ವ್ಯವಸ್ಥೆ ಅಷ್ಟೊಂದು ಪರಿಣಾಮಕಾರಿಯಾಗಿ ಜಾರಿ ಬಂದಿರಲಿಲ್ಲ. ಮತ್ತೊಂದು ವಿಶಿಷ್ಟವಾದ ಆರಾಧನೆ ದಕ್ಷಿಣದಲ್ಲಿ ಕಂಡುಬಂದಿತು. ಅದು ಮಾತೃದೇವತಾ ಆರಾಧನೆ ಸಪ್ತಮಾತೃಕೆಯರ ರೂಪದಲ್ಲಿ ಹುಟ್ಟಿಕೊಂಡದ್ದು. ಮತ್ತೊಂದು ನಾಗಾರ್ಜುನಕೊಂಡದಲ್ಲಿ ದೊರೆತಿರುವ ಲಜ್ಜಾ ಗೌರಿ ಆರಾಧನೆ. ಇವೆರಡೂ ಮಾತೃಪ್ರಧಾನತೆಯನ್ನು ಎತ್ತಿ ತೋರಿಸುವ ಪ್ರಮುಖ ಆಧಾರಗಳು. ಇವೆರಡರ ಆರಾಧನೆ

ಶಾತವಾಹನ ದೊರೆ ಹಾಲನ ಗಾಥಾಸಪ್ತಸತಿಯಲ್ಲಿ ಕಾವ್ಯ ಆರಂಭವಾಗುವುದೇ ಪಶುಪತಿ ಮತ್ತು ಪತ್ನಿ ಗೌರಿಯರ ಸ್ತೋತ್ರದೊಂದಿಗೆ. ಶೈವಧರ್ಮ ಆಚರಣೆಯಲ್ಲಿದ್ದು ಗೌರಿ ದೇವಾಲಯಗಳ ಉಲ್ಲೇಖವಿದೆ. ಬೂದಿ ಬಳಿದುಕೊಂಡು ಕಪಾಲಗಳನ್ನು ಹಿಡಿದ ಕಪಾಲೀ ಸ್ತ್ರೀಯರ ವಿಚಾರ ಆ ಕಾಲದ ಗ್ರಂಥಗಳಲ್ಲಿ ಬಂದಿದೆ. ಇವನ್ನೆಲ್ಲ ಗಮನಿಸಿದಾಗ ಸ್ತ್ರೀ ದೈವಗಳು ದ್ರಾವಿಡರಲ್ಲಿ ಯಾವ ಕಾಲಕ್ಕೂ ಪ್ರಾಧಾನ್ಯತೆಯನ್ನು ಕಳೆದುಕೊಂಡಿಲ್ಲ. ಅದು ಇಂದಿನ ಆಧುನಿಕ ಕಾಲಕ್ಕೂ ಅನ್ವಯಿಸುತ್ತದೆ. ಶಾತವಾಹನ ಕಾಲಕ್ಕೆ ಶೈವಧರ್ಮದಲ್ಲಿ ಸ್ತ್ರೀಯರಿಗೆ ನಿರ್ಭಂಧಗಳಿರಲಿಲ್ಲವೆನಿಸುತ್ತಿದೆ. ಶೈವ ಧರ್ಮದಲ್ಲಿ ಇನ್ನೂ ಮಡಿವಂತಿಕೆ ಪ್ರವೇಶಿಸಿರಲಿಲ್ಲವೆಂದು ಈ ಆಧಾರದಿಂದ ವ್ಯಕ್ತವಾಗುತ್ತದೆ. ಇಂಥ ಅವಕಾಶ ಆಗ ಹೆಚ್ಚು ಪ್ರಚಲಿತದಲ್ಲಿದ್ದ ಬೌದ್ಧ ಧರ್ಮದಲ್ಲಿರಲಿಲ್ಲ. ಬುದ್ಧನೇ ಸ್ತ್ರೀಯರು ಬೌದ್ಧ ಸಂಘಗಳನ್ನು ಸೇರುವುದಕ್ಕೆ ನಿರಾಕರಿಸುತ್ತಾನೆ. ನಂತರ ಹಲವಾರು ನಿರ್ಬಂಧಗಳ ನಡುವೆ ಬೌದ್ಧಧರ್ಮದಲ್ಲಿ ಸ್ತ್ರೀಯರಿಗೆ ಅವಕಾಶ ದೊರೆತರೂ ಭಿಕ್ಷುಗಳಷ್ಟು ಪ್ರಾಧಾನ್ಯತೆ ದೊರೆಯಲಿಲ್ಲ. ಕೆಳವರ್ಗದ ಪುರುಷರಿಗೆ ಬೌದ್ಧ ಧರ್ಮದಲ್ಲಿ ಮುಕ್ತ ಅವಕಾಶ ದೊರೆಯುತ್ತಿತ್ತು. ಆದರೆ ಸ್ತ್ರೀಯರಿಗೆ ಅವಕಾಶವನ್ನು ನಿರಾಕರಿಸುತ್ತಿದ್ದರೆಂದರೆ, ಬೌದ್ಧಧರ್ಮದ ಪ್ರಕಾರ ಸ್ತ್ರೀ ಅಷ್ಟೊಂದು ನಿಕೃಷ್ಟಳೇ? ಯಾವುದೇ ಧರ್ಮದ ಆಚರಣೆಯ ಹಿಂದಿರುವ ಪರಮೋಚ್ಚ ಉದ್ದೇಶ ಒಂದೇ ಆಗಿರುತ್ತದೆ. ವೈದಿಕರ ಪ್ರಕಾರ ಮೋಕ್ಷವಾದರೆ, ಬೌದ್ಧರ ಪ್ರಕಾರ ನಿರ್ವಾಣ. ನಿರ್ವಾಣಕ್ಕಾಗಿ ದಾನ ದತ್ತಿಗಳು ದಾರಾಳವಾಗಿ ದೇವಾಲಯ, ಸ್ತೂಪಗಳಿಗೆ ಹರಿದು ಬರುತ್ತಿದ್ದವು. ನಾಗಾರ್ಜುನಕೊಂಡದಲ್ಲಿ ಬಪ್ಪಿಶ್ರೀಯು ತನ್ನ ತಾಯಿಯ ನಿರ್ವಾಣಕ್ಕಾಗಿ ಮಹಾಚೈತ್ಯವನ್ನು ಕಟ್ಟಿಸಿದಳು(ರಾಜಾರಾಮ ಹೆಗಡೆ; ಲೌಕಿಕ–ಅಲೌಕಿಕ, ಪುಟ ೫೨). ನಂತರದ ಕಾಲದಲ್ಲಿ ಎಲ್ಲ ಧರ್ಮಗಳ ಪ್ರಭಾವದಿಂದ ಶೈವಧರ್ಮದಲ್ಲೂ ಕೂಡ ಸ್ತ್ರೀಯರನ್ನು ಧಾರ್ಮಿಕ ಆಚರಣೆಗಳಲ್ಲಿ ಮಾತ್ರ ಇರಿಸಿ ಧರ್ಮ, ಧಾರ್ಮಿಕ ಸಾಧನೆಯಲ್ಲಿ ಪುರುಷರೇ ಸ್ವಾಮಿತ್ವವನ್ನು ಹೊಂದಿದ್ದು ತಿಳಿದ ವಿಚಾರವಾಗಿದೆ. ಒಂದು ಕಾಲಕ್ಕೆ ದೇವತೆ ಮತ್ತು ಪೂಜಾರಿಣಿ ಇಬ್ಬರೂ ಸ್ತ್ರೀಯರಾಗಿ ಪ್ರಾಧಾನ್ಯತೆ ಪಡೆದವರು, ಆದರೆ ಮನುಷ್ಯ ನಾಗರಿಕರೆಂದು ಭಾವಿಸುತ್ತಾ ಬಂದಂತೆ ಸ್ತ್ರೀ ಮತ್ತು ಧರ್ಮದ ವಿಚಾರದಲ್ಲಿ ಧರ್ಮ, ದೇವರು, ಪೂಜೆ ಎಂದರೆ ಸ್ತ್ರೀಯರಿಗೆ ಸಲ್ಲದ ವಿಚಾರಗಳು, ದೇವರು ಪವಿತ್ರವಾದವು ಸ್ತ್ರೀ ಅಪವಿತ್ರಳು, ಹಾಗಾಗಿ ಅವಳು ಇದಕ್ಕೆ ಅರ್ಹಳಲ್ಲ ಎಂದು ತೀರ್ಮಾನಿಸಲಾಯಿತು.

ಶಾತವಾಹನ ಕಾಲದ ಸ್ತ್ರೀಯರ ಸಾಮಾಜಿಕ ಸಹಭಾಗಿತ್ವವನ್ನು ಅಧ್ಯಯನ ಮಾಡಬೇಕೆಂದರೆ ನಮಗೆ ಪ್ರತ್ಯಕ್ಷವಾದ ಯಾವುದೇ ಆಧಾರಗಳು ದೊರೆಯುವುದಿಲ್ಲ. ನಾವು ಇಲ್ಲಿಯವರೆಗೂ ವಿಮರ್ಶೆಗೊಳಪಡಿಸಿರುವ ಮಾತೃ ಪ್ರಧಾನ ಅಂಶಗಳು ಯಾವ ಯಾವ ನೆಲೆಯಲ್ಲಿ ಇನ್ನೂ ಉಳಿದುಕೊಂಡಿರುವ ಸಾಧ್ಯತೆ ಇತ್ತು ಎಂಬ ಒಂದು ಸಣ್ಣ ಆಧಾರದ ಮೂಲಕ ಪರಿಶೀಲಿಸಲಾಗಿದೆ. ಈ ಕಾಲಕ್ಕಾಗಲೇ ಪುರುಷಪ್ರಧಾನ ಸಮಾಜ ಜಾರಿಯಲ್ಲಿದ್ದು, ಪುರುಷಸಮಾಜವನ್ನು ಅಧ್ಯಯನ ಮಾಡುವುದರ ಮೂಲಕ ಸ್ತ್ರೀಯರ ಬಗೆಗೆ ತಿಳಿದುಕೊಳ್ಳುವ ಸಾಧ್ಯತೆ ಇಲ್ಲಿ ಮಾಡಲಾಗಿದೆ. ವೃತ್ತಿಗಳ ವಿಚಾರಕ್ಕೆ ಬಂದಾಗ ಪುರುಷ ಸಂಬೋಧಕ ಪದಗಳನ್ನೇ ಬಳಸಿ ವೃತ್ತಿವರ್ಗಗಳಿದ್ದವು. ಉದಾಹರಣೆಗೆ ಮಾಲಾಕಾರ, ಕೋಲಿಕಾ(ನೇಕಾರ), ತಲಪಿಸಿಕ(ಗಾಣದವನು), ಕಾಂಸಕಾರ(ಕಂಚುಗಾರ), ಚಮ್ಮಕಾರ, ಗಾಂಧಿಕ(ಸುಗಂಧಕಾರ), ಸುವರ್ಣಕಾರ(ಅಕ್ಕಸಾಲಿಗ)(ಆದಿಕಾಲ; ಕರ್ನಾಟಕದ ಪರಂಪರೆ, ಸಂಪುಟ–೧, ಪುಟ ೧೨೮). ಹೀಗೆ ವೃತ್ತಿಗಳ ಯಜಮಾನಿಕೆ ಪುರುಷನದಾಗಿತ್ತು. ಗೃಹಕೈಗಾರಿಕಾ ವಲಯಕ್ಕೆ ಸೀಮಿತವಾದ ಈ ವೃತ್ತಿಗಳು ಸ್ತ್ರೀಯರ ಶ್ರಮವಿಲ್ಲದೆ ಉತ್ಪಾದನೆ ಯಶಸ್ವಿಯಾಗಲು ಸಾಧ್ಯವಿಲ್ಲ. ನಾವೆಲ್ಲ ಗ್ರಾಮೀಣ ಪ್ರದೇಶದ ಮೂಲವನ್ನೇ ಹೊಂದಿರುವುದರಿಂದ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಅವಿದ್ಯಾವಂತ ಹೆಣ್ಣುಮಕ್ಕಳು ತಮ್ಮ ಕುಟುಂಬದ ವೃತ್ತಿ, ಉಪಕಸುಬುಗಳಲ್ಲಿ ಪುರುಷರಿಗಿಂತಲೂ ಹೆಣ್ಣುಮಕ್ಕಳು ಗಂಭೀರವಾಗಿ ತೊಡಗಿರುತ್ತಾರೆ. ಕುಟುಂಬದ ಆರ್ಥಿಕ ತೊಂದರೆ ನೀಗಿಸಲು ಗೃಹಕೈಗಾರಿಕೆಗಳಲ್ಲಿ ಸಕ್ರಿಯವಾದ ಪಾತ್ರ ನಿರ್ವಹಿಸುವುದು ನಮ್ಮ ಗಮನಕ್ಕೆ ಬರದೇ ಇರದು. ಆದರೆ ಅವರು ಉತ್ಪಾದನೆ ಮಾಡಿದ ವಸ್ತುವಿಗೆ ಮಾರುಕಟ್ಟೆ ಒದಗಿಸುವುದು, ಮಾರಾಟ ಮಾಡುವ ಉಸ್ತುವಾರಿ ಕುಟುಂಬದ ಆಚೆ ಸಮಾಜಕ್ಕೆ ಅನ್ವಯಿಸುವುದರಿಂದ ಅದು ಮನೆಯ ಯಜಮಾನನ ಹೊಣೆಗಾರಿಕೆಗೆ ಬರುತ್ತದೆ. ಇಂಥ ವ್ಯವಸ್ಥೆ ಶಾತವಾಹನ ಕಾಲಕ್ಕೆ ಅಷ್ಟೆ ಅಲ್ಲ, ಪ್ರಾಚೀನ ಕಾಲದಿಂದ ಪ್ರಸ್ತುತ ಕಾಲಕ್ಕೂ ಗೃಹ ಕೈಗಾರಿಕೆಯಲ್ಲಿ ಹೆಣ್ಣುಮಕ್ಕಳ ಶ್ರಮವನ್ನೇ ಅವಲಂಬಿಸಿವೆ. ಅದರಿಂದ ಆದ ಉತ್ಪಾದನಾ ವಸ್ತುವಿನ ಮೇಲೆ ಅವರಿಗೆ ಯಾಜಮಾನ್ಯ ವಿರಲಿಲ್ಲವೆಂಬುದು ಆ ಕಾಲದಿಂದ ಇಂದಿನವರೆಗೂ ನಿತ್ಯ ಸತ್ಯ. ಸ್ತ್ರೀ ಉತ್ಪಾದನಾ ವಲಯದಲ್ಲಿ ಯಾಜಮಾನ್ಯಳಾಗಿರುವವರೆಗೂ ವೃತ್ತಿಯಾಧಾರಿತ ಸಂಘಗಳು ಇರಲಿಲ್ಲವೆಂದು ಹೇಳಬಹುದು. ಅವರ ಉತ್ಪಾದನೆ ವ್ಯಾಪಾರಿ ಸಂಸ್ಕೃತಿ ಯದಾಗಿರಲಿಲ್ಲ. ಬದಲಾಗಿ ವಿನಿಮಯವಿರುವ ಸಾಧ್ಯತೆಯಿದೆ. ಶಾತವಾಹನರ ಕಾಲಕ್ಕೆ ವೃತ್ತಿ ಸಂಘಗಳು ಇದ್ದವೆಂದು ಉಲ್ಲೇಖಿಸಿಲಾಗಿದೆ. ಕೋಲಿಕಾ ನಿಕಾಯ(ನೇಕಾರ ಸಂಘ) ಶಿಲಾಲೇಖದಲ್ಲಿ, ಕುಲುಕಾರಿಕ ಶ್ರೇಣಿ(ಕುಂಬಾರ ಸಂಘ), ಜುನ್ನಾರಿನ ದಾಖಲೆ, ಧನ್ನಿಕ ಶ್ರೇಣಿ(ಧಾನ್ಯವರ್ತಕರ ಸಂಘ),(ಆದಿಕಾಲ; ಕರ್ನಾಟಕ ಪರಂಪರೆ, ಸಂಪುಟ–೧, ಪುಟ ೧೨೯). ರೋಂನೊಂದಿಗೆ ವ್ಯಾಪಾರ ಸಂಪರ್ಕ ಹೊಂದಿದ್ದ ಇವರಿಗೆ ಈ ರೀತಿ ವೃತ್ತಿಯಲ್ಲಿ ಸಂಘಟನಾತ್ಮಕ ಮನೋಭಾವನೆ ಬೆಳೆದಿರುವುದಕ್ಕೆ ಸಾಧ್ಯತೆ ಇದೆ.

ಶಾತವಾಹನರ ಆಡಳಿತ ಇಲ್ಲವೇ ಅಧಿಕಾರ ವಲಯದಲ್ಲಿ ಸ್ತ್ರೀಯರಿಗೆ ಅವಕಾಶವಿರಲಿಲ್ಲ. ಅವರು ಅಧಿಕಾರದಲ್ಲಿದ್ದುದರ ಬಗ್ಗೆ ನಮಗೆ ಮಾಹಿತಿ ದೊರೆಯುವುದಿಲ್ಲ. ಆಡಳಿತದ ಎಲ್ಲ ವಿಭಾಗಗಳಲ್ಲೂ ಪುರುಷರೇ ಅಧಿಕಾರ ನಿರ್ವಹಿಸುತ್ತಿದ್ದರು. ಗುಮಿಕ(ಗಾಮಿಕ), ಮಹಾತಾರರ(ದರಬಾರ್ ಭಕ್ಷಿ), ಭಂಡಾರಗಾರಿಕ(ಉಗ್ರಾಣದ ಅಧಿಕಾರಿ), ಹೇರಾಣಿಕ (ಖಜಾಂಚಿ), ಮಹಾಮಾತ್ರ(ಬೌದ್ಧ ಸನ್ಯಾಸಿಗಳನ್ನು ನೋಡಿಕೊಳ್ಳುವ ಅಧಿಕಾರಿ)(ಆದಿಕಾಲ, ಕರ್ನಾಟಕ ಪರಂಪರೆ ಸಂಪುಟ–೧, ಪುಟ ೧೨೮, ೧೨೯). ಇಲ್ಲೆಲ್ಲ ಪುರುಷರೇ ಇರುವರು. ರಾಜ್ಯ ವ್ಯವಸ್ಥೆ ಜಾರಿ ಬರುವುದಕ್ಕಿಂತ ಮೊದಲೇ ಸ್ತ್ರೀಯರ ಅಧಿಕಾರಗಳು ಪುರುಷನಿಗೆ ಹಸ್ತಾಂತರವಾಗಿದ್ದವು. ಅಂದ ಮೇಲೆ ಅಧಿಕಾರದಲ್ಲಿರುವುದಾಲಿ, ಅಧಿಕಾರ ಹೊಂದುವುದಾಗಲಿ ಅಸಾಧ್ಯವಾಗಿತ್ತು. ಇಂದಿನ ಪ್ರಸ್ತುತ ಪ್ರಜಾಪ್ರಭುತ್ವವೆಂದು ಹೇಳುವ ರಾಜಕೀಯ ವ್ಯವಸ್ಥೆಯಲ್ಲಿ, ಸ್ತ್ರೀಯರು ತಮ್ಮ ಅಧಿಕಾರಕ್ಕಾಗಿ ಹೋರಾಟ ಮಾಡಿದರೂ ದೊರೆಯದ ಸ್ಥಾನ ಸಮ್ಮಾನಗಳು ರಾಜರ ನಿರಂಕುಶ ಆಳ್ವಿಕೆಯಲ್ಲಿ ಹೇಗೆ ದೊರೆಯಲು ಸಾಧ್ಯ? ಹಾಗಾಗಿ ಆಡಳಿತದ ಯಾವುದೇ ವಿಭಾಗದಲ್ಲಿ ಶಾತವಾಹನ ಕಾಲದ ಮಹಿಳೆಯರು ಭಾಗವಹಿಸಿದಂತೆ ನಮಗೆ ಮಾಹಿತಿ ದೊರೆತಿರುವುದಿಲ್ಲ.

ಶಾತವಾಹನರು ರೋಂನೊಂದಿಗೆ ವ್ಯಾಪಾರ ಹೊಂದಿದ್ದರ ಬಗ್ಗೆ ನಮಗೆ ಮಾಹಿತಿ ದೊರೆಯುತ್ತದೆ. ರೋಮಿನ ವಸ್ತುಗಳು ಬಹುವಾಗಿ ಆಕರ್ಷಿಸಿದಂತೆ ಕಾಣುತ್ತದೆ, ಹಾಗೆ ಆ ಕಾಲದಲ್ಲಿ ರೋಮ್‌ಗೂ ಇದು ಅನ್ವಯಿಸುತ್ತದೆ. ಅವರನ್ನು ಸೆಳೆದ ವಸ್ತು ಕುರಿತು ಶಾತವಾಹನರ ಕಾಲಧ ಆಧಾರಗಳೇ ಹೇಳುತ್ತವೆ. ಪೆರಿಪ್ಲಸ್ ಪ್ರಕಾರ ರೋಮ್‌ಗೆ ಪೈಠಣ ಇತರೆ ತೀರ ಪ್ರದೇಶಗಳಿಂದ ಹಲವಾರು ಅವಶ್ಯಕ ವಸ್ತುಗಳ ಜೊತೆಗೆ ದೊಡ್ಡ ಪ್ರಮಾಣದ ಲೋಹಿತಾಂಕವು ಬರುತ್ತಿತ್ತು. ಅಲ್ಲಿಂದ ತೆಳುವಾದ ಬಟ್ಟೆ, ಹವಳ, ಅಲ್ಪಸತು, ತಾಮ್ರ, ಮದ್ಯ ಇತರೆ ವಸ್ತುಗಳು ಬರುತ್ತಿದ್ದವು(ಮೋತಿಚಂದ್ರ; ಸಾರ್ಥವಾಹ, ಪಾಟೀಲ ಎಚ್. ಎಸ್.(ಅನು); ಪ್ರಾಚೀನ ಭಾರತದ ಪಥ ಪದ್ಧತಿ, ರೋಮನ್ ಸಾಮ್ರಾಜ್ಯದೊಡನೆ ಭಾರತದ ವ್ಯಾಪಾರ, ಪುಟ ೧೬೧, ೧೬೨). ದಕ್ಷಿಣ ಭಾರತದ ಲೋಹ ಪ್ರಾಚೀನ ಕಾಲದಿಂದಲೂ ವಿದೇಶಿಯರಿಗೆ ಕಚ್ಚಾ ಮೂಲವಾಗಿರುವುದು ದುರದೃಷ್ಟಕರ. ಲೋಹ ಸಂಪತ್ತು ಇವತ್ತಿನವರೆಗೂ ಭಾರತದಲ್ಲಿ ಸಮೃದ್ಧವಾಗಿರುವುದು ಅದೃಷ್ಟವೇ ಸರಿ. ಹಾಗೆಯೇ ಪ್ರಾಚೀನ ಕಾಲದಿಂದಲೂ ವಿದೇಶದಿಂದ ಬರುವ ವಸ್ತುಗಳು ಅನಗತ್ಯ ಮೋಜಿಗೆ ಭಾರತೀಯರನ್ನು ಒಳಗಾಗಿಸಿರುವುದಕ್ಕೆ ಅಲ್ಲಿಂದ ಬರುವ ವಸ್ತುಗಳೇ ಕಾರಣವಾಗಿರುವುದು ವಿಚಿತ್ರ ಸತ್ಯವಾಗಿರುವುದು. ಪಾನಾಸಕ್ತ ಕುಟುಂಬಗಳು, ಮನರಂಜನೆ, ಅವರ ಭೋಗಜೀವನ, ಶಿಲ್ಪಗಳು, ಇಂಥ ಹಲವು ಶಿಲಾಫಲಕಗಳು, ಇವೆಲ್ಲ ನಮಗೆ ಅನ್ಯಸಂಸ್ಕೃತಿಯೊಂದು ದಕ್ಷಿಣಕ್ಕೆ ಕಾಲಿಟ್ಟ ಪ್ರಭಾವದಿಂದ ಇರಬಹುದೇ ಎನಿಸುತ್ತದೆ. ಇಲ್ಲಿ ಮೂಲತಃ ಜನರೇ ಹಾಗಿರಬಹುದೆಂದು ಅನುಮಾನಿಸಲು ದಕ್ಷಿಣದವರು ಕೃಷಿ ಸಂಸ್ಕೃತಿಯವರು. ಇದು ಒಂದು ರೀತಿ ಹೇಗೆಂದರೆ ಪ್ರಸ್ತುತ ದಿನಮಾನದಲ್ಲಿ ಭಾರತೀಯರು ವಿದೇಶಿ ಸಂಸ್ಕೃತಿಗೆ ಮಾರುಹೋಗಿ ಜೀವನಶೈಲಿಯನ್ನು ಬದಲಾಯಿಸಿಕೊಂಡಂತೆ. ಆ ಕಾಲಾವಧಿಯಲ್ಲಿ ಹೀಗೂ ಆಗಿರುವ ಸಾಧ್ಯತೆ ಇದೆ.

ಶಾತವಾಹನ ಕಾಲದಲ್ಲಿ ಮೇಲ್ವರ್ಗದಲ್ಲಿ ರಾಜಮನೆತನದವರನ್ನು ಹೊರತುಪಡಿಸಿ ಶ್ರೀಮಂತ ವರ್ಗದವರಿದ್ದರು. ಮಧ್ಯಮ ವರ್ಗವಿರಲೇಬೇಕು, ಕೆಳವರ್ಗದವರು, ಸೇವಕ ವರ್ಗದವರೆಂದು ಸಮಾಜದಲ್ಲಿ ವರ್ಗ ನಿರ್ಮಾಣವಾಗಿತ್ತು. ಶ್ರೀಮಂತ ದಂಪತಿಗಳಿಗೆ ಮದಿರಾ ಪಾತ್ರೆಯಿಂದ ಯಜಮಾನತಿ ಬಟ್ಟಲಿಗೆ ಪೇಯವನ್ನು ಹಾಕಲು ಸಿದ್ಧವಾಗಿರುವ ದೃಶ್ಯಗಳು ಸನ್ನತಿಯ ಕೆಲವು ಚಿತ್ರ ಫಲಕಗಳು, ಸ್ತಂಭಗಳ ಮೇಲಿವೆ. ಒಬ್ಬ ಸೇವಕಿ ಚಾಮರದಿಂದ ಗಾಳಿ ಬೀಸುತ್ತಿರುವ ಮತ್ತೊಬ್ಬ ಸೇವಕಿ ತಂತುವಾದ್ಯ ಮೀಟುತ್ತಿರುವ ದೃಶ್ಯವಿದೆ. ಪಾನಾಸಕ್ತ ಶ್ರೀಮಂತ ಕುಟುಂಬದ ಕೆಳಗೆ ಸೇವಕಿಯರ ಚಿತ್ರ ಸನ್ನತಿಯಲ್ಲಿದೆ(ಸುಂದರ ಅ.; ಕರ್ನಾಟಕ ಚರಿತ್ರೆ ಸಂಪುಟ–೧, ಪುಟ ೩೯೯). ಶಾತವಾಹನರ ಆಡಳಿತ ಅವಧಿಯಲ್ಲಿ ರೋಮ್‌ನವರು ಇಲ್ಲಿ ಭೇಟಿ ಕೊಟ್ಟಿರಬಹುದು. ಇಲ್ಲವೇ ಇಲ್ಲಿ ನೆಲೆಸಿರಬಹುದು, ಅವರೊಂದಿಗೆ ವ್ಯಾಪಾರ–ವ್ಯವಹಾರಕ್ಕಾಗಿ ಅವರ ಜೊತೆ ಬೆರೆಯುವ ಇಲ್ಲಿಯ ಮೇಲ್ವರ್ಗದವರು ಅವರ ಜೀವನ ಶೈಲಿಯನ್ನು ಅಳವಡಿಸಿಕೊಂಡಿರುವ ಸಾಧ್ಯತೆ ಇದೆ. ಹಾಗಾಗಿ ಪಾನ–ಪೇಯಗಳ ದೃಶ್ಯಗಳು ದೊರೆತಿವೆ. ಪ್ರಸ್ತುತ ಭಾರತದಲ್ಲಿ ಮುಕ್ತ ಮಾರುಕಟ್ಟೆ ವ್ಯವಸ್ಥೆಯಿಂದ ವಿದೇಶಿ ಸಂಸ್ಕೃತಿ ಯಾವುದೇ ಬೆಲೆ ತೆರದಿದ್ದರೂ ಭಾರತವನ್ನು ಪ್ರವೇಶಿಸುತ್ತಿದ್ದು ನಾವೆಲ್ಲ ಅವೆಲ್ಲವನ್ನು ಅಷ್ಟೇ ಮುಕ್ತವಾಗಿ ಅಳವಡಿಸಿಕೊಳ್ಳುತ್ತಿದ್ದೇವೆ. ಅನ್ಯಸಂಸ್ಕೃತಿ ನಮ್ಮ ಪ್ರಕೃತಿ ಮತ್ತು ಜೀವನಕ್ಕೆ ಹೊಂದಿಕೆ ಆಗುವುದರ ಬಗ್ಗೆ ಒಂದು ಕ್ಷಣವೂ ಯೋಚಿಸುವುದಿಲ್ಲ. ಇಂಥ ಸಂದರ್ಭ ಶಾತವಾಹನರ ಕಾಲಕ್ಕೆ ಭಾರತ ಪ್ರವೇಶಿಸಿ ಆಗಿತ್ತು. ಸನ್ನತಿಯ ಸ್ತಂಭ ಪೇಟ–ಸ್ತಂಭದ ಮಾದರಿ ದೊರೆತಿದ್ದು, ಇದರ ಮೇಲಿನ ಶಾಸನವು ಬೌದ್ಧವರ್ಗಕ್ಕೆ ಸೇರಿದ ನಡಿಯ ಗುಡ ಎಂಬುವನ ಪುತ್ರಿ ಹಾಗು ನರ್ತಕಿ ಗೋವಿದಾಸಿ, ಅಲ್ಲಿಯ ಮಹಾಸ್ತೂಪದ ಪ್ರಕಾರ ನಿರ್ಮಾಣಕ್ಕೆ ದಾನ ಮಾಡಿದ್ದಾಳೆ ಹಾಗೂ ನರ್ತಕಿ ಆರ್ಯವಾಸಿ ಮತ್ತು ನಟಿ ವಾಲುಕಿಯರು ಉನ್ನತದ್ವಾರ ಮತ್ತು ಸಭಾಂಗಣ ಕಟ್ಟಿಸಿದರೆಂದಿದೆ(ಲಕ್ಷ್ಮಣ್ ತೆಲಗಾವಿ; ಮೌರ್ಯ ಮತ್ತು ಶಾತವಾಹನ ಯುಗ, ಪುಟ ೧೧೬). ಅಂದರೆ ಸಮಾಜದಲ್ಲಿ ಮೇಲ್ವರ್ಗದವರ ಸೇವೆಗೆ ದಾಸೀವರ್ಗದವರಿದ್ದರು. ಅವರು ಬಯಸುವ ಮನರಂಜನೆಗೆ ಸಂಗೀತ ನೃತ್ಯ ಸೇವೆ ಮಾಡುವ ಒಂದು ವರ್ಗವಿತ್ತೆಂಬುದು ಖಚಿತವಾಗುತ್ತದೆ. ಗಮನಿಸಬಹುದಾದ ಮತ್ತೊಂದು ಅಂಶವೆಂದರೆ ಇಂಥ ನೃತ್ಯ ಮಾಡುವ ಸ್ತ್ರೀಯರು ಆರ್ಥಿಕವಾಗಿ ಬಲಿಷ್ಠರಾಗಿದ್ದರೆನ್ನುವುದು. ಅವರು ಮೇಲ್ವರ್ಗದವರಂತೆ ದೇವಾಲಯಗಳ ಜೀರ್ಣೋದ್ಧಾರದಂಥ ಕಾರ್ಯದಲ್ಲಿ ಆರ್ಥಿಕ ಸಹಾಯ ಮಾಡುತ್ತಿದ್ದರೆಂದರೆ ಅವರ ಸಮಾಜದಲ್ಲಿ ಪ್ರಭಾವಿ ಮಹಿಳೆಯರಾಗಿರಬೇಕು.

ಗೃಹಿಣಿಯರು ಕುಟುಂಬದಲ್ಲಿ ಈಗಿನ ಗೃಹಿಣಿಯರಂತೆ ಸ್ವತಂತ್ರರಹಿತ ಜೀವನ ನಡೆಸುತ್ತಿರಲಿಲ್ಲವೆನ್ನಬಹುದು. ಕೆಲವು ಗೃಹಿಣಿಯರ ಉಲ್ಲೇಖ ಕೂಡ ಬಂದಿದೆ. ಗೃಹಿಣಿ ಸಿಹಾಡಿ ಮತ್ತು ಹೇಮಾನಂದ ಎಂದು ಬರಹದಲ್ಲಿದೆ. ಹಾಗೆಯೇ ಅಹಿಮಾರಿಕಾದ ಗೃಹಿಣಿ ಎಂದು ದಾಖಲಿಸಲಾಗಿದೆ. ಶಾಸನೋಕ್ತವಾಗಿ ಸಮಯ, ಯಖಾ ಇವರೀರ್ವರು ಗೃಹಿಣಿಯರು.

ಗೃಹಿಣಿಯರ ಹೆಸರನ್ನು ಪ್ರಸ್ತಾಪಿಸಲಾಗಿದೆ. ಸಮಾಜಕ್ಕಿಂತ ಕುಟುಂಬದಲ್ಲಿ ಸ್ತ್ರೀಯರಿಗೆ ದೊರೆಯುವ ಸ್ವಾತಂತ್ರ್ಯ ಮತ್ತು ಹಕ್ಕುಗಳು ಬಹಳ ಮುಖ್ಯವಾಗುತ್ತವೆ. ಹಾಗಾಗಿ ಕುಟುಂಬದಲ್ಲಿ ಗೃಹಿಣಿಯರಿಗೆ ದೊರೆಯುವ ನಿಜವಾದ ಸ್ಥಾನಮಾನ ದೊರೆಯುತ್ತಿದ್ದೆಯೇ ಎಂಬುದು ಮುಖ್ಯವಾಗುತ್ತದೆ. ಕುಟುಂಬದಲ್ಲಿ ಹೆಣ್ಣಿಗೆ ಗಂಡನಿಂದ ಎದುರಿಸುತ್ತಿದ್ದ ಮತ್ತೊಂದು ಸಮಸ್ಯೆ ಬಹುಪತ್ನಿತ್ವ, ಪ್ರಾಚೀನ ಕಾಲದಿಂದಲೂ ಸ್ತ್ರೀಯರು ತಮ್ಮ ಪತಿಯಿಂದಾಗಿ ಇಂಥ ಒಂದು ಸಮಸ್ಯೆಯನ್ನು ಎದುರಿಸುತ್ತಾ ಬಂದಿದ್ದಾರೆ. ಕಠಿಣ ಕಾನೂನು ಮತ್ತು ಶಿಕ್ಷೆಗಳ ಮಧ್ಯೆಯೂ ಈ ಕಾಲದಲ್ಲಿ ಗಂಡಸರು ಹಲವು ಪತ್ನಿಯರನ್ನು ಹೊಂದುವುದನ್ನು ನಾವು ನೊಡುತ್ತೇವೆ. ಅಂದ ಮೇಲೆ ಬಹುಪತ್ನಿತ್ವಕ್ಕೆ ಸಮ್ಮತಿಯಿದ್ದು, ಯಾವುದೇ ಶಿಕ್ಷೆ ಇಲ್ಲದ ಶಾತವಾಹನ ಕಾಲದಲ್ಲಿ ಗಂಡಸರು ಹಲವು ಪತ್ನಿಯರನ್ನು ಹೊಂದುವುದು ಸಹಜವಾಗಿತ್ತು. ಗೌತಮಿಪುತ್ರ ಸಾತಕರ್ಣಿ ಅಂತ್ಯದ ಕಾಲದಲ್ಲಿ ಆತನ ಸುತ್ತಲೂ ಕುಳಿತ ಸ್ತ್ರೀಯರು ಸಾಮಾನ್ಯ ಸ್ತ್ರೀಯರೆಂದು ಭಾವಿಸುವಂತಿಲ್ಲ. ಅವರ ಅರಮನೆಯ ಆಲಂಕಾರಿಕ ಉಡುಗೆಗಳು ವಿವಿಧ ಭಂಗಿಗಳಲ್ಲಿ ಕುಳಿತಿರುವ ಅವರೆಲ್ಲ ಪತ್ನಿಯರು, ದಾಸಿಯರು ಇರಬಹುದು. ರಾಜರ ವಿಚಾರಗಳು ಶಾಸನಗಳಲ್ಲಿ ದಾಖಲಾಗುವುದು ಸಾಮಾನ್ಯವಾಗಿತ್ತು. ಹಾಗಾಗಿ ಅವರು ಬಹುಪತ್ನಿಯರನ್ನು ಹೊಂದಿರುವುದಕ್ಕೆ ಆಧಾರಗಳು ದೊರೆಯುತ್ತವೆ. ಅದೇ ಸಾಮಾನ್ಯರ ವಿಚಾರದಲ್ಲಿ ಇಂಥ ವಿಷಯಗಳು ಮುಖ್ಯವಲ್ಲದ ಕಾರಣಕ್ಕೆ ದಾಖಲಾಗಿ ಉಳಿದಿರುವುದಿಲ್ಲ. ಹಾಗೆಂದು ಜನಸಾಮಾನ್ಯರಲ್ಲಿ ಈ ಪದ್ಧತಿ ಇರಲಿಲ್ಲವೆಂದಲ್ಲ ಅವರಲ್ಲಿ ಇದು ಸಾಮಾನ್ಯವಾಗಿರುವ ಸಾಧ್ಯತೆಯಿದೆ.

ವಿದೇಶಿಯರು ದಾಳಿ ಮಾಡಿದ ಕಾರಣವೇ ಆಗಿರಲೀ ಇಲ್ಲವೇ ಮುಕ್ತ ಪ್ರವೇಶವೇ ಆಗಿರಲಿ ಅವರೊಂದಿಗೆ ಪ್ರವೇಶಿಸುವ ಅವರ ಸಂಸ್ಕೃತಿ, ದಾಳಿಗೊಳಗಾದ ಮೂಲ ಜನಾಂಗದ ಮೇಲೆ ಪರಿಣಾಮ ಬೀರದೇ ಇರದು. ಒಟ್ಟು ಸಮಾಜದ ಮೇಲೆ ಉಂಟುಮಾಡುವ ಪರಿಣಾಮ ಒಂದು ಕಡೆಯಾದರೆ, ಸ್ತ್ರೀಯರ ಮೇಲೆ ಅನ್ಯಸಂಸ್ಕತಿಯ ಪರಿಣಾಮ ತುಂಬಾ ಪ್ರಭಾವದಿಂದ ಕೂಡಿರುತ್ತದೆ. ಇತಿಹಾಸದಲ್ಲಿ ಇಂಥ ದಾಳಿಗಳು ದಕ್ಷಿಣದ ದ್ರಾವಿಡ ಮಹಿಳೆಯರ ಮೇಲೆ ಸಂಚಲನವನ್ನೇ ಉಂಟುಮಾಡಿತು. ದ್ರಾವಿಡರ ಸಂಸ್ಕೃತಿ ಸ್ತ್ರೀ ಪ್ರತೀಕವಾಗಿದೆ. ಇಲ್ಲಿ ಸ್ತ್ರೀ ಎಂದರೆ ಪ್ರಕೃತಿ, ಸ್ತ್ರೀ ಎಂದರೆ ಸಂಸ್ಕೃತಿ, ಹಾಗೆ ಸಂಸ್ಕೃತಿ ಎಂದ ತಕ್ಷಣ ಪ್ರತ್ಯರ್ಥವಾಗಿ ನಮ್ಮ ಕಲ್ಪನೆಯಲ್ಲಿ ನಿಲ್ಲುವವಳು ಹೆಣ್ಣು. ಇಂಥ ಮಾತೃಪ್ರಧಾನ ಸಂಸ್ಕೃತಿಯ ಮೇಲೆ ಉಂಟಾದ ದಾಳಿ ನೇರವಾಗಿ ಹೆಣ್ಣಿನ ಮೇಲೆ ಆದ ದಾಳಿಯಾಗಿದೆ. ಅನ್ಯರ ದಾಳಿಯಿಂದ ಪುರುಷರಿಗಿಂತ ಹೆಚ್ಚಾಗಿ ಹೆಣ್ಣಿನ ಜೀವನದ ಮೇಲೆ ಉಂಟಾದ ಪರಿಣಾಮಗಳು ಅಧಿಕವೆನ್ನಬಹುದು. ಏಕೆಂದರೆ ಶಾತವಾಹನರ ಕಾಲಕ್ಕಿಂತಲೂ ಮೊದಲು ಕರ್ನಾಟಕ ಉತ್ತರ ಭಾರತದ ರಾಜಕೀಯ ಪ್ರಭಾವಕ್ಕೆ ಒಳಗಾಗಿರುವುದರಿಂದ ದ್ರಾವಿಡರ ಸಾಮಾಜಿಕ ಜೀವನವನ್ನು ಕುರಿತಾಗಲಿ, ಸ್ತ್ರೀಯರ ಕುರಿತಾಗಲಿ ಹೀಗೆ ಇತ್ತು ಎಂದು ನಿರ್ಧಾರ ಮಾಡುವುದು ಕಷ್ಟವಾಗುತ್ತದೆ.

ಶಾತವಾಹನರು ಇತಿಹಾಸದಲ್ಲಿ ಹಲವು ಕಾರಣಗಳಿಂದ ಪ್ರಧಾನವಾಗಿದ್ದಾರೆ. ದಕ್ಷಿಣದಲ್ಲಿ ಸ್ವತಂತ್ರ ಆಡಳಿತ ವ್ಯವಸ್ಥೆಗೆ ನಾಂದಿ ಹಾಡಿದರು, ಇವರು ಕರ್ನಾಟಕ ಆಂಧ್ರದ ಭಾಗಗಳಲ್ಲಿ ಆಡಳಿತ ನಿರ್ವಹಿಸಿದರು. ದಕ್ಷಿಣದಲ್ಲಿ ದ್ರಾವಿಡಪ್ರಧಾನ ಭಾಷಾವಾರು ರಾಜ್ಯಗಳಾದ ಆಂಧ್ರ, ತಮಿಳುನಾಡು, ಕರ್ನಾಟಕದಲ್ಲಿ ಏಕಕಾಲಕ್ಕೆ ಹಲವಾರು ರಾಜಮನೆತನಗಳು ಆಡಳಿತ ಆರಂಭಿಸಿದರು. ಇದರಿಂದ ಅವರದೇ ಆದ ಪ್ರತ್ಯೇಕ ಸಂಸ್ಕೃತಿಗಳು ಆಚರಣೆಯಲ್ಲಿ ಜಾರಿ ಬಂದವು. ಹಾಗಾಗಿ ಶಾತವಾಹನ ಕಾಲಾವಧಿಯ ಅಧ್ಯಯನ ಹಲವಾರು ಕಾರಣಗಳಿಂದ ಬಹು ಮುಖ್ಯವೆನಿಸುತ್ತದೆ. ಏಕೆಂದರೆ ಅನ್ಯಸಂಸ್ಕೃತಿ ಮತ್ತು ಪ್ರಭಾವದ ಮಧ್ಯೆ ಮೂಲ ದ್ರಾವಿಡಸಂಸ್ಕೃತಿಯನ್ನು ಗುರುತಿಸುವ ಪ್ರಮುಖ ಕಾಲಘಟ್ಟವಾಗಿದೆ. ಏಕೆಂದರೆ ಶಾಸನೋಕ್ತ ಮತ್ತು ಆ ಕಾಲದಲ್ಲಿ ನಿರ್ಮಿಸಲಾಗುತ್ತಿದ್ದ ಸ್ತೂಪಗಳ ಮೇಲೆ ಚಿತ್ರಿಸಲಾದ ಶಿಲ್ಪಗಳ ಆಧಾರದ ಮೇಲೆ ಅಧ್ಯಯನ ಮಾಡುವುದರಿಂದ ಆ ಕಾಲಾವಧಿಯಲ್ಲಿ ಸ್ತ್ರೀ-ಪುರುಷ ಶಿಲ್ಪಗಳ ಉಡುಗೆ, ಆಲಂಕಾರಿಕ ಆಭರಣಗಳ ಬಳಕೆ, ಅವೆಲ್ಲ ಅವರು ಮುಂದುವರಿದ ಶ್ರೀಮಂತ ಸಂಸ್ಕೃತಿಗೆ ಸೇರಿದವರಾಗಿದ್ದರೆನಿಸುತ್ತದೆ(Ghurye G.S.; indian costume, Figure 295, 291, 292).

ಶಾತವಾಹನರ ಆಳ್ವಿಕೆ ಅವಧಿಯ ಪುರುಷಸಮಾಜವನ್ನು ಅಧ್ಯಯನ ಮಾಡುವುದರ ಮೂಲಕ ಸ್ತ್ರೀಯರ ಜೀವನ ಹೀಗಿದ್ದಿರಬಹುದಾದ ಸಾಧ್ಯತೆ ಇದೆ ಎಂದು ಆಧಾರಪೂರ್ವಕ ಚಿತ್ರಣವನ್ನು ಸಂಕ್ಷಿಪ್ತವಾಗಿ ಅಧ್ಯಯನ ಮಾಡಲಾಯಿತು. ಶಾತವಾಹನರ ನಂತರ ಕರ್ನಾಟಕದಲ್ಲಿ ಕನ್ನಡ ನಾಡಿನ ಪ್ರದೇಶಗಳನ್ನು ಒಟ್ಟುಗೂಡಿಸಿ ಪ್ರತ್ಯೇಕವಾಗಿ ಆಳ್ವಿಕೆ ಮಾಡಿದವರು ಕದಂಬರು. ಶಾತವಾಹನರ ಕಾಲದಲ್ಲಿ ಇದ್ದ ಸ್ತ್ರೀಯರ ಸ್ಥಿತಿಗತಿಗಳು ಹಾಗೆಯೇ ಮುಂದುವರಿದವು. ಒಂದು ಕಡೆ ಸ್ತ್ರೀಯನ್ನು ಪೂಜನೀಯ ಸ್ಥಾನದಲ್ಲಿರಿಸಿ ನಿಷ್ಕ್ರಿಯಳನ್ನಾಗಿಸಿದ್ದು, ಮತ್ತೊಂದು ಕಡೆ ಅವರಿಂದಲೇ ಸೇವೆಯನ್ನು ಪಡೆದುಕೊಂಡಿದ್ದು, ಇದೊಂದು ರೀತಿ ವೈರುಧ್ಯವೇ ಸರಿ. ಕಾಲ ಗತಿಸಿದಂತೆಲ್ಲ ಅವಳ ಸ್ಥಾನವೂ ಕುಸಿಯಿತು. ಸಾಮಾಜಿಕ ಸಂರಚನೆಯಲ್ಲಿ ಪುರುಷ ಮಾತ್ರ ಇದ್ದುದರಿಂದ ಎಲ್ಲ ನಿಯಮಗಳು ಅವನ ಹಿತಾಸಕ್ತಿಯನ್ನೇ ಕೇಂದ್ರವಾಗಿರಿಸಿ ಕೊಂಡು ರಚನೆಯಾದಂತವುಗಳು. ಗತಿಸಿದ ಪ್ರತಿ ಕಾಲಘಟ್ಟವನ್ನು ಅಧ್ಯಯನ ಮಾಡಿದಾಗ ಸ್ತ್ರೀ ಉಚ್ಚಸ್ಥಾನದಿಂದ ನೀಚಸ್ಥಾನಕ್ಕೆ ಬರುವುದನ್ನು ನೋಡಬಹುದು.

ಪ್ರತಿ ಕಾಲಘಟ್ಟದಲ್ಲಿ ಹೆಣ್ಣಿನ ಸ್ಥಾನ ಕುಸಿಯುತ್ತಾ ಬಂದಂತೆ ಅವಳು ಅಪ್ರಧಾನಳಾಗುತ್ತಾ ಬಂದಳು. ಶಾತವಾಹನ ಕಾಲದಲ್ಲಿ ಕಂಡುಬಂದಷ್ಟು ಮಾತೃಪ್ರಧಾನ ಅಂಶಗಳು ಕದಂಬರ ಕಾಲದಲ್ಲಿ ಕಂಡು ಬರುವುದಿಲ್ಲ. ಹೆಣ್ಣುದೈವಗಳನ್ನು ಉಗ್ರರೂಪದಲ್ಲಿ, ಸೌಮ್ಯರೂಪದಲ್ಲಿ, ಮಾತೃಕೆಯರಾಗಿ, ಗ್ರಾಮದೇವತೆಯರಾಗಿ ವಿಭಿನ್ನ ರೂಪದಲ್ಲಿ ಆರಾಧನೆಯನ್ನು ಒಪ್ಪಿಕೊಂಡು ಉನ್ನತ ಸ್ಥಾನದಲ್ಲಿರಿಸಿದರು. ನಾಲ್ಕನೇ ಶತಮಾನದಿಂದ ಆರು, ಏಳನೇ ಶತಮಾನದವರೆಗಿನ ಕಾಲಾವಧಿಯಲ್ಲಿ ಸಾಕಷ್ಟು ಉಗ್ರದೇವತೆಗಳು ನಮಗೆ ದೊರೆಯುತ್ತವೆ. ತಾಳಗುಂದದ ದ್ವಿಭುಜ

ಮಹಿಷಮರ್ದಿನಿ(೪ನೇ ಶತಮಾನ), ದೇವಿಹಾಳ್‌ನ ಮಹಿಷ ಮರ್ದಿನಿ(೫ನೇ ಶತಮಾನ), ಹಿನ್ನೂರಿನ ಚತುರ್ಭುಜ ಮಹಿಷ ಮರ್ದಿನಿ(೫ ಮತ್ತು ೬ನೇ ಶತಮಾನ), ದ್ವಿಭುಜ ಮಹಿಷಮರ್ದಿನಿ ಉಡುಪಿ(೫ನೇ ಶತಮಾನ), ತಲಕಾಡಿನ ದ್ವಿಭುಜ ಮಹಿಷ ಮರ್ದಿನಿ(೬ ಮತ್ತು ೭ನೇ ಶತಮಾನ), ಐಹೊಳೆಯ ದುರ್ಗಾದೇವಾಲಯದ ಅಷ್ಟಭುಜ ಮಹಿಷಮರ್ದಿನಿ, ಇದು ಅನೇಕ ವಿದ್ವಾಂಸರ ಹೊಗಳಿಕೆಗೆ ಪಾತ್ರವಾಗಿದೆ. ಅಲ್ಲಿ ದುಷ್ಟಸಂಹಾರಕಳಾಗಿ ಪ್ರತಿಬಿಂಬಿತಳಾಗಿದ್ದಾಳೆ. ದುಷ್ಟಸಂಹಾರಕಳಾಗಿ, ಶತ್ರು ಸಂಹಾರಕ್ಕಾಗಿ ಸ್ತ್ರೀದೈವವನ್ನೇ ಆರಾಧಿಸಲಾಗುತ್ತದೆ. ಸ್ತ್ರೀದೈವತ್ವ ಸ್ಥಾನದಲ್ಲೇನು ಬದಲಾಗಲಿಲ್ಲ, ಆದರೆ ಗಂಡು ದೇವರು ಮತ್ತು ದೇವಾಲಯಗಳಿಗೆ ನೀಡಿದ ಪೋಷಣೆ ಮತ್ತು ಪ್ರಾಧಾನ್ಯತೆ ಸ್ತ್ರೀದೇವತೆ, ಮತ್ತು ದೇವಾಲಯಗಳಿಗೆ ನೀಡದೇ ಇದ್ದದ್ದು ಒಂದು ರೀತಿ ನಿರ್ಲಕ್ಷವೇ ಸರಿ. ಬದಲಾದದ್ದು ಸಮಾಜದ ಹೆಣ್ಣಿನ ಜೈವಿಕ ಕ್ರಿಯಾಶೀಲ ವಾಸ್ತವಿಕ ಜಗತ್ತಿನಲ್ಲಿ.

ಮೂರು-ನಾಲ್ಕನೇ ಶತಮಾನಕ್ಕೆ ಸೇರಿದ ತಾಯಿ ಮಗುವಿನ ದುಂಡುಶಿಲ್ಪದಲ್ಲಿ ತಾಯಿ ತನ್ನ ಎಡ ತೊಡೆಯ ಮೇಲೆ ಗಂಡುಮಗುವನ್ನು ಕುಳ್ಳಿರಿಸಿಕೊಂಡಿದ್ದಾಳೆ. ಮಣಿರತ್ನಖಚಿತ ಹಾರ, ಕೈ ಬಳೆ ತೊಟ್ಟು ಸೀರೆ ಉಟ್ಟಿರುವ ಆಕರ್ಷಕ ಮೈಕಟ್ಟು ತುಂಬಿದ ಸ್ತನವಿದೆ( ಸುಂದರ ಅ.; ಕರ್ನಾಟಕ ಚರಿತ್ರೆ ಸಂಪುಟ-೧, ಪುಟ ೪೧೧). ಇಲ್ಲಿ ಹೆಣ್ಣಿನ ತಾಯ್ತನಕ್ಕೆ ದೊರಕಬೇಕಾದ್ದ ಗೌರವ ದೊರೆತಂತಿದೆ. ಆ ತಾಯ್ತನಕ್ಕೆ ಅತಿಯಾದ ಮಾನ್ಯತೆ ಬಂದಿರುವುದು ಅವಳು ಹೆತ್ತಿರುವ ಗಂಡು ಸಂತಾನದ ಕಾರಣಕ್ಕೆ. ಹೆಣ್ಣು ಮತ್ತು ಹೆಣ್ಣು ಸಂತಾನವನ್ನು ತಿರಸ್ಕರಿಸುವ ಮನೋಭಾವ ಈ ಕಾಲಾವಧಿಯಲ್ಲಿ ಬೆಳೆದಂತಿದೆ. ಸ್ತ್ರೀ ಇಲ್ಲಿ ಪುರುಷನ ಪೂರ್ಣ ಒಡೆತನದಲ್ಲಿ ಕಳೆದುಹೋದಳು.

ಸ್ತ್ರೀಯರು ಸಮಾಜದಲ್ಲಿ ಹೆಚ್ಚು ವಂಚನೆಗೊಳಗಾಗಿದ್ದು ಧರ್ಮ ಮತ್ತು ಅರ್ಥದಿಂದ. ಇವೆರಡರಿಂದ ಅಧಿಕಾರಹೀನಳಾಗಿ ಅಸಹಾಯಕ ಮತ್ತು ಅನುಪಯುಕ್ತ ಜಗತ್ತಿಗೆ ಸೇರಿದಳು. ಇಂಥ ಅಸಹಾಯಕತೆ ಒಮ್ಮೆಲೆ ಆವರಿಸಿದ್ದಲ್ಲ. ಶಾತವಾಹನ ಕಾಲದಲ್ಲಿ ಇದ್ದಷ್ಟೂ ಆರ್ಥಿಕ ಸ್ವಾಮಿತ್ವ ಕದಂಬರ ಕಾಲದಲ್ಲಿ ಇರುವುದಿಲ್ಲವೆನಿಸುತ್ತದೆ. ಕದಂಬರ ಕಾಲಕ್ಕೆ ಭೂಮಿ ಸಂಪೂರ್ಣ ಮಹತ್ವವನ್ನು ಪಡೆದುಕೊಂಡಿತು. ಏಕೆಂದರೆ ಇಲ್ಲಿ ಭೂಮಿ ದಾನ ಕೊಡುವ ಮತ್ತು ಕೃಷಿ ಮಹತ್ವವನ್ನು ಪಡೆದುಕೊಂಡಿರುವುದರ ಹಿನ್ನೆಲೆಯನ್ನು ಗಮನಿಸಿದಾಗ ಇಂಥ ಅಭಿಪ್ರಾಯ ವ್ಯಕ್ತವಾಗುತ್ತದೆ.

"ವ್ಯವಸಾಯ ಹೆಚ್ಚು ವೃದ್ಧಿಯಾಗುತ್ತಾ ಹೋಯಿತು. ಶಾಸನಗಳಲ್ಲಿ ಗ್ರಾಮಗಳ ಪಲ್ಲಿ, ಪಟ್ಟಿ, ಖೇಟವೆಂದು ಅಂತ್ಯವಾಗುವ ಗ್ರಾಮನಾಮಗಳು ಸಾಕಷ್ಟಿವೆ. ಪಲ್ಲಿ, ಖೇಟಗಳು ಅರಣ್ಯವಾಸಿಗಳ ವಸತಿಗಳೆಂದು ಅರ್ಥವಾಗುತ್ತದೆ. ಪಟ್ಟಿ ಸಾಮಾನ್ಯವಾಗಿ ದನಗಾಹಿಗಳ ವಸತಿ. ಸಹಲಾಟವಿ ಎಂಬುದು ಅಡವಿಯನ್ನು ಬಯಲು ಮಾಡಿ ಕೃಷಿ ಯೋಗ್ಯವಾಗಿಸಿದ್ದು ಎಂಬರ್ಥ ಬರುತ್ತದೆ. ಭೂದಾನದೊಂದಿಗೆ ನೇಗಿಲು ನೀಡುತ್ತಿದ್ದ ಸಂಗತಿಯು ಕೃಷಿ

ವಿಸ್ತಾರವಾದುದಕ್ಕೆ ಪುರಾವೆಯಾಗಿವೆ"(ಸುಂದರ ಅ.; ಕರ್ನಾಟಕ ಚರಿತ್ರೆಯ ಸಂಪುಟ-೧, ಪುಟ ೩೯೧). ಈ ಮೇಲಿನ ಮಾಹಿತಿಯನ್ನು ಗಮನಿಸಿದಾಗ ಹಿಂದೆ ಶಾತವಾಹನ ಕಾಲದಲ್ಲಿ ಇದ್ದ ರೋಮ್‌ನೊಂದಿಗಿನ ವಿದೇಶಿ ವ್ಯಾಪಾರ ಇಲ್ಲಿ ಇಳಿಮುಖವಾಗಿದೆ. ಅಥವಾ ತಾವಾಗಿಯೇ ವಿದೇಶಿ ವ್ಯಾಪಾರದ ಆಸಕ್ತಿಯನ್ನು ಬಿಟ್ಟಿರಬಹುದು. ಅರಣ್ಯಗಳನ್ನು ನಾಶ ಮಾಡಿ ಕೃಷಿ ಯೋಗ್ಯ ಭೂಮಿಯನ್ನು ಮಾಡಿದರೆಂದರೆ ಇಲ್ಲಿ ಕೃಷಿ ಮಹತ್ವವನ್ನು ಪಡೆದುಕೊಂಡಿತು ಮತ್ತು ಬುಡಕಟಟುಗಳು ನಗರೀಕರಣಕ್ಕೆ ಹೆಜ್ಜೆ ಇಟ್ಟರೆನ್ನಬಹುದು. ಶಾತವಾಹನ ಕಾಲದಲ್ಲಿ ಕೃಷಿ ವಿಸ್ತಾರಕ್ಕೂ ಕದಂಬರ ಕಾಲಕ್ಕೂ ವ್ಯತ್ಯಾಸವಿದೆ. ಕದಂಬರ ಕಾಲದಲ್ಲಿ ವಿದೇಶಿ ವ್ಯಾಪಾರ ನಿರ್ಲಕ್ಷಿಸಿ ಕೃಷಿಗೆ ಒತ್ತುಕೊಟ್ಟಿದ್ದರಿಂದ ಭೂಮಿ ಬೇಡಿಕೆ ಹೆಚ್ಚಾಯಿತು. ಈಗಾಗಲೆ ಶಾತವಾಹನ ಕಾಲಕ್ಕೆ ಇದ್ದ ವಿದೇಶಿ ವ್ಯಾಪಾರದಲ್ಲಿ ಕಂಡುಕೊಂಡಿದ್ದ ಉತ್ಪಾದನಾ ವಸ್ತುವಿನ ಬೇಡಿಕೆಯಿಂದ ಭೂಮಿ ಮತ್ತು ಅದರ ಉತ್ಪಾದನಾ ಮೌಲ್ಯ ಎರಡೂ ಹೆಚ್ಚಾಗಲು ಕಾರಣವಾಯಿತೆನ್ನಬಹುದು. ಭೂಮಿಯನ್ನು ಸಂಪತ್ತೆಂದು ಪರಿಗಣಿಸಿ, ಮೌಲ್ಯ ನಿಗದಿಸಿದ್ದಕ್ಕೆ ಅದೊಂದು ಪ್ರಮುಖ ವಿಲೇವಾರಿ ಧಾತುವಾಯಿತು. ಕೃಷಿ ಮಹತ್ವವನ್ನು ಪಡೆದುಕೊಂಡಿರುವುದಕ್ಕೆ ಅದಕ್ಕಿದ್ದ ಬೇಡಿಕೆ ಕಾರಣವಿರಬಹುದು. ಕೃಷಿ ಮಹತ್ವವನ್ನು ಪಡೆದುಕೊಂಡಿರುವುದಕ್ಕೂ ಭೂಮಿಗೆ ಬೇಡಿಕೆ ಹೆಚ್ಚಿರುವುದಕ್ಕೂ ಸ್ತ್ರೀಯರ ಸ್ಥಾನಗಳು ಕುಸಿಯುವುದಕ್ಕೂ ಸಂಬಂಧವಿದೆ. ಸಮಾಜದಲ್ಲಿ ಅಧಿಕ ಭೂಮಿ ಹೊಂದುವುದು ಸಂಪತ್ತು ಹೆಚ್ಚುವುದಕ್ಕೆ ಕಾರಣವಾಗುತ್ತದೆ. ಇದರಿಂದ ದೊಡ್ಡ ದೊಡ್ಡ ಜಮೀನ್ದಾರರು ಹುಟ್ಟಿಕೊಂಡು ಭೂಮಿಯ ಸಂಪೂರ್ಣ ಒಡೆತನವನ್ನು ಹೊಂದಿದರು. ನೀರಾವರಿಗಾಗಿ ಕೆರೆಗಳನ್ನು ನಿರ್ಮಿಸಿದ ಉಲ್ಲೇಖಗಳಿವೆ. ಭೂ. ಅಳತೆ ಮಾಪನ ನಿವರ್ತನ ಮತ್ತು ಷಣ್ಣಿವತ್ತನ(ಆರನೆ ನಿವರ್ತನ)ಗಳಿದ್ದ ಬಗ್ಗೆ ಮಾಹಿತಿ ಇದೆ. (ಸುಂದರ ಅ.; ಕರ್ನಾಟಕ ಚರಿತ್ರೆ ಸಂಪುಟ-೧, ಪುಟ ೩೯೧). ಭೂ ಅಳತೆ ಮಹತ್ವ ಬರುವುದು ಒಂದು ತೆರಿಗೆ ವಿಧಿಸುವುದಕ್ಕೆ, ಇನ್ನೊಂದು ಭೂ ಒಡೆತನ ತೋರಿಸುವುದಕ್ಕೆ, ಮತ್ತೊಂದು ಅಷ್ಟೊಂದು ಭೂಮಿಯನ್ನು ಹೊಂದಿರುವವನು ಎಲ್ಲವನ್ನು ಉಳುಮೆ ಮಾಡಲು ಸಾಧ್ಯವಿಲ್ಲ. ಹಾಗಾಗಿ ಭೂಮಿಯನ್ನು ಗೇಣಿ ಆಧಾರದ ಮೇಲೆ ಉಳುಮೆ ಮಾಡುವುದಕ್ಕೆ ಭೂರಹಿತರಿಗೆ ಕೊಡುವುದಕ್ಕೆ ಬಳಸಲಾಗುತ್ತದೆ. ಭೂಮಿಯನ್ನು ಕೊಡುವಾಗ ನೇಗಿಲುಗಳನ್ನು ಕೊಡುತ್ತಿದ್ದ ಸಂಗತಿ ಇದೆ. ಅಂದರೆ ದೊಡ್ಡ ಜಮೀನ್ದಾರರು ತಮ್ಮ ಭೂಮಿಯನ್ನು ಉಳುವುದಕ್ಕೆ ಒಂದು ದುಡಿಯುವ ವರ್ಗ ಬೇಕಿತ್ತು. ಅಂಥ ವರ್ಗವನ್ನು ಸೃಷ್ಟಿ ಮಾಡಿ ತಮ್ಮ ಜಮೀನುಗಳಲ್ಲಿ ದುಡಿಮೆಗೆ ಬಳಸಿಕೊಂಡರು. ಅಲ್ಲಿ ಬರೀ ಪುರುಷರಷ್ಟೇ ಅಲ್ಲ, ಸ್ತ್ರೀಯರು ದುಡಿಯುವುದು ಸಹಜವಾಗಿರುತ್ತದೆ. ಕೃಷಿ ಸ್ತ್ರೀಯರ ಶ್ರಮವನ್ನು ಅವಲಂಬಿಸಿರುತ್ತದೆ. ಭೂಮಿ ಮತ್ತು ಸಂಪತ್ತು ಒಂದೇ ಕಡೆ ಕೇಂದ್ರೀಕರಣವಾದವು. ಸಂಪತ್ತಿನ ಹಿಡಿತದಲ್ಲಿ ಸ್ತ್ರೀ ಎಲ್ಲ ರೀತಿಯಿಂದಲೂ ವಂಚನೆಗೊಳಗಾಗಿದ್ದು ಕೂಡ ಇದೇ ಕಾರಣದಿಂದಲೇ.

ಭೂಮಿ ಮಹತ್ವವನ್ನು ಪಡೆದುಕೊಂಡ ಕಾಲಕ್ಕೆ ಅದರ ಬಳಕೆ ಉತ್ಪಾದನೆಯ ಮೂಲ ಉದ್ದೇಶದ ಜೊತೆಗೆ ದಾನದ ರೂಪದಲ್ಲಿ ಬಳಕೆಯಾಗುವುದಕ್ಕೂ ಆರಂಭವಾಯಿತು. ಅಲ್ಲಿಯವರೆಗೂ ಸೈದ್ಧಾಂತಿಕವಾಗಿ ಇದ್ದ ಧರ್ಮ ಮೇಲ್ವರ್ಗದವರ ಮನೋಭಿಲಾಷೆಯಂತೆ ಬದಲಾವಣೆಗೊಂಡು ಆಚರಣೆ ರೂಪದಲ್ಲಿ ಜಾರಿಗೆ ಬರುವುದಕ್ಕೆ ಆರಂಭಿಸಿತು. ಆಚರಣೆಗೆ ತರುವುದಕ್ಕಾಗಿ ತಮ್ಮ ಮತ್ತು ದೇವರ ಮಧ್ಯ ನಂಬಿಕೆ ರೂಪವಾಗಿ ಮತ್ತೊಂದು ವರ್ಗವನ್ನು ಹುಟ್ಟು ಹಾಕಿತು. ಅದೇ ಪುರೋಹಿತ ವರ್ಗ. ಅವರಿಗೆ ಭೂಮಿ ದಾನ ಮಾಡುವ ಪರಂಪರೆಯನ್ನು ಹುಟ್ಟು ಹಾಕಿದರು. ಬ್ರಾಹ್ಮಣರಿಗೆ ದಾನ ಮಾಡುವುದರಿಂದ ಪುಣ್ಯಪ್ರಾಪ್ತಿ ಎಂಬ ನಂಬಿಕೆಯಿಂದ ಪುರೋಹಿತ ವರ್ಗ ಮೇಲ್ವರ್ಗದವರ ಸ್ಥಾನಕ್ಕೇರಿದರು. ಇದರಿಂದ ಹಣ, ಅಧಿಕಾರ ಮತ್ತು ಧರ್ಮ ಒಂದೇ ಕಡೆ ಸೇರಿದವು. ತಮ್ಮ ಅನುಕೂಲತೆಗಳಿಗೆ ತಕ್ಕಂತೆ ಕೆಳಸಮುದಾಯದವರನ್ನು ಬಳಕೆ ಮಾಡಿಕೊಂಡರು. ಅದಕ್ಕಾಗಿ ಕೆಳವರ್ಗದ ಸ್ತ್ರೀಯರ ಮೇಲೆ ನಿಯಮಗಳನ್ನು ರೂಪಿಸಿ ಸದಾ ಪುರುಷನ ಹಿಡಿತದಲ್ಲೇ ಇರುವಂತೆ ಮಾಡಿದರು. ಪುರೋಹಿತರ ಮಾತು ಸಾಕ್ಷಾತ್ ದೇವವಾಣಿಯೆಂಬಂತೆ ನಂಬಿಕೆ ಬೆಳೆಯಿತು. ಪುರೋಹಿತರನ್ನು ತೃಪ್ತಿಪಡಿಸುವಿಕೆ ದೇವರನ್ನು ತೃಪ್ತಿಪಡಿಸಿದಂತೆ. ದೇವರ ಕೋಪ, ಶಾಪದಿಂದ ತಪ್ಪಿಸಿಕೊಳ್ಳಲು ಪುರೋಹಿತರನ್ನು ಸದಾ ಸಂತೋಷವಾಗಿಡಬೇಕು. ಈ ಕಾರಣಕ್ಕಾಗಿ ದೇವರಿಗೆ ಎಷ್ಟು ಸಾಧ್ಯವೋ ಅಷ್ಟು ತಮ್ಮನ್ನು ಅರ್ಪಿಸಿಕೊಳ್ಳಬೇಕು. ಹಣವಿದ್ದವರು ಸಂಪತ್ತು ಮತ್ತು ಭೂಮಿಯನ್ನು ದಾನದ ರೂಪದಲ್ಲಿ ಅರ್ಪಿಸಬೇಕು.

ದೇವಾಲಯಗಳಿಗೆ ಮತ್ತು ಪುರೋಹಿತರಿಗೆ ಭೂಮಿ ಕೊಡುವ ಪದ್ಧತಿ ಆರಂಭವಾಯಿತು. ದಾನ ನೀಡಿದ ಭೂಮಿಯನ್ನು ಯಾರೂ ಕಸಿಯಬಾರದೆಂದು ನಂತರ ಶಾಪಾಶಯಗಳು ಹುಟ್ಟಿಕೊಂಡವು. ಬ್ರಾಹ್ಮಣರ ಆಸ್ತಿಯನ್ನು ಕಸಿಯುವುದಂತೂ ಘೋರ ಅಪರಾಧವೆಂಬಂತೆ ದಾಖಲಾಗಿವೆ. "ಗೋ ಬ್ರಾಹ್ಮಣರು ಸಂತುಷ್ಟರಾಗಿರಲಿ" ಬ್ರಾಹ್ಮಣರ ಆಸ್ತಿಯೆಂಬುದು ಭಯಾನಕ ವಿಷ"(ಸುಂದರ ಅ.; ಕರ್ನಾಟಕ ಚರಿತ್ರೆ ಸಂಪುಟ–೧, ಪುಟ ೩೮೫). ಇವರು ಪ್ರಬಲರಾಗುವುದಕ್ಕೆ ಇಂಥ ಅಂಶಗಳು ಕಾರಣವಾದವು. ಪುರುಷಸಮಾಜದಿಂದ ಪೋಷಣೆ ಪಡೆದ ಪುರೋಹಿತ ವರ್ಗ ಪುರುಷದೈವಗಳನ್ನು ಪ್ರಧಾನವಾಗಿಸುವ ಆರ್ಯರ ಮೂಲ ಉದ್ದೇಶಕ್ಕೆ ಮತ್ತಷ್ಟು ಪೋಷಣೆ ದೊರೆಯಿತು. ಇದರಿಂದ ಪುರುಷದೈವಗಳು, ಅವುಗಳನ್ನು ನೆಲೆಗೊಳಿಸಿದ ದೇವಾಲಯಗಳಿಗೆ ಸಾಕಷ್ಟು ಆರ್ಥಿಕ ಸೌಲಭ್ಯಗಳು ಹರಿದುಬಂದು ವಿವಿಧ ಚಟುವಟಿಕೆಗಳ ತಾಣಗಳಾದವು. ಒಂದು ಕಡೆ ವಿದ್ಯಾಕೇಂದ್ರಗಳು, ಮತ್ತೊಂದು ಕಡೆ ಸ್ವಹಿತಾಸಕ್ತಿಯನ್ನು ಈಡೇರಿಸುವ ಅಂತರ್‌ಮುಖಿ ತಾಣಗಳಾದವು.

ಧರ್ಮದಲ್ಲಿ ಒಂದೊಂದು ವರ್ಗದ ಸ್ತ್ರೀಯರಿಗೆ ಒಂದೊಂದು ನೀತಿ ನಿಯಮಗಳು ಇದ್ದವು. ಗೃಹಿಣಿಯರಿಗೆ ಪತಿವ್ರತಾಧರ್ಮ ಅಥವಾ ಮುತ್ತೈದೆ ಧರ್ಮ ಎಂದು, ಕೆಳವರ್ಗದ

ಮಹಿಳೆಯರಿಗೆ ಶೀಲ, ಪಾವಿತ್ರ್ಯತೆ ಎಂದು, ಮತ್ತೊಂದು ವರ್ಗದವರಿಗೆ ದೇವರ ಸೇವಕಿಯರು, ದಾಸಿಯರು ಎಂದು, ಉನ್ನತ ವರ್ಗದವರಿಗೆ ಪುಣ್ಯಪ್ರಾಪ್ತಿ, ಮೋಕ್ಷಕ್ಕಾಗಿ ಹೀಗೆ ಎಲ್ಲ ವರ್ಗದ ಮಹಿಳೆಯರು ಧಾರ್ಮಿಕ ನಿಯಮಗಳ ಒಳಗುದಿಯಲ್ಲಿ ಬೇಯಿತ್ತಿದ್ದರು. ಶಾಸನೋಕ್ತ ಆಧಾರಗಳ ಪ್ರಕಾರ ಸ್ತ್ರೀ ಜೀವವನ್ನೇ ಅಂತ್ಯಗೊಳಿಸುವ ಸತಿಪದ್ಧತಿ ಕೂಡ ಇದೇ ಕಾಲದಲ್ಲಿ ಹುಟ್ಟಿಕೊಂಡಿದೆ. ಗಂಡುಸಂತಾನ ಹೊಂದುವುದು ತುಂಬಾ ಮಹತ್ವವನ್ನು ಪಡೆದುಕೊಂಡಿತ್ತು. ಇದರ ಅರ್ಥ ಇದಕ್ಕೆ ವೈರುಧ್ಯವೆಂಬಂತೆ ಹೆಣ್ಣು ಮಗು ಇರುವುದು ಸಂತೋಷ ತರುವ ವಿಚಾರವಾಗಿರಲಿಲ್ಲ. ಹಾಗೆ ಗಂಡ ಜೀವಂತವಾಗಿರುವುದು ಸ್ತ್ರೀಯರಿಗೆ ಶುಭಲಕ್ಷಣವೆಂದು, ಇಲ್ಲದಿದ್ದರೆ ಅವರು ಅಮಂಗಳೆ ಎಂದು ಪರಿಗಣಿಸುವ ಪರಿಪಾಟ ಬೆಳೆದಿತ್ತು. ಇಂಥ ಪದ್ಧತಿಗಳನ್ನು ದೇವರಾಗಲಿ, ಧರ್ಮವಾಗಲಿ ಸೃಷ್ಟಿಸಿದ್ದಲ್ಲ. ದೇವರು ಮತ್ತು ಭಕ್ತರು ಇದ್ದ ಕಾಲಕ್ಕೆ ಇಂಥ ನಿಯಮಗಳು ಸಮಾಜದಲ್ಲಿ ಜಾರಿಯಲ್ಲಿರಲಿಲ್ಲ. ದೇವರು ಮತ್ತು ಭಕ್ತರ ಮಧ್ಯೆ ಮಧ್ಯಸ್ಥಿಕೆ ಮಾಡಲು ಬಂದ ವರ್ಗವೇ ಇಂಥ ನಿಯಮಗಳನ್ನು ಜಾರಿ ತಂದವು. ಈ ನಿಯಮಗಳು ದೈವನಿಯಮಗಳಾಗಿವೆ. ದೇವರು ಪುರೋಹಿತರ ಮೂಲಕ ಇವುಗಳನ್ನು ಜಾರಿಗೊಳಿಸುತ್ತಾನೆ ಎನ್ನುವಂಥ ನಂಬಿಕೆಗಳನ್ನು ಬೆಳೆಸಿದರು. ಸ್ತ್ರೀಯರಿಗಾಗಿ ಧರ್ಮದ ಹೆಸರಲ್ಲಿ ಕಟ್ಟುನಿಟ್ಟಾದ ನಿಯಮಗಳು ಜಾರಿ ಬಂದವು. ಧರ್ಮದ ಹೆಸರಿನಲ್ಲಿ ಜಾರಿ ಮಾಡಿದರೆ ಮಾತ್ರ ಪಾಲಿಸುತ್ತಾರೆ. ಇಲ್ಲದಿದ್ದರೆ ಅಸಾಧ್ಯವೆಂದರಿತೇ ಹೀಗೆ ಮಾಡಿರುವುದು. ಏಕೆಂದರೆ ಆ ಕಾಲಕ್ಕೆ ಧರ್ಮವೆಂದರೆ ಅದು ಪ್ರಶ್ನಾತೀತ. ಪ್ರಶ್ನಿಸುವುದು ಅಕ್ಷಮ್ಯವೆಂದು ಭಯ ಹುಟ್ಟಿಸಿದ್ದು ಇದ್ದಕ್ಕೆ ಕಾರಣವಾಯಿತು.

ಶಾತವಾಹನರ ಕಾಲಕ್ಕೆ ಇದ್ದ ವೃತ್ತಿನಿರತ ವರ್ಗಗಳು ಇಲ್ಲಿ ಇರುವುದಾಗಿ ಮಾಹಿತಿ ದೊರೆಯುತ್ತದೆ. ವೃತ್ತಿಗಳಲ್ಲಿ ಸ್ತ್ರೀಯರು ನಿರತರಾಗಿರುವುದು ಸಾಮಾನ್ಯವಾಗಿರುತ್ತದೆ. ಕುಟುಂಬದ ಆರ್ಥಿಕ ಹೊಣೆಗಾರಿಕೆಯಲ್ಲಿ ಅವರ ಪಾತ್ರ ಮಹತ್ವದ್ದಾಗಿರುತ್ತದೆ. ಇಲ್ಲಿ ವೃತ್ತಿನಿರತ ನೃತ್ಯಗಾರರಿದ್ದರು. ಕದಂಬರ ಕಾಲಕ್ಕೆ ನೃತ್ಯ ಮಾಡುವ ವರ್ಗದವರನ್ನು ಉಳಿದೆಲ್ಲ ವೃತ್ತಿಗಾರರಂತೆ ಇವರು ಇದ್ದಿರಬಹುದಾದ ಸಾಧ್ಯತೆಯಿದೆ. ಇವರಿನ್ನೂ ಸೇವಾವರ್ಗಕ್ಕೆ ಸೇರಿರಲಿಲ್ಲ. ಗುಡ್ನಾಪುರದ ರವಿವರ್ಮನ ಶಾಸನದಲ್ಲಿ ಮನ್ಮಥ ದೇವನಿಗೆ ಒಂದು ಮಂದಿರವನ್ನು ಕಟ್ಟಿಸಿರುವ ಜೊತೆಗೆ ಅಲ್ಲಿಯೇ ಒಂದು ಅರಮನೆ, ಅಂತಃಪುರ ಮತ್ತು ಎರಡು ನೃತ್ಯಶಾಲೆಗಳ ಉಲ್ಲೇಖಗಳನ್ನು ಮೇಲೆ ಹೇಳಿದೆಯಷ್ಟೇ(ಸುಂದರ ಅ.; ಕರ್ನಾಟಕ ಚರಿತ್ರೆ ಸಂಪುಟ-೧, ಪುಟ ೪೦೨). ಕದಂಬರ ಕಾಲದಲ್ಲಿ ದೇವಾಲಯಗಳಲ್ಲಿ ಅರಮನೆಗಳಲ್ಲಿ ನೃತ್ಯ ಮಾಡುವವರಿದ್ದರೆಂಬುದು ಇದರಿಂದ ನಮಗೆ ಮಾಹಿತಿ ದೊರೆಯುತ್ತದೆ. ಈ ರೀತಿ ನೃತ್ಯ ಮಾಡುವವರಿಗೆ ತರಬೇತಿ ನೀಡಲು ಇದ್ದ ಸ್ಥಳವನ್ನು ನೃತ್ಯಶಾಲೆಗಳು ಎಂದು ಉಲ್ಲೇಖಿಸಲಾಗಿದೆ. ಶಾಲೆ ಎಂಬುದೇ ಒಂದು ಕಲಿಕಾಕೇಂದ್ರವೆಂಬ ಸುಂದರ ಮಾನಸಿಕ ಕಲ್ಪನೆಯನ್ನು ಕೊಡುತ್ತದೆ. ಅವು ಸಾಂಪ್ರದಾಯಿಕತೆಯನ್ನು ಎತ್ತಿ ತೋರಿಸುತ್ತವೆ. ಅಲ್ಲಿ ತರಬೇತಿ ಹೊಂದಿದವರು ಈಗಿನ

ಕಲಾವಿದರಂತೆ ಅವರು ನೀಡುವ ಕಲೆಯ ಪ್ರದರ್ಶನ ಗೌರವಪೂರ್ವಕವಾಗಿ ನಡೆಯುವ ಕಾರ್ಯಕ್ರಮವಾಗಿರಬೇಕು. ಹಾಗೆ ಆ ವೃತ್ತಿಯಲ್ಲಿ ತೊಡಗಿರುವವರು ಸಮಾಜದಲ್ಲಿ ಮಾನ್ಯತೆ ಹೊಂದಿದ್ದರೆನಿಸುತ್ತದೆ. ನೃತ್ಯಕಲಾವಿದರ ಮತ್ತು ಸಾರ್ವಜನಿಕರ ಸಂಬಂಧ ವೇದಿಕೆಗೆ ಮಾತ್ರ ಸೀಮಿತವಾಗಿದ್ದು, ವೇದಿಕೆಯಿಂದಾಚೆ ಮೇಲ್ವರ್ಗದವರೊಂದಿಗೆ ಸೇವೆಯ ಹೆಸರಿನಲ್ಲಿ ಸಂಬಂಧ ಹೊಂದುವಷ್ಟು ಇವರ ಸ್ಥಾನಗಳನ್ನಾಗಲಿ, ಅವರನ್ನಾಗಲಿ ಬಳಕೆ ಮಾಡಿಕೊಂಡಿರಲಿಲ್ಲ. ಅಂದರೆ ಆರಂಭದಲ್ಲಿ ನೃತ್ಯ ಮಾಡುವವರು ತಮ್ಮ ವೃತ್ತಿಯಿಂದ ಗುರುತಿಸಲ್ಪಡುತ್ತಿದ್ದರು.

ಕದಂಬರ ಆಳ್ವಿಕೆ ಅವಧಿಯಲ್ಲಿ ಸ್ತ್ರೀಯರ ಸ್ಥಿತಿಗತಿ ಕುರಿತು ಅಧ್ಯಯನ ಮಾಡಲು ದೊರೆತ ಮಾಹಿತಿ ಅತ್ಯಲ್ಪವಾದರೂ ಇರುವ ಆಧಾರಗಳು ನೀಡುವ ಮಾಹಿತಿ ಹೇಳುವುದೇನೆಂದರೆ ಶಾತವಾಹನ ಕಾಲಕ್ಕೆ ತುಲನೆ ಮಾಡಿ ನೋಡಿದಾಗ ಹೆಣ್ಣಿನ ಸ್ಥಾನ ಮತ್ತಷ್ಟು ಕುಸಿಯಿತು. ಅಧಿಕಾರದ ದೃಷ್ಟಿಕೋನದಿಂದ ನೋಡಿದರೆ ಎಲ್ಲೂ ಸ್ವತಂತ್ರ ಆಳ್ವಿಕೆ ಮಾಡಿದ್ದಾಗಲಿ ಉನ್ನತ ಸ್ಥಾನದಲ್ಲಿದ್ದುದ್ದಾಗಲಿ ಕುರಿತ ಮಾಹಿತಿ ಇಲ್ಲ. ಕೃಷಿ ಪ್ರಾಧಾನ್ಯತೆಯನ್ನು ಪಡೆದು ಸ್ತ್ರೀ ಕೃಷಿ ಉತ್ಪನ್ನದಲ್ಲಿ ತೊಡಗಿದ್ದರೂ ಕುಟುಂಬ ಮತ್ತು ಸಮಾಜದಲ್ಲಿ ಎಲ್ಲ ಆರ್ಥಿಕ ಮೂಲಗಳು ಪುರುಷನ ಹಿಡಿತದಲ್ಲಿದ್ದುದರಿಂದ ಅದರ ಒಡೆತನ ಪುರುಷನದ್ದೇ ಆಗಿತ್ತು. ಆರ್ಥಿಕ ಪ್ರಾಬಲ್ಯ ಹೊಂದಿದವರು ಸಾಮಾಜಿಕ ವ್ಯವಸ್ಥೆಯ ಎಲ್ಲ ಕ್ಷೇತ್ರಗಳನ್ನು ನಿಯಂತ್ರಿಸುತ್ತಿರುತ್ತಾರೆ. ಅದರಲ್ಲಿ ಧರ್ಮ ಕೂಡ ಬರುತ್ತದೆ. ಹಣದ ಪ್ರಾಬಲ್ಯವಿರುವ ಕಡೆ ಧರ್ಮದ ಬಲವಂತ ವಾಲುವಿಕೆಯನ್ನು ನಾವು ಇತಿಹಾಸದಲ್ಲಿ ಪ್ರತಿ ರಾಜರ ಆಳ್ವಿಕೆ ಕಾಲದಲ್ಲೂ ಕಾಣಬಹುದು. ತಮ್ಮ ನಂಬಿಕೆಯ ಧರ್ಮ ಆಚರಣೆಯಲ್ಲಿ ಜಾರಿ ತರುವುದು ಸಾಮಾನ್ಯವಾಗಿತ್ತು. ಸ್ತ್ರೀಯರು ಪುರುಷವ್ಯವಸ್ಥೆಯಲ್ಲಿ ಸ್ಥಾನಹೀನರಾಗಿ ಮುಂದುವರಿದರು.

ಬಾದಾಮಿ ಚಾಲುಕ್ಯರು ಕರ್ನಾಟಕದಲ್ಲಿ ಆಡಳಿತ ಮತ್ತು ಇತರೆ ಸಾಮಾಜಿಕ ಕ್ಷೇತ್ರದಲ್ಲಿ ಭದ್ರವಾಗಿ ನೆಲೆ ನಿಂತವರು. ಸಮಾಜದ ಕಲೆ, ಧರ್ಮ, ಸಾಹಿತ್ಯ ಹೀಗೆ ಪ್ರತಿಯೊಂದು ಕ್ಷೇತ್ರದಲ್ಲಿ ತಮ್ಮದೇ ವೈಶಿಷ್ಟ್ಯಪೂರ್ಣವಾದ ಛಾಪು ಒತ್ತಿದರು. ಇವರು ನಿರ್ಮಿಸಿದ ಕಲೆಯಲ್ಲಿ ವೈದಿಕ ದೇವತೆಗಳದೇ ಮೆರುಗು. ಶಾತವಾಹನರ ಕಾಲಕ್ಕೆ ರಾಜಧರ್ಮವಾಗಿ ಮೆರೆದ ಬೌದ್ಧಧರ್ಮ ಕದಂಬರ ಆಳ್ವಿಕೆಯನ್ನು ದಾಟಿ ಬಾದಾಮಿ ಚಾಲುಕ್ಯರ ಕಾಲಕ್ಕೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರಲಿಲ್ಲ. ಹಾಗೆಯೇ ಜೈನಧರ್ಮ ಪ್ರವೇಶವಾಗಿತ್ತೇ ಹೊರತು ತನ್ನ ಇರುವಿಕೆಯನ್ನು ಅನ್ಯಧರ್ಮದೊಂದಿಗೆ ಗುರುತಿಸಿಕೊಂಡಿರಲಿಲ್ಲ. ಹಾಗಾಗಿ ಬಾದಾಮಿ ಚಾಲುಕ್ಯರು ವೈದಿಕರಾಗಿಯೇ ಉಳಿದ್ದಿದ್ದರು. ಶೈವ ಮತ್ತು ವೈಷ್ಣವ ಎರಡು ಶಾಖೆಯ ದೇವರ ಮೂರ್ತಿಶಿಲ್ಪಗಳನ್ನು ನಿರ್ಮಾಣ ಮಾಡಲಾಗಿದೆ. ಎರಡರ ನಡುವೆ ಸಮಾನ ಭಾವ ಇರುವ ಸಾಧ್ಯತೆ ಇದೆ. ಗುಹಾಲಯಗಳು ಇವರ ವಿಶಿಷ್ಟ ನಿರ್ಮಾಣಗಳು.

ಮಹಾಕೂಟ ಶಾಸನದಲ್ಲಿ ಮಂಗಳೇಶನ ತಾಯಿ ದುರ್ಲಭದೇವಿ ಕಿಸುವೊಳಲು, ಕೆಂದೂರು, ನಂದಿಗ್ರಾಮಗಳು ಸೇರಿದಂತೆ ಹತ್ತು ಗ್ರಾಮಗಳನ್ನು ಮಹಾಕೂಟದಲ್ಲಿ ದಾನ ನೀಡಿರುವಳು(EI. XIX, p 9,). ಇಮ್ಮಡಿ ವಿಕ್ರಮಾದಿತ್ಯನ ಇಬ್ಬರು ರಾಣಿಯರ ಅಪೇಕ್ಷೆಯಂತೆ ನಿರ್ಮಾಣವಾದ ಲೋಕಮಹಾದೇವಿಯ ಲೋಕೇಶ್ವರ ದೇವಾಲಯ, ತ್ರೈಲೋಕ್ಯಮಹಾದೇವಿಯ ತ್ರೈಲೋಕೇಶ್ವರ ದೇವಾಲಯಗಳು ಒಂದು ಮಹತ್ವದ ವಿಚಾರವನ್ನು ಎತ್ತಿ ಹಿಡಿಯುತ್ತವೆ. ಶಾತವಾಹನರ ಕಾಲದಲ್ಲಿ ರಾಣಿಯರು ಗುಹಾಲಯ ನಿರ್ಮಾಣಕ್ಕೆ ಸಹಾಯ ಮಾಡಿದ್ದನ್ನು ಕುರಿತು ಅಧ್ಯಯನ ಮಾಡಿದ್ದೇವೆ. ಅದನ್ನು ಹೊರತುಪಡಿಸಿದಂತೆ ರಾಣಿಯರ ನಿರ್ಮಾಣ ಕುರಿತಂತೆ ಅಂತಹ ಮಹತ್ವದ ಯಾವ ಸಂಗತಿಗಳೂ ನಮಗೆ ದೊರಕುವುದಿಲ್ಲ. ಬಾದಾಮಿ ಚಾಲುಕ್ಯ ಕಾಲದಲ್ಲಿ ರಾಣಿಯರು ಶೈವದೇವಾಲಯ ನಿರ್ಮಾಣಕ್ಕೆ ಹೆಚ್ಚು ಆದ್ಯತೆ ಕೊಟ್ಟಿರುವುದು ತಿಳಿದುಬರುತ್ತದೆ. ಅದಾಗಲೇ ಚರ್ಚಿಸಿದಂತೆ ಸ್ತ್ರೀಯರು ಸಮಾಜದಲ್ಲಿ ಅಧಿಕಾರಹೀನರಾಗಿದ್ದರೆಂಬುದನ್ನು ಒಪ್ಪಿಕೊಂಡಿದ್ದೇವೆ. ಅಂದ ಮೇಲೆ ಲೋಕಮಹಾದೇವಿ, ತ್ರೈಲೋಕ್ಯಮಹಾದೇವಿಯರು ಪ್ರತ್ಯೇಕ. ಅದು ಶ್ರೀಮಂತ ದೇವಾಲಯಗಳನ್ನು ನಿರ್ಮಾಣ ಮಾಡಲು ಹೇಗೆ ಸಾಧ್ಯವಾಯಿತು? ಈ ರೀತಿ ಪ್ರಶ್ನೆ ಮೂಡುವುದು ಸಹಜ. ಆದರೆ ರಾಜಮನೆತನದ ಸ್ತ್ರೀಯರ ವಿಚಾರಕ್ಕೆ ಬಂದರೆ ಇದು ಎಂದೂ ಬದಲಾಗುವುದಿಲ್ಲ. ದೇವಾಲಯಗಳಾಗಲಿ ಮಹಲ್‌ಗಳಾಗಲಿ ಯಾರ ಹೆಸರಿನಲ್ಲಿ ಯಾರು ಬೇಕಾದರೂ ನಿರ್ಮಾಣ ಮಾಡಬಹುದು. ರಾಣಿಯರ ಅಪೇಕ್ಷೆಯಂತೆ ದೇವಾಲಯ ನಿರ್ಮಾಣದ ಉಸ್ತುವಾರಿ ನೋಡಿಕೊಳ್ಳುವವರು ಬೇರೆಯೇ ಇರುತ್ತಾರೆ. ಇದು ಆರ್ಥಿಕ ಪ್ರಾಬಲ್ಯವನ್ನು ಅವಲಂಬಿಸಿರುತ್ತದೆ. ಕೆಳವರ್ಗದವರು ಇಂಥ ಕಾರ್ಯದಲ್ಲಿ ಶಕ್ತಿಹೀನರಾಗಿದ್ದರಿಂದ ಅವರ ಪ್ರಶ್ನೆಯೇ ಇಲ್ಲಿ ಉದ್ಭವವಾಗುವುದಿಲ್ಲ. ಅಂಥ ಆರ್ಥಿಕ ಒಡೆತನ ಯಾವ ವರ್ಗದ ಮಹಿಳೆಗೂ ಇರುವುದಿಲ್ಲ. ನಿಜವಾಗಿಯೂ ಸ್ತ್ರೀಯರಿಗೆ ಪುರುಷರಂತೆ ಧಾರ್ಮಿಕ ಚಟುವಟಿಕೆಯಲ್ಲಿ ಸ್ವಾತಂತ್ರ್ಯವಿತ್ತೇ? ಅದು ಎಲ್ಲಿಯೂ ಯಾವ ಕಾಲಕ್ಕೂ ದೊರಕಿಲ್ಲ. ಅವರ ಹೆಸರಿನಲ್ಲಿ ದೇವಾಲಯ ನಿರ್ಮಾಣವಾದವೆಂದ ಮಾತ್ರಕ್ಕೆ ಅವರಿಗೆ ಧಾರ್ಮಿಕ ಸ್ವಾತಂತ್ರ್ಯವಿತ್ತು ಎಂದರೆ ತಪ್ಪಾಗುತ್ತದೆ.

ದೇವಾಲಯಗಳಿಗೆ ಭೂಮಿ, ಧನ, ಧಾನ್ಯದ ರೂಪದಲ್ಲಿ ದಾನ ಮಾಡಲಾಗುತ್ತಿತ್ತು. ರಾಣಿಯರ ಕೋರಿಕೆಯಂತೆ ರಾಜರು ದಾನ ಮಾಡುತ್ತಿದ್ದರು. ಇಮ್ಮಡಿ ಕೀರ್ತಿವರ್ಮ ರಾಣಿಯ ಕೋರಿಕೆಯಂತೆ ದಾನ ನೀಡಿದ ಕುರಿತು ಶಾಸನ ಮಾಹಿತಿ ಇದೆ. ವಿನಯಾದಿತ್ಯನ ಪುಣೆ ದಾನ ಶಾಸನದಲ್ಲಿ ಹೇಳಿರುವ ದಾನವನ್ನು ಅವನು ಮಾಡಿದ್ದು ರಾಣಿಯಾದ ವಿನಯವತಿ ಪ್ರೇರಣೆಯಿಂದ. ಕನ್ಯಾಧರ್ಮಾರ್ಥವಾಗಿ ಆ ಭೂಮಿಯನ್ನು ದಾನ ಮಾಡಿದನು. ವಿಜಯಾದಿತ್ಯನ ಕಾಲದ ಬಾದಾಮಿ ಸ್ತಂಭ ಶಾಸನದಲ್ಲಿ ಅದೇ ರಾಣಿಯನ್ನು ರಾಜಮಾತಾ ಎಂದು ವರ್ಣಿಸಿದೆ. ತನ್ನ ಮಗ ಚಕ್ರವರ್ತಿಯಾಗಿ ಆಳ್ವಿಕೆ ಮಾಡುತ್ತಿದ್ದ ಕಾಲದಲ್ಲಿ ಆತನ ಸಮ್ಮತಿಯಂತೆ ಬಾದಾಮಿಯಲ್ಲಿ ತ್ರಿಮೂರ್ತಿಗಳನ್ನು ಸ್ಥಾಪಿಸಿದಳು. ಅದೇ ತ್ರಿಕೂಟ ದೇವಾಲಯ. ಶಾಸನಗಳ

ಉಲ್ಲೇಖದ ಪ್ರಕಾರ ರಾಣಿಯರು ದೇವಾಲಯ ನಿರ್ಮಾಣ ಮಾಡಿದರು ಎಂದು ಒಂದು ಒಕ್ಕಣೆಯಲ್ಲಿ ದಾಖಲಾಗಿರುತ್ತದೆ. ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯವಿರುತ್ತದೆ ಎನ್ನುವುದಾಗಿದ್ದರೆ ಅವರಿಗೆ ದೇವಾಲಯ ನಿರ್ಮಾಣ, ದಾನ ದತ್ತಿ ನೀಡುವ ಇಚ್ಚೆ ಉಂಟಾದಾಗ ಯಾರ ಒಪ್ಪಿಗೆಯೂ ಇಲ್ಲದೆ ನಿರ್ಮಾಣ ಮಾಡುವುದಕ್ಕೆ ಏಕೆ ಮುಂದಾಗುತ್ತಿರಲಿಲ್ಲ? ಒಪ್ಪಿಗೆಯು ಅಪರೋಕ್ಷವಾಗಿ ಆರ್ಥಿಕ ಸ್ವಾತಂತ್ರ್ಯ ಇಲ್ಲದಿರುವ ಅರ್ಥವನ್ನೇ ಸೂಚಿಸುತ್ತದೆ. ಅದೇ ರಾಜರಾಗಲಿ, ಅಧಿಕಾರ ವರ್ಗದವರಾಗಲಿ ಇಂಥ ನಿರ್ಮಾಣದ ವಿಚಾರದಲ್ಲಿ ಕಾರ್ಯ ನಿರ್ವಹಿಸುವುದಕ್ಕೂ ಸ್ತ್ರೀಯರು ನಿರ್ವಹಿಸುವುದಕ್ಕೂ ಸಾಮಾನ್ಯವಾಗಿ ಎಲ್ಲರ ಗಮನಕ್ಕೆ ಬಂದಂತೆ ತುಂಬಾ ವ್ಯತ್ಯಾಸವನ್ನು ಕಾಣುತ್ತೇವೆ. ಇದು ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ಅನ್ವಯಿಸುತ್ತದೆ.

ಆಡಳಿತದ ವಿಚಾರಕ್ಕೆ ಬಂದರೆ ಕೆಲವೇ ದಾಖಲೆಗಳು ದೊರೆತಿವೆ. ಕುರ್ತಕೋಟಿ ಶಾಸನ ಕುರುತಕುಂಟೆಯನ್ನು ಲೋಕತಿ ನಿಮ್ಮಡಿ ಆಳುತ್ತಿದ್ದಳೆಂದು ಹೇಳುತ್ತದೆ. ಈಕೆ ವಿಜಯಾದಿತ್ಯನ ಸೊಸೆ ಹೈಹಯ ರಾಜಕುಮಾರಿ ಲೋಕಮಹಾದೇವಿ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಚಂದ್ರಾದಿತ್ಯನ ರಾಣಿ ವಿಜಯಮಹಾದೇವಿ ತನ್ನ ಪತಿಯು ತೀರಿಕೊಂಡ ಮೇಲೆ ಬಹುಶಃ ಅಪ್ರಾಪ್ತನಾಗಿದ್ದ ಮಗನ ಪರವಾಗಿ ಆಡಳಿತ ನಡೆಸಿದಳು(ಸುಂದರ ಅ.; ಕರ್ನಾಟಕ ಚರಿತ್ರೆಯ ಸಂಪುಟ–೧, ಪುಟ ೪೫೫). ಆರ್ಥಿಕ ಒಡೆತನ ಕೈತಪ್ಪಿದಾಗಲೇ ಅಧಿಕಾರಗಳು ಹೋದವು ಅಂದ ಮೇಲೆ ಇಲ್ಲಿ ದಾಖಲಾದ ವಿಚಾರಗಳು ಅಧಿಕಾರ ಸ್ತ್ರೀಯರಿಗೆ ಸಂದರ್ಭೋಚಿತವಾಗಿ ಬಂದವುಗಳೇ ಹೊರತು ಸಮಾನತೆ, ಅರ್ಹತೆಗೆ ಬಂದಂತವಲ್ಲ.

ಬಾದಾಮಿ ಚಾಲುಕ್ಯರ ಕಾಲದಲ್ಲಿ ಮತ್ತೊಂದು ಮಹತ್ವದ ವಿಚಾರ ಶಾಸನಗಳ ಮೂಲಕ ದೊರೆತಿದೆ. ಅಲ್ಲಿಯವರೆಗೂ ಸಾಹಿತ್ಯಕವಾಗಿ ಮಾತ್ರ ದಾಖಲಾಗಿದ್ದ ವೇಶ್ಯೆಯರ ವಿಚಾರ ಇವರ ಕಾಲದಲ್ಲಿ ಶಾಸನಗಳ ಮೂಲಕ ವ್ಯಕ್ತವಾಗಿರುವುದು. ಬಾದಾಮಿ ಚಾಲುಕ್ಯ ರಾಜರು ವೇಶ್ಯೆಯರನ್ನು ಹೊಂದಿದ್ದರೆನ್ನಲಾಗುವ ವಿಷಯ ವೇಶ್ಯೆಯರು ಹೊರಡಿಸಿದ ಶಾಸನಗಳಿಂದ ತಿಳಿದುಬರುತ್ತದೆ. ವಿನಯಾದಿತ್ಯನ ಪ್ರಾಣವಲ್ಲಭೆ ರಾಜವೇಶ್ಯೆಯು ಆದ ವಿನಾಪೋಟಿ ಉಲ್ಲೇಖವಿದೆ. ತಮ್ಮ ಬಗ್ಗೆ ತಾವು ಶಾಸನಗಳಲ್ಲಿ ಮುಕ್ತವಾಗಿ ರಾಜವೇಶ್ಯೆಯರೆಂದು ಹೇಳಿಕೊಂಡಿರುವುದು ಸಮಾಜ ಅವರ ಗುರುತಿಸುವಿಕೆಯಲ್ಲಿ ಅಗೌರವ ಭಾವನೆಯನ್ನು ಹೊಂದಿಲ್ಲವೆನಿಸುತ್ತದೆ. ಹಾಗೆಯೇ ವೇಶ್ಯೆಯರು ಕೂಡ ಗೌರವವನ್ನು ಹೊಂದಿದ್ದರು. ಅಂದರೆ ಬಾದಾಮಿ ಚಾಲುಕ್ಯರ ಕಾಲಕ್ಕೆ ವೇಶ್ಯೆಯರನ್ನು ಸಮಾಜದ ಒಂದು ಚೌಕಟ್ಟಿನಲ್ಲಿ ಗುರುತಿಸಲಾಗುತ್ತಿತ್ತು ಮತ್ತು ಸಮಾಜ ಅವರನ್ನು ಗೌರವದೊಂದಿಗೆ ನಡೆಸಿಕೊಳ್ಳುತ್ತಿತ್ತು. ವೇಶ್ಯೆ ಎಂದ ಮಾತ್ರಕ್ಕೆ ಅವರನ್ನು ನೋಡುವ ದೃಷ್ಟಿಕೋನದಲ್ಲಿ ಕೀಳುಪ್ರವೃತ್ತಿ ಕಾಣುವಷ್ಟು ಅವರ ಸ್ಥಾನಗಳು ಕುಸಿದಿರಲಿಲ್ಲವೆನಿಸುತ್ತದೆ. ಇವರು ವಿದ್ಯೆ, ಕಲೆಗಳಲ್ಲಿ ಅರ್ಹತೆ ಹೊಂದಿರುವ ಸುಂದರ ಯುವತಿಯರಾಗಿದ್ದು, ಆರ್ಥಿಕವಾಗಿ ಉನ್ನತ ಮಟ್ಟದಲ್ಲಿದ್ದರು. ಅವರು

ದೇವಾಲಯಗಳಿಗೆ ಮೇಲ್ವರ್ಗದವರಂತೆ ದಾನ ನೀಡಿರುವರು. ಪಟ್ಟದಕಲ್ಲಿನ ಬಿಜೇಶ್ವರ ದೇವಾಲಯದ ಮೂರು ಕಂಬಗಳನ್ನು ಸೂಳೆ ಚಲಬ್ಬೆ ಮಾಡಿಸಿದಂತೆ ಉಲ್ಲೇಖವಿದೆ. ಇದು ಅವರ ಆರ್ಥಿಕ ಪ್ರಾಬಲ್ಯವನ್ನು ಹೇಳುತ್ತದೆ. ಅಲ್ಲದೆ ಅವರು ತಮ್ಮ ಬಗ್ಗೆ ಸೂಳೆ ಎಂದು ಹೇಳಿಕೊಳ್ಳುವಲ್ಲಿ ಎಲ್ಲೂ ಮುಜುಗರ ಪಟ್ಟುಕೊಂಡಿಲ್ಲದಿರುವುದನ್ನು ನೋಡಿದರೆ ಆ ಕಾಲದಲ್ಲಿ ಅವರ ಸ್ಥಾನಗಳು ಉತ್ತಮವಾಗಿತ್ತು. ಸಮಾಜವು ಅವರನ್ನು ಅವರ ವೃತ್ತಿಯನ್ನು ಗೌರವದಿಂದ ಸ್ವೀಕರಿಸಿತ್ತು. ಹಾಗಾಗಿ ಅವರ ಜೀವನ ಉಳಿದ ವರ್ಗದವರ ಜೀವನ ದೃಷ್ಟಿಕೋನಕ್ಕಿಂತ ಭಿನ್ನರಾಗಿರಲಿಲ್ಲ. ಆದರೆ ಇವರ ಮುಂದಿನ ಪೀಳಿಗೆಯವರು ಸಮಾಜದ ಎಲ್ಲ ವರ್ಗದವರ ಬೇಕು ಬೇಡಗಳಿಗೆ ಒಳಗಾಗಿ ಅವರ ಸ್ಥಿತಿ ಹಂತ ಹಂತವಾಗಿ ಹೀನಾಯವಾದುದನ್ನು ಮುಂದೆ ನೋಡಲಾಗುತ್ತದೆ.

ಬಾದಾಮಿ ಚಾಲುಕ್ಯರ ಕಾಲದಲ್ಲೂ ಸಂಗೀತ ನೃತ್ಯದಂತಹ ಕಾರ್ಯಕ್ರಮಗಳು ನಡೆಯುತ್ತಿದ್ದವು. ಬಾದಾಮಿ ಮಂಗಳೇಶನು ನಿರ್ಮಿಸಿದ ಮೂರನೇ ವೈಷ್ಣವ ಗುಹಾಲಯದಲ್ಲಿ ಮೃದಂಗ, ವೀಣೆ, ಕೊಳಲು, ಮೊದಲಾದವುಗಳನ್ನು ನುಡಿಸುವುದರೊಡನೆ ಸ್ತ್ರೀ–ಪುರುಷರು ನೃತ್ಯ ಮಾಡುತ್ತಿರುವ ವರ್ಣಚಿತ್ರವಿದೆ. ನಾಟ್ಯಕಲೆಯನ್ನು ಕರತಲಾಮಲಕ ಮಾಡಿಕೊಂಡ ನಟಸೇವ್ಯೆ ಅಚಲನೆಂಬುವನು ಅದ್ವಿತೀಯನಾಗಿದ್ದನು(ಕ.ವಿ.ಶಾ. ಸಂಪುಟ ೯, ಬಾದಾಮಿ, ೭೬). ಒಂಬತ್ತನೇ ಶತಮಾನದ ನಂತರ ನೃತ್ಯ ಮಾಡುವವರನ್ನು ಪಾತ್ರ ಅಥವಾ ಪಾತರದವರೆಂದು ಕರೆಯಲಾಗುತ್ತದೆ. ಈ ಪಾತರದವರೆಂದರೆ ಬರೀ ಸ್ತ್ರೀಯರು ಮಾತ್ರ ಇರುತ್ತಿದ್ದರು. ಆದರೆ ನಮಗೆ ಇಲ್ಲಿ ದೊರೆತಿರುವ ಆಧಾರವನ್ನು ನೋಡಿದಾಗ ನೃತ್ಯವನ್ನು ಪುರುಷರು ಮಾಡುತ್ತಿದ್ದರು. ಸ್ತ್ರೀಯರನ್ನು ಮಾತ್ರ ಕುರಿತು ಸಂಬೋಧಿಸುವಂತೆ ಪಾತರದವರು ಎಂದು ಉಲ್ಲೇಖಿಸಿಲ್ಲ. ಅಂದರೆ ಇನ್ನೂ ಅಲ್ಲಿ ಪಾತರದ ಸಂಪ್ರದಾಯ ಹೆಜ್ಜೆ ಇಟ್ಟಿರಲಿಲ್ಲ. ಅವರಿಗೆ ನಟರು, ನೃತ್ಯಗಾರರು ಎಂದೇ ಕರೆಯಲಾಗುತ್ತಿತ್ತು. ಅದೊಂದು ಕಲೆಯಾಗಿತ್ತು. ಅದನ್ನು ದೇವರ ಪ್ರೀತ್ಯಾರ್ಥವಾಗಿಯೇ ಮಾಡಲಾಗುತ್ತಿತ್ತು. ನೃತ್ಯದ ಹೆಸರಲ್ಲಿ ನೃತ್ಯಗಾರರಿಂದ ಮತ್ತು ನೃತ್ಯದಿಂದ ಮನರಂಜನೆ ಪಡೆಯುವ ಯಾವ ಸ್ವಾರ್ಥವೂ ಇರಲಿಲ್ಲವೆನಿಸುತ್ತದೆ. ಪುರುಷ ಮತ್ತು ಸ್ತ್ರೀ ಇಬ್ಬರೂ ನೃತ್ಯ ಮಾಡುತ್ತಿದ್ದರಿಂದ ಅವರು ಒಂದು ವರ್ಗ ಅಥವಾ ಒಂದು ಸಮುದಾಯಕ್ಕೆ ಸೇರಿದ ನೃತ್ಯ ಮಾಡುವ ಸಮುದಾಯವಿರುವ ಸಾಧ್ಯತೆ ಇದೆ. ಇಲ್ಲವೆಂದರೆ ಈಗಿನಂತೆ ಸಮಾಜದ ಯಾವುದೇ ವರ್ಗಕ್ಕೆ ಸೇರಿದ ಪಕ್ಕಾ ಕಲಾರಾಧಕರಾಗಿರುವ ಸಾಧ್ಯತೆ ಇದೆ. ಇಷ್ಟು ಸತ್ಯವನ್ನು ಹೊರತುಪಡಿಸಿದಂತೆ ಅವರು ಮುಂದೆ ಬಂದ ಪಾತರದವರು, ಪಾತರದ ಸೂಳೆಯರು ಎಂದು ಅವರ ಸಂಗೀತ, ನೃತ್ಯ ಕಲೆ ಜೊತೆ, ಮೇಲ್ವರ್ಗದವರ ಸೇವೆ ಹೆಸರಿನ ಸ್ವಾರ್ತಕ್ಕೆ ಒಳಗಾಗಿರಲಿಲ್ಲವೆಂದು ಹೇಳಬಹುದು. ನಿಜವಾದ ಕಲಾಪೋಷಕರಿಗೆ ಲಿಂಗಭೇಧವಿರುವುದಿಲ್ಲ. ಯಕ್ಷಗಾನ, ಬಯಲಾಟಗಳಂತಹ ಕಲೆಯನ್ನೇ ನಾವು ಉದಾಹರಣೆಗೆ ತೆಗೆದುಕೊಂಡಾಗ ಅವೆಲ್ಲ ಸಾಮಾನ್ಯರ ಮನರಂಜನೆಯ ಕೇಂದ್ರವಾಗಿದ್ದವು. ಅಂಥ ಕಲೆಯಲ್ಲಿ

ಅಂದಿನಿಂದ ಇಂದಿನವರೆಗೂ ಪುರುಷರೇ ಕಲಾವಿದರು ಮತ್ತು ಅದೊಂದು ಗುಂಪು. ಅಲ್ಲಿ ಹಲವಾರು ಪಾತ್ರಧಾರಿಗಳಿರುತ್ತಾರೆ. ಸ್ತ್ರೀ ಸ್ತ್ರೀಪಾತ್ರವನ್ನು ಮಾಡಬೇಕೆಂಬದೇನಿಲ್ಲ. ಪುರುಷ ಸ್ತ್ರೀಪಾತ್ರ ಮಾಡಿದಾಗಲೂ ಕಲಾರಸಿಕರಿಂದ ಆ ಪಾತ್ರ ಸ್ವೀಕರಿಸಲ್ಪಡುತ್ತದೆ. ಇಲ್ಲಿ ಬರುವ ವೀಕ್ಷಕರು ಸಾಮಾನ್ಯರು ಮತ್ತು ನಿಜವಾದ ಕಲಾಪೋಷಕರು. ಆ ಕಾರಣದಿಂದ ಅವು ಇಂದಿಗೂ ತಮ್ಮತನವನ್ನು ಹಾಗೆಯೇ ಉಳಿಸಿಕೊಂಡು ಬಂದಿವೆ. ಆದರೆ ಸಾಂಪ್ರದಾಯಿಕ ನೃತ್ಯದಲ್ಲಿ ಹಾಗಲ್ಲ. ಅಲ್ಲಿ ಮೇಲ್ವರ್ಗದವರು ಕಲಾಪೋಷಕರು. ಇಂಥ ವರ್ಗದವರ ಕೈಯಲ್ಲಿ ಸಿಕ್ಕ ಸಾಂಪ್ರದಾಯಿಕ ನೃತ್ಯಗಾರರು ಗಂಡು ಹೆಣ್ಣು ಎಂದು ಭೇದಕ್ಕೆ ಒಳಗಾಗಿ ಅದರಿಂದ ಪುರುಷರನ್ನು ದೂರ ಇಟ್ಟು, ಸ್ತ್ರೀಯರನ್ನು ಮುಂದೆ ತಂದು ಅವರ ನೃತ್ಯವನ್ನು ಮಾತ್ರ ಪೋಷಣೆ ಮಾಡಿದ್ದರ ಹಿಂದಿನ ಉದ್ದೇಶ ಸ್ಪಷ್ಟವಾಗಿ ಗೋಚರವಾಗುತ್ತಿದೆ.

ಮುಂದುವರಿದಂತೆ ನಾವು ಇತಿಹಾಸದ ಕಾಲಘಟ್ಟದಲ್ಲಿ ಗಂಗ ರಾಜಮನೆತದ ಕರ್ನಾಟಕದಲ್ಲಿ ಆಳ್ವಿಕೆಯನ್ನು ಮಾಡಿರುವುದನ್ನು ನೋಡುತ್ತೇವೆ. ಆಡಳಿತ ಮತ್ತು ಅಧಿಕಾರ ಸೇರಿದಂತೆ ಸಾಮಾಜಿಕ ಕ್ಷೇತ್ರದಲ್ಲಿ ಸ್ತ್ರೀಯರು ಹಿಂದೆ ಶಾತವಾಹನ ಕಾಲದ ರಾಜಕೀಯ ವ್ಯವಸ್ಥೆ ಜಾರಿ ಬಂದ ಕಾಲದಿಂದ ಪ್ರತಿಯೊಂದು ರಾಜಮನೆತನಗಳ ಆಡಳಿತದ ಅವಧಿಯಲ್ಲಿ ಸ್ತ್ರೀಯರ ಜೀವನ ಅದೇ ಗತಿಸ್ಥಿತಿಯಲ್ಲಿ ಮುಂದುವರಿಯಿತು. ಗಂಗರ ಅಧಿಕಾರ ಅವಧಿಯಲ್ಲಿ ಜೈನಧರ್ಮಕ್ಕೆ ಆದ್ಯತೆ ದೊರೆಯಿತು. ಜೈನಧರ್ಮದಲ್ಲಿ ಆಡಂಬರದ ಆಚರಣೆಗಳಿಲ್ಲದೆ ಸರಳ ಆಚರಣೆ, ಕಠಿಣ ನಿಯಮ ಪಾಲನೆಯಿಂದ ಕರ್ನಾಟಕದಲ್ಲಿ ಕೆಲಕಾಲ ರಾಜಧರ್ಮವಾಗಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತ್ತು.

ಗಂಗ ಮನೆತನದ ಅಧ್ಯಯನದಲ್ಲಿ ಮಹಿಳೆಯರ ಬಗ್ಗೆ ಅಧ್ಯಯನ ಮಾಡುವಾಗ ಜೈನಧರ್ಮದಲ್ಲಿ ಮಹಿಳೆಯರ ಕುರಿತು ಅಧ್ಯಯನ ಮಾಡುವುದು ಪ್ರಮುಖ ಅಂಶವಾಗಿದೆ. ಕರ್ನಾಟಕದಲ್ಲಿ ಜೈನಧರ್ಮ ಪ್ರವೇಶ ಮಾಡಿ ಹಲವು ಕಾಲಗಳೇ ಸಂದಿದ್ದವು. ಆದರೆ ಗಂಗರ ಆಳ್ವಿಕೆ ಕಾಲದಲ್ಲಿ ಪ್ರಧಾನ ಧರ್ಮವಾಯಿತು. ವೈದಿಕ ಧರ್ಮ ಸ್ತ್ರೀಯರಿಗೆ ತೋರಿಸಿದ ನಿರ್ಲಕ್ಷ್ಯ ಅತಿಯಾದ ಪಾವಿತ್ರ್ಯ, ಅಸ್ಪೃಶ್ಯ ಭಾವನೆಯಿಂದ ಬೇಸತ್ತಿದ್ದ ಮಹಿಳೆಯರಿಗೆ ಜೈನ ಧರ್ಮದಲ್ಲಿ ಪರಿಹಾರ ದೊರೆಯಿತೇ? ಅಥವಾ ಶಾಶ್ವತ ಮುಕ್ತಿ ದೊರೆಯಿತೊ? ಉತ್ತರ ನಾವೇ ಕಂಡುಕೊಳ್ಳಬೇಕು. ಜೈನಧರ್ಮ ಮಹಿಳೆಯರ ನೊಂದ ಜೀವನಕ್ಕೆ ಸಮಾಧಾನ ಎಂದು ಹೇಳಬಹುದು. ಜೀವನ ಬೇಡವೆನ್ನುವ ಅಥವಾ ಸಾಕು ಎನಿಸಿದವರಿಗೆ ಇದರಲ್ಲಿ ಮುಕ್ತ ಅವಕಾಶವಿತ್ತು. ಏಕೆಂದರೆ ಜೈನಧರ್ಮದ ಆಚರಣೆಗಳೇ ಹಾಗಿವೆ. ಜೀವನದ ಅಶಾಶ್ವತೆ, ಜಿಗುಪ್ಸೆ, ಅಹಿಂಸೆ, ಉಪವಾಸ, ದೈಹಿಕ ಹಿಂಸೆ, ಕಠಿಣ ವ್ರತಾಚರಣೆ, ಸನ್ಯಾಸ ಇಂಥ ಆಚರಣೆಗಳಿಂದ ಸಾವನ್ನು ಬರ ಮಾಡಿಕೊಳ್ಳುವುದು. ಒಮ್ಮೆಲೆ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕಿಂತ ನಿಧಾನವಾಗಿ ಸಾವನ್ನು ಬರ ಮಾಡಿಕೊಳ್ಳುವುದು. ಹಾಗೆ ಮಾಡುವುದರಿಂದ ಮುಕ್ತಿ ದೊರೆಯುವುದೆಂಬ ನಂಬಿಕೆ. ಈ ನಂಬಿಕೆಯೇ ಸ್ತ್ರೀಯರನ್ನು ಜೈನಧರ್ಮದ ಕಡೆ ವಾಲುವಂತೆ

ಮಾಡಿತು. ಈ ರೀತಿ ಮರಣ ಹೊಂದುವವರಿಗೆ ಸಮಾಧಿ ಮರಣ ಎಂದು ಕರೆಯಲಾಗುತ್ತದೆ. ಸಮಾಧಿ ಮರಣ ಹೊಂದುವುದಕ್ಕೂ ಹಲವಾರು ಕಾರಣಗಳಿರುತ್ತಿದ್ದವು. ವಾಸಿಯಾಗದ ರೋಗ, ಕ್ಷಾಮಕಾಲದಲ್ಲಿ ಮುಪ್ಪಿನಲ್ಲಿ ಸಾವು ಖಚಿತವೆಂದು ಗೊತ್ತಾದಾಗ, ವೈಧವ್ಯ ಪ್ರಾಪ್ತಿಯಿಂದ, ಇಂಥ ಹಲವಾರು ಸಂದಿಗ್ಧಗಳು ಜೀವನದಲ್ಲಿ ಒದಗಿದಾಗ ಜೀವನ ಸಾಕೆನಿಸಿ, ಸಾವು ಬೇಕೆನಿಸಿದಾಗ ಸನ್ಯಾಸವ್ರತ ಸ್ವೀಕರಿಸಿ ಉಪವಾಸವ್ರತದಿಂದ ಮರಣ ಹೊಂದುವುದಾಗಿದೆ. ಸ್ತ್ರೀಯರಿಗೆ ಅನುಪಮ ಪುಣ್ಯಭುಜನೆ ಜಿನೇಂದ್ರ ಪದಾಬ್ಜ ಮಹಾಸತಿ ತನ್ನ ಅವಸಾನ ಕಾಲದೋಳ್(E.C. II, ಶ್ರವಣಬೆಳಗೊಳ, ೨೦೮). ಆ ವ್ರತಧಾರಿ ಸದ್ಗತಿ ಸದ್ಗುಣಗಳನ್ನು ಮನದಲ್ಲಿ ಧ್ಯಾನಿಸುತ್ತಾ ಇರುವಾಗ ವ್ರತಧಾರಿ ಸುತ್ತಲೂ ಅರ್ಹಂತನ, ಸ್ತೋತ್ರ, ಪ್ರಣವು ನಡೆಯುತ್ತಿದ್ದವು. ಅವನ ದೇಹದಿಂದ ಪ್ರಾಣವು ಹೊರಟು ಹೋಗುವಾಗ ಅವನ ಮನಸ್ಸಿನಲ್ಲಿ ಉತ್ತಮ ಭಾವನೆಗಳಿರಬೇಕೆಂದು ಅದರ ಫಲವಾಗಿ ಮುಂದಿನ ಜನ್ಮದಲ್ಲಿ ಉತ್ತಮ ಸದ್ಗತಿ ದೊರೆಯುತ್ತದೆ ಎಂದು ನಂಬಿದ್ದರು(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೩೩೩, ೩೩೪). ಇದಕ್ಕೆ ಸಮಾಧಿಮರಣ ಹೊಂದುವುದೆನ್ನುತ್ತಿದ್ದರು. ಈ ರೀತಿ ಸಮಾಧಿ ಮರಣ ಹೊಂದಿದವರ ಸ್ಮರಣಾರ್ಥವಾಗಿ ಸ್ಥಾಪಿಸಿದಂತಹ ಸ್ಮಾರಕಗಳನ್ನು ನಿಸಿಧಿ ಸ್ಮಾರಕಗಳೆಂದು ಕರೆಯಲಾಗುತ್ತದೆ.

ಗಂಗರ ಆಳ್ವಿಕೆ ಕಾಲದಲ್ಲಿ ರಾಣಿಯರೇ ಇಂಥ ಸಮಾಧಿಮರಣದ ನಿರ್ಧಾರಕ್ಕೆ ಬಂದರು. ಬೂತುಗನ ಪತ್ನಿ ಪದ್ಮಬ್ಬೆ ಮತ್ತು ರೇವಕ ನಿಮ್ಮಡಿ ಜೈನಧರ್ಮದ ಅನುಯಾಯಿಗಳಾಗಿದ್ದರು. ರೇವಕ ನಿಮ್ಮಡಿ ಸನ್ಯಾಸನ ವಿಧಾನದಿಂದ ರತ್ನತ್ರಯಗಳನ್ನು ಸಾಧಿಸಿದಂತಿದೆ. ಬೂತುಗನ ಪತ್ನಿ ಶ್ರಾವಕಿ ಪದ್ಮಬ್ಬೆ ಎಲ್ಲವನ್ನು ತ್ಯಜಿಸಿ ಕುಪುಣಕ್ಕೆ ಬಂದು ದೀಕ್ಷೆ ಪಡೆದು ಸುಗತಿಗೆ ಸಂದಳೆಂದಿದೆ(ಕ.ವಿ.ಶಾ. ಸಂಪುಟ ೨, ಕೊಪ್ಪಳ ಶಾ.ಸಂ.೧೮೮). ಪದ್ಮಬ್ಬೆ ಸಮಾಧಿಮರಣ ಹೊಂದಿದ್ದು ಅನಾರೋಗ್ಯದ ಕಾರಣಕ್ಕೆ ದೀಕ್ಷೆಯನ್ನು ಕೈಕೊಂಡು ಸಮಾಧಿಮರಣವನ್ನು ಹೊಂದಿದಳು. ಬೂತುಗನ ಮಗಳು, ಹರಿಗನ ಪತ್ನಿಯಾಗಿದ್ದ ಜೆಜ್ಜಾಂಬಿಕೆ. ಅಥವಾ ಜೆಜ್ಜಬ್ಬರಸಿಯು ಮುಡಿಪಿದ ವಿಷಯ, ಎರಡನೇ ಮಾರಸಿಂಹನ ತಂಗಿಯಾದ ಚಂದಿಬ್ಬರಸಿ ಪಂಡಿತ ಮರಣ ಹೊಂದಿದ ಮಾಹಿತಿ ಇದೆ. (ಕ.ವಿ.ಶಾ. ಸಂಪುಟ-೨, ಕೊಪ್ಪಳ, ಶಾ. ಸಂ: ೯೯, ೧೦೧). ಗಂಗ ಮಂಡಲದ ರಾಜಮಲ್ಲನ ಪತ್ನಿ ಕಂಚಿಯಬ್ಬರಸಿ ತನ್ನ ಪತಿ ಸತ್ತ ಮೇಲೆ ಅಜಿತಸೇನಾಚಾರ್ಯರ ಬಳಿ ದೀಕ್ಷೆ ಪಡೆದು ಕುಪುಣ ತೀರ್ಥದಲ್ಲಿ ಸಮಾಧಿ ವಿಧಿಯಿಂದ ಮುಡಿಪಿದಳು(ಕ.ವಿ.ಶಾ. ಸಂಪುಟ-೨, ಕೊಪ್ಪಳ, ಶಾ.ಸಂ: ೯೪).

ಗಂಗರ ಆಳ್ವಿಕೆ ಅವಧಿಯಲ್ಲಿ ಕರ್ನಾಟಕದಲ್ಲಿ ಸತಿಪದ್ಧತಿ ತುಂಬಾ ವಿರಳವೆಂಬಂತೆ ಜಾರಿಯಲ್ಲಿತ್ತು. ಅಲ್ಲದೆ ಜೈನಧರ್ಮದಲ್ಲಿ ಸತಿ ಹೋಗುವುದು ನಿಷಿದ್ಧ ಹಾಗಾಗಿ ಯುದ್ಧದಂತಹ ಸಂದರ್ಭದಲ್ಲಿ ಸಾಮೂಹಿಕವಾಗಿ ಸ್ತ್ರೀಯರು ಜೀವಂತ ಅಗ್ನಿಗಾಹುತಿ ಆಗುವುದು

ಇರಲಿಲ್ಲವೆನ್ನುವುದಕ್ಕಿಂತ, ಇದು ಸತಿಪದ್ಧತಿ ಆರಂಭದ ಹಂತ ಎನ್ನಲೂಬಹುದು. ಅದಕ್ಕೆ ಜೈನಧರ್ಮದ ನೀತಿ ಕೂಡ ಕಾರಣವಾಗಿತ್ತು. ಮುಂದೆ ಬಂದ ರಾಜಮನೆತನಗಳ ಕಾಲಕ್ಕೆ ಅದರ ಸಂಖ್ಯೆ ಏರಿಕೆ ಕ್ರಮದಲ್ಲಿಯೇ ಸಾಗಿತು. ಸ್ತ್ರೀಯರು ವೈಧವ್ಯಪ್ರಾಪ್ತಿಯ ಫಲವಾಗಿಯೂ ಜೈನ ಧರ್ಮವನ್ನು ಸ್ವೀಕರಿಸಿದ್ದುಂಟು. ವೈದಿಕರಲ್ಲಿ ವೈಧವ್ಯ ಜೀವನ ತುಂಬಾ ನಿಕೃಷ್ಟವಾಗಿತ್ತು. ಆ ನಿಕೃಷ್ಟತೆಯಿಂದ ಬಿಡುಗಡೆ ಪಡೆಯುವುದಕ್ಕೋಸ್ಕರ ಜೈನಧರ್ಮ ಸ್ವೀಕರಿಸುವ ಸಾಧ್ಯತೆ ಇತ್ತು. ವೈದಿಕರಲ್ಲೂ ವೈಧವ್ಯಕ್ಕೆ ಕಠಿಣಜೀವನ ಪ್ರಾಪ್ತವಾಗುತ್ತಿತ್ತು. ಹಾಗೆಯೇ ಜೈನ ಧರ್ಮದಲ್ಲಿ ಜೀವನ ಮತ್ತು ಸಾವು ಎರಡಕ್ಕೂ ಕಠಿಣ ವ್ರತಾಚರಣೆಗಳಿದ್ದವು. ಆದರೆ ಇಲ್ಲಿ ಕಠಿಣವ್ರತದ ಫಲವಾಗಿ ಸಾವಿನ ನಂತರ ಪುಣ್ಯಪ್ರಾಪ್ತಿ ಎಂಬ ನಂಬಿಕೆ ಇತ್ತು. ಒಂದು ತಿಂಗಳು ಎರಡು ತಿಂಗಳು ಹೀಗೆ ಸಾವು ಸನ್ನಿಹಿತವಾಗಿ ಮರಣದವರೆಗೂ ಉಪವಾಸ ಮಾಡಬೇಕಿತ್ತು. ಆದರೆ ಜೈನರಲ್ಲಿ ವೈಧವ್ಯದ ಬಗ್ಗೆ ನಿಕೃಷ್ಟ ಭಾವನೆಗಳಿಲ್ಲದಿರುವುದು ಮತ್ತು ಅವರದೇ ಧಾರ್ಮಿಕ ವಿಧಿವಿಧಾನಗಳ ಮೂಲಕ ಜೀವನದ ಅಂತ್ಯದ ದಿನಗಳನ್ನು ಕಳೆಯಲು ಅವಕಾಶವಿತ್ತು. ಅವರ ಸಾವಿನ ದಿನಗಳನ್ನು ಧರ್ಮ ಸ್ವೀಕರಿಸಿತ್ತು. ಸಮಾಧಿಮರಣ(ಸ್ತೋತ್ರಗಳನ್ನು ಕೇಳುತ್ತಾ), ಸಾವಿನ ನಂತರ ನಿಸಿಧಿ ಸ್ಮಾರಕಗಳ ನಿರ್ಮಾಣ ಅವರ ಅಂತ್ಯದ ಜೀವನವನ್ನು ಸಾರ್ಥಕ ಗೊಳಿಸುವ, ಆ ಮೂಲಕ ಅಮರತ್ವವನ್ನು ದಯಪಾಲಿಸುವ ಅವಕಾಶ ಜೈನರಲ್ಲಿತ್ತು. ವೈದಿಕ ಧರ್ಮದಲ್ಲಿದ್ದುಕೊಂಡು ಸತ್ತರೆ ಇಂಥ ಮಾನ್ಯತೆ ಸಿಗುತ್ತಿರಲಿಲ್ಲ. ವಿಧವೆಯ ಸಾವಿನಲ್ಲೂ ಅಮಂಗಳವೆಂದು ಬಗೆಯುವ ಕುಬ್ಜ ಭಾವನೆ ಇತ್ತು. ಹಾಗಾಗಿ ಸ್ತ್ರೀಯರು ಜೈನಧರ್ಮವನ್ನು ಮುಕ್ತವಾಗಿ ಪಾಲಿಸುವಂತೆ ಮಾಡಿತು.

ಈ ವಿಚಾರವನ್ನಿಟ್ಟುಕೊಂಡು ನಾವು ಚಿಂತನೆ ಮಾಡುವುದಾದರೆ ಸ್ತ್ರೀಯರ ಮನಸ್ಸಿಗೆ ಈ ಧರ್ಮ ಎಷ್ಟು ಸ್ವೀಕಾರಾರ್ಹವಾಗಿತ್ತು? ಇಲ್ಲಿ ಸ್ತ್ರೀಯರಿಗೆ ತಮ್ಮ ಅಂತ್ಯದ ಜೀವನವನ್ನು ಸಹಜವಾಗಿ ಕಳೆಯಲು ಏಕೆ ಸಾಧ್ಯವಾಗಲಿಲ್ಲ? ಜೈನಧರ್ಮ ಸ್ವೀಕಾರ ಮಾಡುತ್ತಿದ್ದುದು ಸಾಯುವುದಕ್ಕಾಗಿಯೇ? ಏಕೆಂದರೆ ನಮಗೆ ದೊರೆತ ಮಾಹಿತಿಗಳಲ್ಲಿ ಹಲವು ಹೇಗಿವೆಯೆಂದರೆ 'ಜೈನಧರ್ಮದ ದೀಕ್ಷೆಯನ್ನು ತೆಗೆದುಕೊಂಡು ವ್ರತಾಚರಣೆಯಿಂದ ಮರಣ ಹೊಂದಿದಳು' ಎಂದು ಉಲ್ಲೇಖಿಸುತ್ತವೆ. ಪುಣ್ಯಪ್ರಾಪ್ತಿಗಾಗಿ, ಆಧ್ಯಾತ್ಮಿಕ ಪಾವಿತ್ರ್ಯ ಮತ್ತು ಮೋಕ್ಷಕ್ಕಾಗಿ ಹೀಗೆ ಏನೇನೋ ಇನ್ನೂ ಮುಂತಾಗಿ ಇದ್ದ ಕಲ್ಪನೆಗಳನ್ನು ಹೊರತುಪಡಿಸಿದಂತೆ ಇದ್ದ ವಾಸ್ತವಿಕ ಕಾರಣಗಳೇನು ಎಂಬುದೂ ಮುಖ್ಯವಾಗುತ್ತದೆ. ವೈಧವ್ಯ, ರೋಗರುಜಿನಗಳು, ಜೀವನ ಕ್ಷಣಿಕ ಎಂಬ ಸತ್ಯದ ಅರಿವು ಹೀಗೆ ಇವನ್ನು ಹೊರತುಪಡಿಸಿದಂತೆ ಸಾಯಲು ಚಿಂತನೆ ಮಾಡುವಂಥ ಹಲವಾರು ಘಟನೆಗಳು ಜೀವನದಲ್ಲಿ ಸಂಭವಿಸುವುದು ಸಹಜವಾಗಿರುತ್ತವೆ. ಅದರಲ್ಲೂ ಸ್ತ್ರೀಯರು ಹಲವಾರು ಕಟ್ಟುಪಾಡು, ಕೌಟುಂಬಿಕ ಸಮಸ್ಯೆಗಳು, ಬಹುಪತ್ನಿತ್ವ, ಸಣ್ಣ ಕಾಯಲೆ ಬಂದರೂ ಪತಿಯಿಂದ ತಿರಸ್ಕೃತಳಾಗುವುದು, ತವರಿನಲ್ಲಿ ದೊರೆಯದ ಆಶ್ರಯ ಇಂಥ ಹಲವಾರು ಕಾರಣಗಳು ಆತ್ಮಹತ್ಯೆಯ ಕಡೆ ಯೋಚಿಸುವಂತೆ ಮಾಡುತ್ತವೆ.

ಆತ್ಮಹತ್ಯೆ ಮಾಡಿಕೊಂಡಾಗ ಸಾವಿಗೆ ದೊರೆಯದ ಮಾನ್ಯತೆ ಜೈನಧರ್ಮದ ವ್ರತಾಚರಣೆ ಮೂಲಕ ಮರಣ ಹೊಂದಿದಾಗ ದೊರೆಯುತ್ತದೆ ಎಂದರೆ ಜೀವನ ಕೊನೆಗೊಳಿಸಲೂ ಧರ್ಮಸ್ವೀಕಾರ ಸಹಜವಾಗುತ್ತದೆ.

ಒಂದೊಂದು ರಾಜಮನೆತನಗಳ ಆಳ್ವಿಕೆ ಕಾಲದಲ್ಲಿಯೂ ಒಂದೊಂದು ವೈಶಿಷ್ಟ್ಯಗಳು ಸಮಾಜದಲ್ಲಿ ಘಟಿಸಿದವು. ಸ್ತ್ರೀಯರ ಜೀವನದ ಮೇಲೆ ಪರಿಣಾಮವನ್ನುಂಟು ಮಾಡುವ ಹಲವಾರು ಪದ್ಧತಿಗಳು ಸಮಾಜದಲ್ಲಿ ಪ್ರವೇಶವನ್ನು ಪಡೆದವು. ಅವುಗಳನ್ನು ಹೊರತು ಪಡಿಸಿದಂತೆ ಉಳಿದ ಎಲ್ಲಾ ಕಾಲದಲ್ಲೂ ಸ್ತ್ರೀಯರ ಜೀವನದಲ್ಲಿ ಯಾವ ಬದಲಾವಣೆಗಳೂ ಸಂಭವಿಸಲಿಲ್ಲ. ಇಂಥ ಒಂದು ಕ್ಷೇತ್ರದಲ್ಲಿ ಉತ್ತಮ ಸ್ಥಾನ ದೊರೆಯಿತು ಎಂದು ಹೇಳಿಕೊಳ್ಳುವಂಥ ಸುಧಾರಣೆಗಳೇ ಇಲ್ಲಿಯವರೆಗಿನ ಅಧ್ಯಯನ ಮಾಡಿದ ಕಾಲಾವಧಿಯಲ್ಲಿ ಬರಲಿಲ್ಲ. ಯಾರ ಆಳ್ವಿಕೆ ಕಾಲದಲ್ಲಿ ಯಾವ ಪದ್ಧತಿಗಳು ಪ್ರವೇಶ ಪಡೆದವು ಮತ್ತು ಅವು ಪ್ರವೇಶ ಪಡೆದ ಕಾಲಾವಧಿಯಲ್ಲಿ ಹೇಗಿದ್ದವು? ಸ್ತ್ರೀಯರ ಜೀವನದ ಮೇಲೆ ಬೀರಿದ ಪರಿಣಾಮ ಯಾವ ಪ್ರಮಾಣದಲ್ಲಿತ್ತು? ಅವು ಎಷ್ಟರ ಮಟ್ಟಿಗೆ ಅವರ ಜೀವನದೊಂದಿಗೆ ಬೆಸೆದುಕೊಂಡಿದ್ದವು? ಅದರಿಂದ ಸಮಾಜದಲ್ಲಿ ಅವರಿಗಿದ್ದ ಮಾನ್ಯತೆ ಎಂತಹದು ಎಂಬುದನ್ನು ನೋಡಿದೆವು. ಇವು ಕರ್ನಾಟಕದಲ್ಲಿ ಪ್ರಾಚೀನ ಕಾಲದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳು. ಇವರ ಕಾಲದಲ್ಲಿ ಪ್ರವೇಶ ಪಡೆದ ಪದ್ಧತಿಗಳು ಮುಂದೆ ಬರುವ ರಾಜಮನೆತನಗಳ ಕಾಲಕ್ಕೆ ಸಂಬಂಧವನ್ನು ಕಲ್ಪಿಸುತ್ತವೆ ಮತ್ತು ಅವು ಹೇಗೆ ಕಾಲದಿಂದ ಕಾಲಕ್ಕೆ ತಮ್ಮ ಸ್ವರೂಪವನ್ನು ಬದಲಾಯಿಸುತ್ತಾ ಹೋದವು ಎಂಬುದು ಮುಖ್ಯವಾಗುತ್ತದೆ. ಹಾಗೆ ಅವು ತಮ್ಮ ಸ್ವರೂಪ ಬದಲಾಯಿಸುವುದಕ್ಕೆ ಅಂಥ ನಿಯಮಗಳ ಪರ ನಿಂತ ಸ್ವಾರ್ಥಪರ ಹಿತಾಸಕ್ತಿಗಳು ಯಾವುವು? ಪುರುಷಪ್ರಧಾನ ಸಮಾಜದಲ್ಲಿ ಏನೇ ಬದಲಾವಣೆಯಾದರೂ ಯಾವುದೇ ನಿಯಮಗಳು ಜಾರಿ ಬಂದರೂ ಅವು ಅವರ ಯೋಚನೆಯಂತೆಯೇ ಇರುತ್ತವೆ.

ನಮಗೆ ದೊರೆತ ಶಾಸನೋಕ್ತ ಆಧಾರಗಳಿಂದ ಕರ್ನಾಟಕದ ಇತಿಹಾಸವನ್ನು ಶಾತವಾಹನ ಕಾಲದ ರಾಜಪ್ರಭುತ್ವದಿಂದ ಅಧ್ಯಯನ ಮಾಡಲಾಗಿದೆ. ನಾವು ಸ್ತ್ರೀಯರ ಬಗ್ಗೆ ಅಧ್ಯಯನ ಮಾಡಬೇಕೆಂದರೂ ಅದೇ ಕಾಲಾವಧಿಯಲ್ಲಿ ದೊರೆತ ಶಾಸನಗಳ ಆಧಾರಗಳಿಂದಲೇ ಆರಂಭ ಮಾಡಬೇಕಾಗುತ್ತದೆ. ಅಂದರೆ ನಮಗೆ ದೊರೆತ ಆಧಾರಗಳನ್ನೇ ಇಟ್ಟುಕೊಂಡು ಸ್ತ್ರೀಯರ ಬಗ್ಗೆ ಅಧ್ಯಯನ ಮಾಡಿದಾಗ ದೊರೆತ ಮಾಹಿತಿಗಳ ಆಧಾರದ ಮೇಲೆ ಆರಂಭಿಕ ಕಾಲದಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಹೇಗಿದ್ದವು? ಅವು ಕಾಲಾನಂತರದಲ್ಲಿ ಹೇಗೆ ಬದಲಾವಣೆಗೊಳಗಾದವು ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಗಂಗರ ಸಮಕಾಲೀನರಾಗಿ ಬಂದ ಹಲವಾರು ಚಿಕ್ಕ ಪುಟ್ಟ ರಾಜಮನೆತನಗಳು ಆಳ್ವಿಕೆ ಮಾಡಿದವು. ಅಲ್ಲದೇ ಪ್ರಮುಖವಾದ, ಅಷ್ಟೇ ಪ್ರಬಲವಾದ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಉತ್ತರ ಭಾರತದವರೆಗೂ ದಾಳಿಯನ್ನು ಮಾಡಿದ ರಾಷ್ಟ್ರಕೂಟರ ಕಾಲದ ಸ್ತ್ರೀಯರ ಬಗ್ಗೆ ಅಧ್ಯಯನವನ್ನು ಪ್ರತ್ಯೇಕವಾಗಿ ಮಾಡದೇ

ಹೋದರೂ ನನ್ನ ಅಧ್ಯಯನದ ಆರಂಭಿಕ ಹಂತದಲ್ಲಿ ಸಂದರ್ಭೋಚಿತವಾಗಿ ತೆಗೆದುಕೊಳ್ಳಲಾಗಿದೆ. ಈ ಕಾಲದಲ್ಲೂ ಕೂಡ ಸ್ತ್ರೀ ಸಮಾಜ ಅಂಥ ಬದಲಾವಣೆಯನ್ನೇನು ಕಾಣಲಿಲ್ಲ. ಮುಂದೆ ಹತ್ತರಿಂದ ಹದಿನೈದನೇ ಶತಮಾನದ ಸಂಶೋಧನೆ ಪ್ರಮುಖ ಕಾಲಾವಧಿಯಾಗಿದ್ದು ಅಲ್ಲಿ ಸ್ತ್ರೀಯರ ಬಗ್ಗೆ ವಿಮರ್ಶಾತ್ಮಕ ಅಧ್ಯಯನ ಮಾಡಲಾಗಿದೆ. ಅಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಹೇಗಿದ್ದವು ಮತ್ತು ಅಧ್ಯಯನದ ಕೊನೆಯ ವೇಳೆಗೆ ಎಂಥ ಸ್ಥಿತಿ ತಲುಪಿದ್ದವು ಎಂಬುದು ಮುಖ್ಯವಾಗುತ್ತದೆ. ಆರಂಭಿಕ ಹಂತದಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಅಲ್ಪಮಟ್ಟಿಗೆ ಉತ್ತಮವಾಗಿದ್ದವು. ಅಧಿಕಾರಹೀನರಾಗಿದ್ದ ಗೌರವವನ್ನು ಹೊಂದಿದ್ದರೂ ಮಾತೃತ್ವದ ಕಾರಣಕ್ಕಾದರೂ ಸ್ತ್ರೀಯರಿಗೆ ಸಮಾಜದಲ್ಲಿ ಮಾನ್ಯತೆ ಇತ್ತು. ಸ್ತ್ರೀಯರು ಅಂದು ಯಾವ ಸಮಸ್ಯೆಯನ್ನು ಎದುರಿಸುತ್ತಿರಲಿಲ್ಲವೆಂದಲ್ಲ, ಆದರೆ ಅವುಗಳು ತೀವ್ರ ಸ್ವರೂಪವನ್ನು ಪಡೆದಿರಲಿಲ್ಲ. ಜಾರಿಯಿದ್ದ ಪದ್ಧತಿಗಳು ಅವರ ಜೀವನಕ್ಕೆ ಮಾರಕವಾಗಿರಲಿಲ್ಲ. ನಮ್ಮ ಸಮಾಜ ಸುಧಾರಣೆಯಾಗಬೇಕು, ವರ್ಗ, ಜಾತಿ, ಲಿಂಗರಹಿತ ಸಮಾಜ ನಮ್ಮದಾಗಬೇಕು ಎಂದು ಎಷ್ಟೋ ಮಹಾನ್ ಸುಧಾರಣವಾದಿಗಳು ಬಂದರು. ಆದರೆ ಅವೆಲ್ಲ ಮರದ ಕೊಂಬೆ ಕಡಿಯುವ ಕೆಲಸದಂತೆ ಆಯಿತು. ಮರ ಮತ್ತೆ ಚಿಗಿತು ನಿಲ್ಲುವಂತೆ ಅವೇ ಪದ್ಧತಿಗಳು ವಕ್ರವಕ್ರವಾಗಿ ತಮ್ಮ ಕೊಂಬೆ ರೆಂಬೆಗಳನ್ನು ಚಾಚಿ ನಿಂತವು. ಅಧ್ಯಯನದ ಕೊನೆಯ ವೇಳೆಗೆ ಸರಿಪಡಿಸಲಾಗದ ಹೀನಾಯ ಸ್ಥಿತಿ ತಲುಪಿ ಅರಸುಮನೆತನಗಳ ರಾಜಪ್ರಭುತ್ವ ಅಳಿದು ಹೋದರೂ ದುಷ್ಟಪದ್ಧತಿಗಳು ಮಾತ್ರ ಅಳಿದು ಹೋಗಲಿಲ್ಲ.

ಅಧ್ಯಾಯ ನಾಲ್ಕು

# ಶಾಸನಗಳಲ್ಲಿ ಸ್ತ್ರೀಯರ ಕಾರ್ಯಕ್ಷೇತ್ರಗಳು

೪.೧. ಆಡಳಿತ ಮತ್ತು ರಾಜಕೀಯ ಕ್ಷೇತ್ರ
೪.೨. ಧಾರ್ಮಿಕ ಕ್ಷೇತ್ರ
೪.೩. ಸಾಮಾಜಿಕ ಕ್ಷೇತ್ರ
೪.೩.೧. ಸಮಾಜ ಸೇವಾ ಕಾರ್ಯಗಳು
೪.೩.೨. ವೃತ್ತಿ ಕ್ಷೇತ್ರದಲ್ಲಿ ಸ್ತ್ರೀಯರು
೪.೩.೩. ಶಿಕ್ಷಣ ಮತ್ತು ಸಾಹಿತ್ಯ
೪.೩.೪. ಬಹುಪತ್ನಿತ್ವ
೪.೩.೫. ಪೆಣ್ಬುಯಲ್

## ೪.೧. ಆಡಳಿತ ಮತ್ತು ರಾಜಕೀಯ ಕ್ಷೇತ್ರದಲ್ಲಿ ಸ್ತ್ರೀಯರು

ಇತಿಹಾಸದಲ್ಲಿ ಸ್ತ್ರೀ ಕುಟುಂಬದಾಚೆ ಸಮಾಜದಲ್ಲಿ ಸಮೂಹದ ನಾಯಕತ್ವ ವಹಿಸಿದ್ದಾಗಲಿ, ಆಡಳಿತದಲ್ಲಿ ಉನ್ನತ ಪದವಿ ಹೊಂದಿದ್ದಾಗಲಿ ತುಂಬಾ ವಿರಳ. ಆಕೆ ಅಧಿಕಾರ ಹೊಂದಿದ್ದಾಳೆಂದರೆ ಅದು ಅನಿವಾರ್ಯವಾಗಿ ವಹಿಸಿಕೊಡಲಾಗಿರುವ ಸ್ಥಾನವಾಗಿರುತ್ತಿತ್ತು. ಸಹಜವಾಗಿ ಪುರುಷರಂತೆ ಸ್ತ್ರೀಯರಿಗೆ ಅಧಿಕಾರ ಹಸ್ತಾಂತರವಾಗಲಿ, ಆಡಳಿತದಲ್ಲಿ ಜವಾಬ್ದಾರಿ ಹುದ್ದೆಗಳಾಗಲಿ ದೊರೆತಿಲ್ಲ. ಪುರುಷಪ್ರಧಾನ ವ್ಯವಸ್ಥೆಯ ಮಧ್ಯೆಯೂ ಸ್ತ್ರೀ ಪುರುಷನಂತೆ ಹಲವಾರು ಆಡಳಿತಾತ್ಮಕ ಹುದ್ದೆಗಳನ್ನು ಪಡೆದು ಸಮರ್ಥವಾಗಿ ನಿರ್ವಹಿಸಿದ ಕುರಿತು ನೀಡುವ ಶಾಸನ ಮಾಹಿತಿ ಅವರ ಸಾಮರ್ಥ್ಯಕ್ಕೆ ಸಾಕ್ಷಿಯಾಗಿ ಇತಿಹಾಸದಲ್ಲಿ ದಾಖಲೆಗಳಾಗಿ ಉಳಿದಿವೆ. ಕರ್ನಾಟಕದ ಮಧ್ಯಕಾಲೀನ ಇತಿಹಾಸದಲ್ಲಿ ಬರುವ ರಾಜಮನೆತನಗಳ ಶಾಸನೋಕ್ತ ಮಾಹಿತಿಯನ್ನು ಅಧ್ಯಯನ ಮಾಡಿದಾಗ ಹಲವಾರು ಸ್ತ್ರೀಯರು ಆಡಳಿತದ ವಿವಿಧ ವಿಭಾಗಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಇದು ಅವರ ರಾಜಕೀಯ ಪ್ರಜ್ಞೆ ಕುರಿತು ನೀಡುವ ಮಾಹಿತಿ. ರಾಜಮನೆತನಕ್ಕೆ ಸೇರಿದ ರಾಣಿಯರು, ರಾಜಕುಮಾರಿಯರು, ಅವರ ಸಹೋದರಿಯರು ರಾಜಕೀಯ ರಂಗದಲ್ಲಿ ನಿರ್ವಹಿಸಿದ ಪಾತ್ರ ಒಂದು ಕಡೆಯಾದರೆ ಇವರನ್ನು ಹೊರತುಪಡಿಸಿ ಸಾಮಾನ್ಯ ಮಹಿಳೆಯರು, ಗಾವುಂಡಿಯರು, ನಾಡಗಾವುಂಡಿಯರು, ದಂಡನಾಯಕತಿ, ತೆರಿಗೆ ಅಧಿಕಾರಿಣಿಯಾಗಿ, ಹೀಗೆ ಒಟ್ಟು ವೈವಿಧ್ಯಮಯ ಆಳ್ವಿಕೆಯಲ್ಲಿ ಭಾಗವಹಿಸಿದ್ದಾರೆ.

ಏನಕೇನ ಕಾರಣದಿಂದಲೇ ಅವಳಿಗೆ ಅಧಿಕಾರ ದೊರೆತ ಸಾಧ್ಯತೆ ಇತ್ತು. ಸ್ತ್ರೀಯರಿಗೆ ಪುರುಷರಿಗೆ ದೊರೆತಂತೆ ಅಧಿಕಾರ ಸಹಜವಾಗಿ ದೊರೆಯುವುದಿಲ್ಲ. ಇಂಥ ಅಸಮಾನ ವ್ಯವಸ್ಥೆಯ ಮಧ್ಯೆಯೂ ಸ್ತ್ರೀಯರಿಗೆ ಕೊಡಲಾದ ಅಧಿಕಾರದಲ್ಲಿ ಯಶಸ್ಸನ್ನು ಹೊಂದಿದ್ದಾರೆ. ಹಲವಾರು ಆಡಳಿತಾತ್ಮಕ ಹುದ್ದೆಗಳನ್ನು ಅಲಂಕರಿಸಿ ಸಮರ್ಥವಾಗಿ ನಿರ್ವಹಿಸಿದ ಕುರಿತು ಶಾಸನ ನೀಡುವ ಮಾಹಿತಿ ಅವರ ಸಾಮರ್ಥ್ಯಕ್ಕೆ ಸಾಕ್ಷಿಯಾಗಿ, ಇತಿಹಾಸದಲ್ಲಿ ದಾಖಲೆಗಳಾಗಿ ಉಳಿದಿವೆ.

ರಾಷ್ಟ್ರಕೂಟರ ಆಳ್ವಿಕೆ ಅವಧಿಯಲ್ಲಿ ಸ್ತ್ರೀಯರು ಆಡಳಿತ ಕ್ಷೇತ್ರದಲ್ಲಿ ಭಾಗವಹಿಸುವ ಇಚ್ಛೆಯನ್ನು ಹೊಂದಿದ್ದರೆಂಬುದು ಅವರು ಆಡಳಿತ ನಿರ್ವಹಿಸಿದ ಕುರಿತು ಮಾಹಿತಿ ನೀಡುವ ಶಾಸನಗಳಿಂದ ತಿಳಿದುಕೊಳ್ಳಬಹುದು. ಅಮೋಘವರ್ಷನ ಸೊಸೆ, ಇಂದ್ರನ ಪತ್ನಿ ದೇರಗೇರಿ ಎಂಬ ಹಳ್ಳಿಯನ್ನು ಆಳ್ವಿಕೆ ಮಾಡುತ್ತಿದ್ದು ಆಗ ಇಂದ್ರ ಬನವಾಸಿಯಲ್ಲಿ ಆಳ್ವಿಕೆ ಮಾಡುತ್ತಿದ್ದನು. ಅದೇ ಶಾಸನದಲ್ಲಿ ಕಲಿಯಮ್ಮ ನಾಳ್ಗಾವುಂಡಳಾಗಿದ್ದಳೆಂದು ಮಾಹಿತಿ ಇದೆ(SII. XVIII, 14). ಎಂಟು ಮತ್ತು ಒಂಬತ್ತನೇ ಶತಮಾನದಲ್ಲಿ ಗಂಗ ದೊರೆ ಶ್ರೀಪುರುಷನ ಅಧಿಕಾರ

ಅವಧಿಯಲ್ಲಿ ಆಳ್ವಿಕೆ ಮಾಡಿದ ಮಲೆವೆಲ್ಲೂರು ಪ್ರಾಂತದ ಆಡಳಿತ ನಿರ್ವಹಿಸಿದವಳು ಶೂರರಾಣಿ ವೀರಾಂತರೆ. ವೀರಾಂತರೆಯ ಸೊಸೆ, ದುಗ್ಗಮನ ಹೆಂಡತಿ ಕಂಚಿಯಬ್ಬೆ ಕುಳಾಲ-೩೦೦ರ ಭಾಗವನ್ನು ಆಳಿದ ಕುರಿತು ಮಾಹಿತಿಯಿದೆ(E.C. IV, ಯಳಂದೂರು ೧೩೮). ಅತ್ತೆ ಸೊಸೆ ಇಬ್ಬರೂ ಆಳ್ವಿಕೆ ಮಾಡಿದ್ದರು. ನೀತಿ ಮಾರ್ಗ ಪೆರ್ಮಾಡಿಯ ಆಳ್ವಿಕೆ ಮಾಡುತ್ತಿದ್ದಾಗ ಭೂತುಗನ ಅರಸಿ ಪರಮಬ್ಬೆ ಕೊರಗಲ್ಲನ್ನು ಆಳುತ್ತಿದ್ದಳೆಂದು ಕೊರಗಲ್ಲು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಈಕೆ ಕೊರಗಲ್ಲು ಶಾಸನದ ಕಾಲಕ್ಕೆ ಪರಮಬ್ಬರಸಿ ವಿಧವೆಯಾಗಿದ್ದಳು. ಪತಿಯ ನಂತರ ಆಡಳಿತ ನೋಡಿಕೊಳ್ಳುವ ಕಾರಣಕ್ಕೆ ಅಧಿಕಾರಕ್ಕೆ ಬಂದಿರಬಹುದಾದ ಸಾಧ್ಯತೆ ಇದೆ(E.C. IV, ಪಿರಿಯಾಪಟ್ಟಣ ೮). ಒಂಬತ್ತನೇ ಶತಮಾನದಲ್ಲಿ ನೊಳಂಬ ಮಹೇಂದ್ರರಾಜ ತನ್ನ ನಾಲ್ವರು ರಾಣಿಯರಾದ ದೊಂದಬ್ಬೆ, ವಿಜಯಮಹಾದೇವಿ, ಅಕ್ಕಬ್ಬೆ, ಪರಮ ಮಹಾದೇವಿಯರಿಗೆ ಕ್ರಮವಾಗಿ ತ್ರೈಲೋಕಪೋಳಲ್, ಬರೆಯೂರು, ಧರ್ಮಪೊಳಲ್ ಮತ್ತು ಸೀಮಾಪುರ ಆಳ್ವಿಕೆ ಹಂಚಿಕೊಟ್ಟಿದ್ದ(E.C. VI, ಸಿರಾ ೨೪). ಹಲವು ರಾಣಿಯರನ್ನು ವಿವಾಹವಾಗಿ ಅವರನ್ನು ಪ್ರತ್ಯೇಕವಾಗಿ ಇರುವಂತೆ ಮಾಡುವ ಕಾರಣಕ್ಕೆ ಅಧಿಕಾರ ವಹಿಸಿಕೊಡುತ್ತಿದ್ದರು. ಕ್ರಿ. ಶ. ೯೦೨ರಲ್ಲಿ ಮುಳುಗುಂದ ಶಾಸನ ಮಾಹಿತಿಯಂತೆ ಎರಡನೇ ಕೃಷ್ಣನ ಆಳ್ವಿಕೆಯಲ್ಲಿ ಈತನ ಪತ್ನಿ ಮಹಾಶ್ರೀಮತಿ(ಪಟ್ಟಮಹಿಷಿ), ವಿನಯಾಂಬುಧಿ ಧವಳ ವಿಷಯದಲ್ಲಿದ್ದಳೆಂದು ಮುಳುಗುಂದದ ಶಾಸನ ಮಾಹಿತಿ ನೀಡುತ್ತದೆ(E.I. XIII, p 190). ಪಟ್ಟದ ರಾಣಿಯರು ರಾಜನಿಂದ ದೂರವಿದ್ದು ಒಂದು ವಿಷಯದ ಆಳ್ವಿಕೆ ನಿರ್ವಹಿಸುತ್ತಿದ್ದರು.

ಕೆಲವೊಮ್ಮೆ ರಾಜ ಅಕಾಲಿಕ ಮರಣ ಹೊಂದಿದರೆ ಮಕ್ಕಳು ಅಪ್ರಾಪ್ತರಾಗಿದ್ದಾಗ ರಾಣಿಯರಿಗೆ ಅಧಿಕಾರ ಅನಿವಾರ್ಯವಾಗಿ ದೊರೆಯುತ್ತಿತ್ತು. ಪಟ್ಟಾಭಿಷೇಕವನ್ನು ರಾಜನಿಯಮದಂತೆ ವಂಶದ ಹಿರಿಯ ಗಂಡುಮಕ್ಕಳಿಗೆ ಮಾಡುತ್ತಿದ್ದರು. ತಾವು ಅವರಿಗೆ ಬೆಂಬಲವಾಗಿ ನಿಲ್ಲುತ್ತಿದ್ದರು. ಹೀಗೆ ಕೂಡಾ ಸ್ತ್ರೀಯರಿಗೆ ಅಧಿಕಾರ ದೊರೆತದ್ದುಂಟು. ದೇವಬ್ಬರಸಿ ಕದಂಬ ವಂಶಕ್ಕೆ ಸೇರಿದ ರಾಜಕುಮಾರಿ. ಈಕೆಯ ವಿವಾಹ ನೊಳಂಬ ಪಲ್ಲವ ವಂಶದ ಇಮ್ಮಡಿ ಪೊಟಿಲ್ ಚೋರನೊಂದಿಗೆ ನಡೆದಿದ್ದು ಪತಿಯ ಮರಣದ ನಂತರ ಹಿರಿಯ ಮಗ ಇಮ್ಮಡಿ ಮಹೇಂದ್ರ ಅಧಿಕಾರ ನಡೆಸುತಿದ್ದು ಆತನು ಅಕಾಲ ಮೃತ್ಯುವಶನಾದಾಗ ಕಿರಿಯ ಮಗನ ಪರವಾಗಿ ಕೆಲಕಾಲ ಆಳ್ವಿಕೆ ಮಾಡಿದ್ದಾಳೆ(ಜಯಮ್ಮ ಕರಿಯಣ್ಣ ಎಚ್.; ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೮೪, ೮೫). ಸತ್ಯಾಶ್ರಯನ ಕುವರಿ ಮಹಾದೇವಿ ಮರವೊಳಲನ್ನು ಆಳುತ್ತಿದ್ದಳು(ವಸಂತಲಕ್ಷ್ಮಿ ಕೆ.(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೮).

ದೊರೆಗಳು ಹಲವು ರಾಣಿಯರನ್ನು ತಮ್ಮ ಪತ್ನಿಯರನ್ನಾಗಿ ಸ್ವೀಕರಿಸುವುದು ಆ ಕಾಲದಲ್ಲಿ ಸಹಜವೆಂದು ಭಾವಿಸಲಾಗಿತ್ತಾದರೂ ಅವರೆಲ್ಲರನ್ನು ಒಂದೇ ಕಡೆ ತನ್ನೊಟ್ಟಿಗೆ ಇರುವುದು ದೊರೆಯ ವೈಯಕ್ತಿಕ ಬದುಕಿಗೆ ಸಾಧ್ಯವಿರದ ವಿಷಯವಾಗಿತ್ತು. ಆ ಕಾರಣಕ್ಕೆ

ಅವರನ್ನು ಆಡಳಿತದ ಅಧಿಕಾರ ವಹಿಸಿಕೊಡುವ ನೆಪದಿಂದ ಒಬ್ಬೊಬ್ಬರಿಗೂ ಒಂದೊಂದು ಅಗ್ರಹಾರ, ಪ್ರಾಂತ, ಇಲ್ಲವೇ ಕೆಲವು ಊರುಗಳ ಆಡಳಿತ ನೋಡಿಕೊಳ್ಳುವ ಜವಾಬ್ದಾರಿ ಕೊಡುವ ಮೂಲಕ ಅವರೆಲ್ಲರನ್ನು ಪ್ರತ್ಯೇಕವಾಗಿ ಇರುವಂತೆ ನೋಡಿಕೊಳ್ಳುತ್ತಿದ್ದರು.

ಆರನೇ ವಿಕ್ರಮಾದಿತ್ಯ ಹಲವು ರಾಣಿಯರನ್ನು ಪತ್ನಿಯರನ್ನಾಗಿ ಹೊಂದಿದ್ದು ಒಬ್ಬೊಬ್ಬರಿಗೂ ಒಂದೊಂದು ಅಗ್ರಹಾರದ ಆಳ್ವಿಕೆ ವಹಿಸಿಕೊಟ್ಟಿದ್ದ. ಹಿರಿಯ ಕೇತಲಾದೇವಿ ಭತ್ತಗ್ರಾಮ, ಸಿರುಗುಪ್ಪ, ಕೊಳೆನೂರು ಗ್ರಾಮಗಳ ಆಡಳಿತ ಜವಾಬ್ದಾರಿಯನ್ನು ಹೊಂದಿದ್ದಳು.(SII. IX, 159). ಮಲಯವತಿದೇವಿ ಸಿಂದವಾಡಿ ನಾಡಿನ ಅಗ್ರಹಾರ ತುಂಬುಳವನ್ನು ಆಳ್ವಿಕೆ ಮಾಡುತ್ತಿದ್ದಳು(SII. IX, 175). ಈಕೆಯ ಮಗಳೆ ಮೈಳಲಾದೇವಿ. ಮಲಯವತಿದೇವಿ ಅಗ್ರಹಾರದಲ್ಲಿ ಇದ್ದುಕೊಂಡೇ ಮಗಳಿಗೆ ಆಡಳಿತದಲ್ಲಿ ಅನುಭವ ನೀಡಿರಬಹುದು. ಮೈಳಲಾದೇವಿ ಕದಂಬ ವಂಶದ ಎರಡನೇ ಜಯಕೇಶಿ ವಿವಾಹವಾದ ಮೇಲೆ ರಾಜ್ಯ ನಿರ್ವಹಣೆಯಲ್ಲಿ ಮಹತ್ವದ ಪಾತ್ರ ವಹಿಸಿದ್ದಾಳೆ. ಕೊಂಕಣೊಂಬೈನೂರು, ಕವಡಿದ್ವೀಪ, ಸವಲಕ್ಕು ಉಣಕಲ್ಲು, ಸಬ್ಬಿ ಎರಡು ಮೂವತ್ತು, ವೇಣುಗ್ರಾಮ ಎಪ್ಪತ್ತು ಹಯ್ಯೆಯ್ಯೆನೂರು ಇವು ಮೈಳಲಾದೇವಿ ಅಧಿಕಾರ ವ್ಯಾಪ್ತಿಗೆ ಸೇರಿದ ಪ್ರದೇಶಗಳು (ವಸಂತಲಕ್ಷ್ಮಿ ಕೆ.(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೭). ಎರಡನೇ ಜಯಕೇಸಿ ಮಹಾಮಂಡಳೇಶ್ವರ, ಆದರೆ ಮೈಳಲಾದೇವಿ ಇಷ್ಟೊಂದು ಪ್ರದೇಶಗಳನ್ನೊಳಗೊಂಡ ವಿಸ್ತಾರವಾದ ರಾಜ್ಯವನ್ನು ಆಳ್ವಿಕೆ ನಡೆಸಿದ್ದಳೆಂದರೆ, ದಕ್ಷ ಆಡಳಿತಗಾರ್ತಿಯಾಗಿರುವ ಸಾಧ್ಯತೆ ಇದೆ. ಅಥವಾ ಆಡಳಿತ ನೆಡೆಸಿಕೊಂಡು ಹೋಗುವ ಸಮರ್ಥ ವ್ಯಕ್ತಿಗಳ ಕೊರತೆ ಇರಬಹುದು. ಇಲ್ಲವೆ ಅವರ ದೌರ್ಬಲ್ಯ ಹಸ್ತಕ್ಷೇಪಕ್ಕೆ ತಡೆಯಾಗಿರಬಹುದು. ಆಡಳಿತದಲ್ಲಿ ಆಕೆ ಹೊಂದಿದ್ದ ಚಾತುರ್ಯಾ ಪುರುಷರ ತಾಟಸ್ಥ್ಯಕ್ಕೆ ಕಾರಣವಾಗಿರಬಹುದು. ವಿಕ್ರಮಾದಿತ್ಯನ ಮತ್ತೊಬ್ಬ ರಾಣಿ ಭಾಗಲಮಹಾದೇವಿ ಮುಂಡರಗಿಯನ್ನು ತನ್ನ ಆಡಳಿತ ಕ್ಷೇತ್ರವನ್ನಾಗಿಸಿಕೊಂಡಿದ್ದಳು(SII. XI, 206). ವಿಕ್ರಮಾದಿತ್ಯನ ಮತ್ತೊಬ್ಬ ರಾಣಿ ಪದ್ಮಲದೇವಿ ಕಳಚುರಿ ರಾಜಕುಮಾರಿ ಈಕೆಯ ಸಹೋದರ ಕೊಂಗರಸ, ವಿಕ್ರಮಾದಿತ್ಯನು ಗೆದ್ದ ಶಾಸನೋಕ್ತ ವಿಜಯಸ್ತಂಭದಲ್ಲಿ ಈತನ ಹೆಸರು ಇದೆ. ನರೇಗಲ್ ಶಾಸನ ಈ ಮಾಹಿತಿ ನೀಡುತ್ತದೆ(ನಾಗಯ್ಯ ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೩೩). ಜಾಕಲದೇವಿ ಕದಂಬ ವಂಶದ ತಿಕ್ಕನ ಪುತ್ರಿಯಾಗಿದ್ದಳು. ಈಕೆ ಪತಿ ವಿಕ್ರಮಾದಿತ್ಯನ ಜೊತೆ ಯುದ್ಧಕ್ಕೆ ಹೋಗುತ್ತಿದ್ದಳಂತೆ. ಸಂಗೀತ, ನೃತ್ಯ, ಯುದ್ಧ, ಆಡಳಿತ, ಬಹುಮುಖ ಸಾಮರ್ಥ್ಯ ಹೊಂದಿದ್ದ ಈಕೆಯ ಆಡಳಿತ ಕ್ಷೇತ್ರ ಇಂಗಳಗಿಯಾಗಿತ್ತು(ನಾಗಯ್ಯ ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೪೧).

ರಾಣಿಯರು ಆಡಳಿತದಲ್ಲಿ ಉನ್ನತ ಸ್ಥಾನ ಹೊಂದಿದ್ದರೂ ಅವರಿಗೆ ಅವರದೇ ಆದ ಕೆಲವು ಪ್ರದೇಶಗಳನ್ನು ಆಡಳಿತ ನಿರ್ವಹಿಸಲು ಕೊಡಲಾಗುತ್ತಿತ್ತು. ಅಲ್ಲದೇ ಅವರಿಗೆ ಆಡಳಿತದಲ್ಲಿ ಮಹತ್ವದ ನಿರ್ಣಯ ಕೈಗೊಳ್ಳುವುದಾಗಲೀ ಅಥವಾ ಯಾವುದಾದರೂ ವಿಷಯ ನಿಷ್ಕರ್ಷೆ

ಮಾಡುವ ಅವಕಾಶ ದೊರೆತಾಗ ಅದನ್ನು ಯಶಸ್ವಿಯಾಗಿ ನಿರ್ವಹಿಸಿದ್ದುಂಟು. ಕ್ರಿ.ಶ. ೧೨೬೧ರ ಕೋಟೇಶ್ವರ ಶಾಸನದಲ್ಲಿ ಪಟ್ಟ ಮಹಾದೇವಿ ಮತ್ತು ಪಾಡ್ಯ ದೇವಪೇಂದ್ರ ದೇವರಸ ಇಬ್ಬರೂ ಜಂಟಿಯಾಗಿ ಆಳ್ವಿಕೆ ಮಾಡುತ್ತಿದ್ದಾಗ ಕುರಡಿಕುರ ಗ್ರಾಮದ ಕಂದಾಯದ ವಿಷಯ ಕುರಿತು ಆಸ್ಥಾನಿಕರ ಮತ್ತು ಮೈದುನನ ಸಮ್ಮುಖದಲ್ಲಿ ನಿಷ್ಕರ್ಷೆ ಮಾಡಲಾಯಿತೆಯೆಂದು ಶಾಸನ ತಿಳಿಸುತ್ತದೆ(ವಸಂತಲಕ್ಷ್ಮಿ ಕೆ.(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೬).

ಒಂದು ಸಾಮ್ರಾಜ್ಯದ ನಿರ್ವಹಣೆಯಲ್ಲಿ ಆಡಳಿತ ಕ್ಷೇತ್ರ ಒಂದು ಮುಖವಾದರೆ ಯುದ್ಧ ಇನ್ನೊಂದು ಮುಖ. ಯುದ್ಧವನ್ನು ಹೊರತುಪಡಿಸಿ ನಾವು ಯಾವ ಸಾಮ್ರಾಜ್ಯದ ಇತಿಹಾಸವನ್ನು ಅಧ್ಯಯನ ಮಾಡಲು ಸಾಧ್ಯವಿಲ್ಲ. ರಾಜ್ಯವ್ಯವಸ್ಥೆಯಲ್ಲಿ ಯುದ್ಧವೆಂದ ತಕ್ಷಣ ಸ್ತ್ರೀಯರನ್ನು ಹೊರತುಪಡಿಸಿಯೇ ಚಿಂತನೆ ಮಾಡಲಾಗುತ್ತದೆ. ಯುದ್ಧಭೂಮಿಯಲ್ಲಿ ಹೋರಾಟ ಮಾಡುವುದು ಸ್ತ್ರೀ ಸಾಮರ್ಥ್ಯಕ್ಕೆ ಅಸಾಧ್ಯ. ಇದು ಅಸಾಧ್ಯವೆನ್ನುವುದಕ್ಕಿಂತ ಸ್ತ್ರೀ ಯುದ್ಧಸಂಸ್ಕೃತಿಗೆ ಸೇರಿದವಳಲ್ಲ. ಯುದ್ಧ ಅವಳ ವ್ಯಕ್ತಿತ್ವಕ್ಕೆ ವಿರುದ್ಧವಾದ್ದದ್ದು. ಆದರೆ ಇತಿಹಾಸದಲ್ಲಿ ಅವಳ ಸಾಮರ್ಥ್ಯವನ್ನೇ ಪ್ರಶ್ನಿಸುವಂತಹ ಸಂದರ್ಭ ಬಂದಾಗ ಅವಳು ಯುದ್ಧ ಭೂಮಿಯಲ್ಲಿ ಹೋರಾಡಿದ ನಿದರ್ಶನಗಳು ನಮಗೆ ದೊರೆಯುತ್ತವೆ. ಆದರೆ ಈ ಕ್ಷೇತ್ರ ಅವಳಿಗೆ ಸಂಬಂಧವಿಲ್ಲದ್ದು ಎಂಬುದು ಎಲ್ಲರ ಭಾವನೆ. ಹಾಗಾದರೆ ಸ್ತ್ರೀಯರು ಯುದ್ಧ ಭೂಮಿಯಲ್ಲಿ ಹೋರಾಡಿಲ್ಲವೇ ಎಂಬ ಪ್ರಶ್ನೆ ಉದ್ಭವವಾದಾಗ ಇರುವರೆಂದು ಹೇಳುತ್ತವೆ ಶಾಸನಗಳು. ಇತಿಹಾಸಗಳಲ್ಲಿ ಅಷ್ಟೇ ಏಕೆ ಪುರಾಣಗಳಲ್ಲಿ ದೇವತೆಗಳು ದುಷ್ಟಸಂಹಾರಕ್ಕಾಗಿ ದುಷ್ಟಶಕ್ತಿಯ ವಿರುದ್ಧ ಹೋರಾಟ ಮಾಡಿದ್ದನ್ನು ಹೇಳುತ್ತವೆ. ರಾಮಾಯಣದಲ್ಲಿ ಕೈಕೇಯಿ ದಶರಥನೊಂದಿಗೆ ಯುದ್ಧಕ್ಕೆ ಹೋಗುತ್ತಿದ್ದಳೆಂದು ಹೇಳಲಾಗುತ್ತದೆ. ಎಲ್ಲಾ ಕಾಲಕ್ಕೂ ಸ್ತ್ರೀಯರು ಹೋರಾಡಿದ ಬಗ್ಗೆ ಮಾಹಿತಿ ಇದೆ. ಮಧ್ಯ ಯುಗದಲ್ಲೂ ಆಡಳಿತ ಮತ್ತು ಯುದ್ಧ ಎರಡನ್ನೂ ಯಶಸ್ವಿಯಾಗಿ ನಿಭಾಯಿಸಿದ ರಾಣಿ ಎಂದರೆ ಅಕ್ಕಾದೇವಿ. ಮೂವರು ರಾಜರ ಆಳ್ವಿಕೆಯ ಅವಧಿಯಲ್ಲಿ (ಅಣ್ಣ ತ್ರಿಭುವನ ಮಲ್ಲ, ತಮ್ಮ ಜಯಸಿಂಹ, ತಮ್ಮನ ಮಗ ಸೋಮೇಶ್ವರ) ರಾಜ್ಯಭಾರ ನಿರ್ವಹಿಸಿದ ಧೀರ ಮಹಿಳೆ ಅಕ್ಕಾದೇವಿ. ದಾನ, ಧರ್ಮ, ಶೌರ್ಯ, ಧೈರ್ಯ, ಸಕಲ ಗುಣ ಸಂಪನ್ನಳಾಗಿದ್ದಳೆಂದು ಹೇಳಲಾಗಿದೆ. ಶಾಸನಗಳಲ್ಲಿ ಈಕೆಯನ್ನು ರಣಭೈರವಿ ಎಂದು ಹೊಗಳಲಾಗಿದೆ. ಅಂದರೆ ಶತ್ರುರಾಜರ ವಿರುದ್ಧ ಶೌರ್ಯದಿಂದ ಹೋರಾಟ ಮಾಡುವ ಸಾಮರ್ಥ್ಯ ಈಕೆ ಹೊಂದಿದ್ದಳು ಶತ್ರುರಾಜರ ಪಾಲಿಗೆ ಪ್ರಚಂಡ ಬೈರವಿಯಾಗಿದ್ದರೂ ಶಾಂತಗುಣವನ್ನು ಹೊಂದಿದ್ದಳು. ವಿದ್ಯಾರ್ಥಿಗಳಿಗೆ, ನಂದಿನಿಯಂತಿದ್ದು ವಿವೇಕದಲ್ಲಿ ಚೂಡಾಮಣಿಯಂತಿದ್ದಳು. ಹೀಗೆ ಅಕ್ಕಾದೇವಿ ಕುರಿತು ವರ್ಣನೆ ಮುಂದುವರೆಯುತ್ತದೆ. ಕ್ರಿ.ಶ. ೧೦೫೦ರಲ್ಲಿ ಕಿಸುಕಾಡು ೭೦ ತೊಱಗೆರೆ ೫೦, ಮಾಸವಾಡಿ ೧೪೦ನ್ನು ಆಳುತ್ತಿದ್ದಳೆಂದು ಉಲ್ಲೇಖಿಸಲಾಗುತ್ತದೆ(ಕ.ವಿ.ಶಾ.ಸಂಪುಟ ೯, ಹುನುಗುಂದ, ಶಾ.ಸಂ. ೧೬). ಅಕ್ಕಾದೇವಿಯನ್ನು

ಕುರಿತು ಶಾಸನೋಲ್ಲೇಖಗಳನ್ನು ನಾವು ನೋಡಿದಾಗ ಯುದ್ಧಭೂಮಿಯಲ್ಲಿ ಸೈನ್ಯದ ಮುಂದಾಳತ್ವವನ್ನು ತಾನೇ ವಹಿಸುತ್ತಿದ್ದಿರಬೇಕು. ಆದರೆ ಶಾಸನಗಳು ಅದರ ಬಗ್ಗೆ ಸರಿಯಾದ ಮಾಹಿತಿಯನ್ನು ನೀಡುವುದಿಲ್ಲ. ಕ್ರಿ.ಶ. ೧೦೫೦ರ ಸೂಡಿ ಶಾಸನದಲ್ಲಿ ಚೋಳರೊಂದಿಗೆ ಯುದ್ಧವಾದ ಮಾಹಿತಿಯಿದೆ. ಆದರೆ ಅಕ್ಕಾದೇವಿ ಯುದ್ಧದಲ್ಲಿ ಭಾಗವಹಿಸಿದ್ದರ ಬಗ್ಗೆ ಸ್ಪಷ್ಟತೆ ಇಲ್ಲ(SII. XI, 87). ಹೀಗೆ ಶಾಸನಗಳು ಉಲ್ಲೇಖಿಸುವಾಗ ಸ್ಪಷ್ಟಮಾಹಿತಿ ನೀಡುವಲ್ಲಿ ವಿಫಲವಾಗಿವೆ. ರಣಭೈರವಿ ಎಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಎಂದರೆ ರಣರಂಗದಲ್ಲಿ ಶತ್ರುಸೈನಿಕರನ್ನು ಭೀಕರವಾಗಿ ಕೊಲ್ಲುತ್ತಿರಬಹುದು. ಅರಸೀಬೀದಿ ಶಾಸನದಲ್ಲಿ ದುಷ್ಟನಿಗ್ರಹ ಶಿಷ್ಟಪ್ರತಿಪಾದನೆಯಿಂದ ಆಳ್ವಿಕೆ ಮಾಡುತ್ತಿದ್ದಳೆಂದು ಉಲ್ಲೇಖಿಸಲಾಗಿದೆ(SII. XI, 88). ದುಷ್ಟರೆಂದರೆ ಶತ್ರಸೈನಿಕರೇ ಆಗಿರಲಿ, ಸಮಾಜದಲ್ಲಿದ್ದ ದುಷ್ಟರೇ ಆಗಿರಲಿ ಅಂಥವರನ್ನು ನಿಗ್ರಹಿಸಿ, ಶಿಷ್ಟರನ್ನು ಕಾಪಾಡುತ್ತಿದ್ದಳು. ಹೆಣ್ಣಿಗೂ ಕೂಡ ಕಾಪಾಡುವ ಶಕ್ತಿ ಇದೆ ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ. ಇಂಥ ಯುದ್ಧ ಕಲೆ, ಸಾಹಸ, ಅರಮನೆಯಲ್ಲಿ ರಾಜಕುಮಾರರಿಗೆ ದೊರೆಯುತ್ತಿದ್ದ ಯುದ್ಧ ತರಬೇತಿ ಕಾರಣದಿಂದ ಅಕ್ಕಾದೇವಿಗೂ ಅಂಥ ಶಿಕ್ಷಣ ದೊರೆತಿರಬೇಕು. ಇದರಿಂದ ತನ್ನ ಪ್ರದೇಶ ಮತ್ತು ಪ್ರಜೆಗಳನ್ನು ಕಾಪಾಡುವ ಶಕ್ತಿ ಅಕ್ಕಾದೇವಿ ಹೊಂದಿದ್ದಳು. ಹೆಣ್ಣಾಗಲಿ ಗಂಡಾಗಲಿ ಶಿಕ್ಷಣ ದೊರೆಯುವುದು ಮುಖ್ಯ. ಅಕ್ಕಾದೇವಿಯಂತೆ ಎಲ್ಲ ಸ್ತ್ರೀಯರಿಗೆ ತನ್ನನ್ನು ಕಾಪಾಡಿಕೊಳ್ಳುವ ತರಬೇತಿ ದೊರೆತಿದ್ದರೆ ಹೆಣ್ಣು ರಕ್ಷಣೆಗೆ ಮೊರೆ ಇಡುವ ಅವಶ್ಯಕತೆ ಇರಲಿಲ್ಲ. ಇವತ್ತಿನ ಪ್ರಂಪಚದಲ್ಲೂ ಹೆಣ್ಣು ತನ್ನ ರಕ್ಷಣೆಗೋಸ್ಕರ ಗಂಡಿಗೆ ಮೊರೆ ಇಡುವ ಪ್ರಸಂಗವಿದೆ. ಗಂಡಿನಿಂದಲೇ ಅವಳಿಗೆ ರಕ್ಷಣೆ ಎನ್ನುವಂಥ ಸಂದರ್ಭವಿದೆ.

ಕ್ರಿ.ಶ. ೧೧೯೭ರ ಚಿಕ್ಕರಹಳ್ಳಿ ಶಾಸನ ಮಾಹಿತಿ ಪ್ರಕಾರ ಹೊಯ್ಸಳರ ಬಲ್ಲಾಳನ ರಾಣಿಯಾದ ಉಮಾದೇವಿ ಮಲ್ಲದೇವರಸನೊಂದಿಗೆ ಯುದ್ಧ ಮಾಡಲು ಮೂರು ಸಲ ದಂಡೆತ್ತಿ ಹೋಗುತ್ತಾಳೆ. "ಕವಡಿ ಹೊಳೆಯಲ್ಲಿ ಬೀಡುಬಿಟ್ಟು ಬೆಳಗುವತ್ತಿಗೆ ಬಂದು ಕಾದಿ ಕೆಟ್ಟು ಹೋಗುತ್ತಾ ಕತ್ತಗಿಯಲ್ಲಿದ್ದ ದನವ ಕೊಂಡು ಹೋ ಹಾಗೆ"(E.C. VII, ಹೊನ್ನಾಳಿ, ೨೮). ಚೋಳ ಮಹಾದೇವಿ ಚೇವೂರನ್ನು ಮುತ್ತಿಗೆ ಹಾಕಲು ಆಜ್ಞೆ ಮಾಡುತ್ತಾಳೆ ಯುದ್ಧದಲ್ಲಿ ಕೇತು ಮಲ್ಲನೆಂಬಾತ ಊರನ್ನು ರಕ್ಷಣೆ ಮಾಡಿ ಮಡಿದಾಗ ಆತನ ಸಾವಿನ ಸುದ್ದಿ ಕೇಳಿ ಮರಗುತ್ತಾಳೆ. "ಎಮ್ಮ ಮಕ್ಕಳ ನೋಯಿಸಿದೆವು" ಎಂದು ಯುದ್ಧಾಜ್ಞೆ ಮಾಡಿದ ಕುರಿತು ಪಶ್ಚಾತ್ತಾಪದಿಂದ ಕೂಡಿದ ಮರುಕದ ಧ್ವನಿಯಿದೆ. ಸತ್ತ ಕೇತುಮಲ್ಲನ ಮಗನಿಗೆ ದತ್ತು ಕೊಡಿಸಿದ್ದಾಳೆ(ವಸಂತಲಕ್ಷ್ಮಿ ಕೆ(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೯).

**ಆಡಳಿತದಲ್ಲಿ ಸಾಮಾನ್ಯ ಮಹಿಳೆಯರು**

ರಾಜಮನೆತನಕ್ಕೆ ಸೇರಿದ ಸ್ತ್ರೀಯರು ಆಡಳಿತದಲ್ಲಿ ಭಾಗವಹಿಸಿದಂತೆ ಇವರನ್ನು ಹೊರತುಪಡಿಸಿ ಸಾಮಂತರು, ಇತರೆ ಉನ್ನತ ಅಧಿಕಾರ ವರ್ಗದಲ್ಲಿರುವವರ ಪತ್ನಿಯರು

ಪತಿ ಜೊತೆಯಲ್ಲಿ ಮತ್ತು ಸ್ವತಂತ್ರವಾಗಿ ಅಧಿಕಾರ ನಡೆಸಿದ್ದಾರೆ. ಗಾವುಂಡಿಗಳಾಗಿ ಗ್ರಾಮದ ಆಡಳಿತ ಹೊಂದಿದ್ದರು. ಬಾಹ್ಯವಾಗಿ ಯಾವ ಪದವಿಯನ್ನು ಹೊಂದದೆ ಪತಿಯ ರಾಜಕೀಯ ವಿಚಾರಗಳಿಗೆ ಸಲಹೆ ಸೂಚನೆ ನೀಡುವಲ್ಲಿ ಸಹಾಯಕರಾಗಿರುತ್ತಿದ್ದರು.

ಕಲ್ಯಾಣ ಚಾಲುಕ್ಯ ದೊರೆ ಆಹವಲ್ಲನ ಆಳ್ವಿಕೆ ಅವಧಿಯಲ್ಲಿ ಮಾಂಡಲಿಕ ಸೋವಪೆರ್ಮಾಡಿ ತನ್ನ ಧರ್ಮಪತ್ನಿ ಲಕ್ಷ್ಮಬ್ಬರಸಿಯೊಂದಿಗೆ ಕಾಸುವುಳೆ-೭೦ನ್ನು, ರಾಜಧಾನಿ ಕರಪಾಳದಿಂದ ಆಳುತ್ತಿದ್ದ. ಇಲ್ಲಿ ಪತ್ನಿ ಸಮೇತ ಎಂದು ಉಲ್ಲೇಖಿಸಲಾಗಿದೆ. ಎಂದರೆ ಲಕ್ಷ್ಮಬ್ಬರಸಿ ಆಡಳಿತದಲ್ಲಿ ಪತಿಗೆ ಸಹಚಾರಿಣಿಯಾಗಿ ಮುಖ್ಯ ಪಾತ್ರ ವಹಿಸಿದ್ದಿರಬೇಕು. ಅದು ಯಾವ ರೀತಿ ಎಂಬುದರ ಮಾಹಿತಿ ಇಲ್ಲವಾದರೂ ಆಕೆಯನ್ನು ಹೆಸರಿಸಿದೆ ಎಂದರೆ ಪ್ರಮುಖ ಮಹಿಳೆ ಆಗಿರಲೇಬೇಕು. ಮಾಂಡಳಿಕ ಪದವಿಯ ಚೌಕಟ್ಟಿನಲ್ಲಿ ಬರುವ ಹಲವಾರು ರಾಜಕೀಯ ವಿಷಯದ ಅರಿವು ಆಕೆಗಿದ್ದು ಪತಿಗೆ ಸಲಹೆ ಸೂಚನೆಗಳನ್ನು ನೀಡುತ್ತಿದ್ದಿರಬೇಕು(ಕ. ವಿ.ಶಾ. ಸಂಪುಟ ೪, ಭಾಗ. ೨, ಮೇಧಕ್, ೫೯೫). ಮಾರಕ್ಕ ಅರಸ ಎಂಬ ಅಧಿಕಾರಿ ಬನವಾಸಿ ಆಳುತ್ತಿದ್ದಾಗ ಆತನ ಪತ್ನಿ ಬಿನತಿಅಬ್ಬೆ ಸಿಡೆನೂರು ಗ್ರಾಮದ ಆಡಳಿತ ನೋಡಿಕೊಳ್ಳುತ್ತಿದ್ದಳೆಂದು ಸಿಡೆನೂರು ಶಾಸನ ಮಾಹಿತಿ ಇದೆ(SII. XX, 10). ಚಿಕ್ಕಮಧುರೆ ಶಾಸನದಲ್ಲಿ ಸಿಂಗಪೋತ ರಾಜನು ನೊಳಂಬರಿಗೆ-೧೦೦೦, ನಿರ್ಗುಂದ ಆಳ್ವಿಕೆ ಮಾಡುತ್ತಿದ್ದಾಗ ಆತನ ಪತ್ನಿ ನೊಳಂಬೆ ಮಾಧವೆ ಈಕೆಗೆ ಮಹಾದೇವಿ ಅರಸಿ ಮತ್ತು ಪೆರ್ಮಾನಡಿ ಎಂಬ ಮಕ್ಕಳಿದ್ದರು. ಈ ರಾಜನಿಗೆ ನೊಳಂಬೆಯಲ್ಲದೆ ಮತ್ತೊಬ್ಬ ಪತ್ನಿಯಿದ್ದಳು. ಒಂದು ಗ್ರಾಮದ ಅಧಿಕಾರ ವಹಿಸಿ ಕೊಡುವುದರ ಮೂಲಕ ಈ ಇಬ್ಬರನ್ನು ಆಂತರಿಕ ಕಲಹದಿಂದ ದೂರ ಇಡುವ ಪ್ರಯತ್ನವಾಗಿದೆ(E.C. XI (ರೈ), ಚಳ್ಳಕೆರೆ, ೩೩).

ಗ್ರಾಮಗಳಲ್ಲಿ ಗಾವುಂಡರು ಒಂದು ಮನೆತನಕ್ಕೆ ಸೇರಿದವರಾಗಿರುತ್ತಾರೆ, ಗಾವುಂಡ ಪದವಿ ವಂಶಪಾರಂಪರ್ಯವಾಗಿತ್ತು. ಗಾವುಂಡ ಅಕಾಲಿಕವಾಗಿ ಮರಣ ಹೊಂದಿದಾಗ ಆ ಪದವಿಯನ್ನು ಕೆಲವೊಮ್ಮೆ ಪತ್ನಿಯರು ನಿಭಾಯಿಸಿದ್ದಾರೆ. ಬಂದಳಿಕೆ ಶಾಸನವೊಂದು ಇಂತಹ ಮಾಹಿತಿ ನೀಡುತ್ತದೆ ನಾಗರಖಣ್ಡ-೭೦ರ ನಾಳ್ಗಾವುಂಡನಾಗಿದ್ದ ನಾಗಾರ್ಜುನ ಯುದ್ಧದಲ್ಲಿ ಹೋರಾಡಿ ಮಡಿದಾಗ ರಾಜನು ನಾಗಾರ್ಜುನನ ಪತ್ನಿಗೆ ನಾಳ್ಗಾವುಂಡ ಪದವಿಯನ್ನಿತ್ತನು. ಆವತೂರಿನಲ್ಲಿ ನಾಗರಖಣ್ಡ-೭೦ರ ಮೇಲೆ ಅಧಿಕ ಸಾಲವಿದ್ದು ಆ ಸಾಲದ ಹೊರೆ ತೀರಿಸಲು ಜಕ್ಕಲಿತಲಿದ್ದ ನಾಲ್ಕು ಮತ್ತರು ಗದ್ದೆಯನ್ನು ದೇವಾಲಯಕ್ಕೆ ದಾನ ಮಾಡಿದಳು. ಜಕ್ಕಯಬ್ಬೆ ತನ್ನ ದೇಹದಲ್ಲಿ ಶಕ್ತಿ ಇರುವವರೆಗೂ ಆಡಳಿತ ನೋಡಿಕೊಂಡು ಶಕ್ತಿ ಕುಂದಿದ ಮೇಲೆ ತನ್ನ ಮಗಳಿಗೆ ಆಡಳಿತವೊಪ್ಪಿಸಿ ಬಂದಣಿಕೆ ತೀರ್ಥಕ್ಕೆ ಬಂದು ದೇಹತ್ಯಾಗ ಮಾಡಿದಳು ಎಂದು ಶಾಸನ ಮಾಹಿತಿ ಇದೆ.(E.C. VII(ರೈ), ಶಿವಮೊಗ್ಗ, ೧೮೭). ಜಕ್ಕಿಯಬ್ಬೆಗೆ ಗಂಡು ಸಂತಾನವಿಲ್ಲದ ಕಾರಣಕ್ಕೆ ಈ ಹುದ್ದೆ ದೊರಕಿರುವ ಸಾಧ್ಯತೆ ಇದೆ. ತನ್ನ ನಂತರ ಅಧಿಕಾರ ತನ್ನ ಮಗಳಿಗೆ ಹೋಗಿದೆ. ಪತಿ ಬದುಕಿದ್ದಾಗ ನಾಳ್ಗಾವುಂಡ ಅಧಿಕಾರ ವ್ಯಾಪ್ತಿಯಡಿಯಲ್ಲಿ

ಬರುವ ಕರ್ತವ್ಯ ನಿರ್ವಹಣೆಯ ಬಗ್ಗೆ ಯಾವುದೇ ಪೂರ್ವಜ್ಞಾನ ಇಲ್ಲದೆ, ಒಮ್ಮೆಲೇ ಅಧಿಕಾರ ದೊರೆತಾಗ ನಿಭಾಯಿಸುವುದು ಅವಳ ಅಂತರ್ಗತ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ. ಪತಿಯ ಆಡಳಿತವನ್ನು ನೋಡುವುದರ ಮೂಲಕ ಗ್ರಹಿಸಿಕೊಂಡಿರುವ ಸಾಧ್ಯತೆ ಇದೆ. ಗಾವುಂಡ, ನಾಳ್ಗಾವುಂಡ ಪದವಿ ವ್ಯಾಪ್ತಿಯಲ್ಲಿ ಯುದ್ಧವು ಒಳಗೊಂಡಿರಬಹುದು. ಗಾವುಂಡಿ ಪದವಿ ವ್ಯಾಪ್ತಿಯಲ್ಲಿ ಕಾನೂನು, ಯುದ್ಧ ಎರಡನ್ನೂ ಸ್ತ್ರೀಯರು ನಿರ್ವಹಿಸಬೇಕಿತ್ತು. ಕ್ರಿ.ಶ. ೧೦೪೧ರ ಸಿದ್ಧವನಹಳ್ಳಿಯ ವೀರಗಲ್ಲು ಲಕ್ಷ್ಮಮ್ಮ ಗಾವುಂಡಿ ಎಂಬ ಮಹಿಳೆ ಕುರಿತು ಮಾಹಿತಿ ನೀಡುತ್ತದೆ. ಈಕೆ ಗೋಗ್ರಹಣವನ್ನು ಎದುರಿಸಿ ಗೋವುಗಳನ್ನು ಬಿಡಿಸಿ ತಂದು ಮರಣ ಹೊಂದುತ್ತಾಳೆ. "ಮಾಚಗಾವುಂಡನ ಮಗಳ್ ಲಕ್ಷ್ಮಮ್ಮ ಗಾವುಂಡಿ ಸಜಿಕ್ಕನೂಜಿ ಎರ್ಮೆ ತುರು ಪರಿಗಟ್ಟಿ ಪಯಲ್ವರಿದು ಪಗಿ ಎರೆಯಲ್ಪಟ್ಟ ಕಾದಿ ತುರುವಂ ಮಗುಬಿಚು ಸತ್ತು ಸ್ವರ್ಗ." ಇಲ್ಲಿ ಗಾವುಂಡಿ ಪದವಿ ತಂದೆಯಿಂದ ಮಗಳಿಗೆ ಬಂದ ಮಾಹಿತಿ ಶಾಸನದಲ್ಲಿದೆ. ಪುರುಷ ಸಂತಾನವಿರದ ಕಾರಣದಿಂದಲೂ ಈಕೆಗೆ ಗಾವುಂಡಿ ಪದವಿ ದೊರೆತಿರಬಹುದು(E. C. IV, ಹೊಸಪೇಟೆ ೧೧). ತುರುಗೋಳ್ ಕದನದಲ್ಲಿ ಪುರುಷರೇ ಹೋರಾಡಿ ಬಿಡಿಸಿಕೊಂಡು ಬರುವುದನ್ನು ನಾವು ಶಾಸನಗಳಲ್ಲಿ ಅಧ್ಯಯನ ಮಾಡಿದ್ದೇವೆ. ಆದರೆ ಇದೊಂದು ಅಪರೂಪದ ಶಾಸನ. ಸ್ತ್ರೀಯರು ಹೋರಾಟದಂತಹ ಪ್ರಸಂಗಗಳು ಬಂದಾಗ ದಿಟ್ಟತನದಿಂದ ಎದುರಿಸುತ್ತಿದ್ದರು. ಅವಳು ರಕ್ಷಣೀಯಳಲ್ಲ ರಕ್ಷಕಳು ಎಂಬುದಕ್ಕೆ ಈ ಶಾಸನ ಸಾಕ್ಷಿಯಾಗಿದೆ.

ಹಿಂದಿನ ಶಾಸನದಲ್ಲಿ ತುರುಗಳನ್ನು ಸೆರೆಯಿಂದ ಬಿಡಿಸಿ ತಂದ ಮಾಹಿತಿ ಇದ್ದರೆ, ಕ್ರಿ.ಶ. ೧೨೦೬ರ ಕೆಂಭಾಳು ಶಾಸನವೊಂದು ಸ್ತ್ರೀಯರು ಗೋಗ್ರಹಣವನ್ನು ಮಾಡಿದ ವಿಷಯವಿದೆ. ಶತ್ರುಗಳ ಸಂಪತ್ತಾದ ಗೋವುಗಳನ್ನು ಸೆರೆ ಹಿಡಿದು ಮತ್ತೆ ಕರುಣೆ ಉಕ್ಕಿ ಅವನ್ನು ಬಿಡುಗಡೆಗೊಳಿಸಿದ ಉಲ್ಲೇಖವಿದೆ(E.C. V, ಚನ್ನರಾಯಪಟ್ಟಣ, ೨೦೫). ಗಾವುಂಡಿ ಪದವಿ ಹೊಂದಿದಂತೆ ಉನ್ನತ ಪದವಿಯನ್ನು ಹೊಂದಿ ಕರ್ತವ್ಯ ನಿರ್ವಹಿಸಿದ ಮಹಿಳೆಯರು ಇರುವರು. ಮೂರನೇ ನರಸಿಂಹನ ಆಳ್ವಿಕೆಯ ಅವಧಿಯ ಭೈರಾಪುರ ಶಾಸನ ಮಹಾಪ್ರಧಾನ ಸೋಮಯ್ಯ ದಂಡನಾಯಕನಾಗಿದ್ದ ಈತನ ಸೋದರಿ ರೇಕವ್ವೆ ದಂಡನಾಯಕಿತಿ ಆಗಿದ್ದಳು. ಇವರಿಬ್ಬರೂ ಹೆಗ್ಗಡೆನಾಯಕ ಮತ್ತು ರೇಖಾದೇವಿಯರ ಮಕ್ಕಳು. ಅಕ್ಕ–ತಮ್ಮಂದಿರಿಬ್ಬರೂ ಆಡಳಿತ ಮತ್ತು ಯುದ್ಧ ತರಬೇತಿಯನ್ನು ಒಟ್ಟಿಗೆ ಪಡೆದಿರುವ ಸಾಧ್ಯತೆ ಇದೆ. ತಮ್ಮನಂತೆ ಉನ್ನತ ಪದವಿ ಹೊಂದಿರಲು ಇದು ಕಾರಣವಾಗಿರಬಹುದು(E.C. XI, ಕೃಷ್ಣರಾಜ ಪೇಟೆ, ೯೮).

ಕ್ರಿ.ಶ. ೧೧೯೯ರ ನೀಲಗುಂದ ಶಾಸನವೊಂದು ತೊಂಗಲೆನಾಡಿನ ಸಾಮಂತನ ಹೆಂಡತಿ ಚಾಗಲದೇವಿ ಇಬ್ಬರು ಗಾವುಂಡರ ಮೇಲೆ ದಾಳಿ ಮಾಡಿದ ಮಾಹಿತಿ ನೀಡುತ್ತದೆ(ಕ.ವಿ. ಶಾ. ಸಂಪುಟ–೯, ಹುನುಗುಂದ ೨೩). ಅಂದರೆ ಇವರು ಅನ್ಯರಾಜ್ಯದ ಗಾವುಂಡರಾದರೆ

ಆಕೆ ಅನ್ಯರಾಜ್ಯದ ಮೇಲೆ ದಾಳಿ ಮಾಡಿದಂತಾಗುತ್ತದೆ. ತಮ್ಮ ರಾಜ್ಯದ ಗಾವುಂಡರಾಗಿದ್ದರೆ ಆಂತರಿಕ ಕ್ಷೋಭೆಯನ್ನು ನಿವಾರಿಸಲು ಯುದ್ಧದ ಮೂಲಕ ಅವರಿಗೆ ಪಾಠ ಕಲಿಸಿದಂತಾಗುತ್ತದೆ. ಆದರೂ ಆಡಳಿತದಲ್ಲಿ ಶಾಂತಿಯನ್ನು ಕಾಪಾಡುವುದಕ್ಕಾಗಿ ಮಾಡಿದ್ದಾಗಿದೆ. ಇಲ್ಲಿ ಪತಿಯ ಅನುಪಸ್ಥಿತಿ ಇದೆ. ಈ ದಾಳಿಯಲ್ಲಿ ಗಾವುಂಡರಿಬ್ಬರೂ ಮರಣವನ್ನಪ್ಪಿದ್ದಾರೆ. ಅಂದರೆ ಯುದ್ಧ ನಡೆದಿರಲೇಬೇಕಾದ ಸಾಧ್ಯತೆ ಇದೆ. ಕ್ರಿ.ಶ. ೧೧೩೦ರ ಗಂಗರಾಜನ ಕಾಲದ ಶಾಸನವೊಂದು ಗಂಗರಾಜನ ದಂಡನಾಯಕಿತ್ತಿಯಾಗಿದ್ದ ದಿಮ್ಮಿಯಕ್ಕ ಎಂಬಾಕೆ ಸನ್ಯಾಸದಿಂದ ಮರಣ ಹೊಂದಿದ ಬಗ್ಗೆ ಮಾಹಿತಿ ಇದೆ(E.C. II, ಶ್ರವಣಬೆಳಗೊಳ, ೧೩೮). ದಂಡನಾಯಕಿತ್ತಿ ಪದವಿ ಒಂದು ಸಾಮ್ರಾಜ್ಯದ ಸೈನ್ಯದ ಮುಂದಾಳತ್ವ ವಹಿಸಿಕೊಳ್ಳುವಂತದ್ದು. ಅಂದರೆ ದಿಮ್ಮಿಯಕ್ಕ ಯುದ್ಧಭೂಮಿಯಲ್ಲಿ ಹೋರಾಟ ಮಾಡುವ ಶಕ್ತಿ ಸಾಮರ್ಥ್ಯ ಹೊಂದಿರಲೇಬೇಕಾದ್ದು ಸಾಮಾನ್ಯ. ಮಂಡಲಗಳ ಆಡಳಿತ ನಿರ್ವಹಿಸುತ್ತಿದ್ದ ಮಹಾಮಂಡಲೇಶ್ವರರ ಪತ್ನಿಯರು ಕೆಲವೊಮ್ಮೆ ಗ್ರಾಮಗಳ ಆಡಳಿತ ನಿರ್ವಹಿಸುತಿದ್ದುದುಂಟು. ಲಕ್ಷ್ಮಿದೇವರಸ ವೇಣುಗ್ರಾಮವನ್ನು ಆಳುತ್ತಿದ್ದಾಗ ಆತನ ಪತ್ನಿ ಲಲಿತೆಯದೇವಿ ಮಟ್ಟವಾಡದ ಅಧಿಕಾರ ವಹಿಸಿಕೊಂಡಿದ್ದಳು (ವಸಂತಲಕ್ಷ್ಮಿ ಕೆ.(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೮). ಚಾಲುಕ್ಯದೊರೆ ಜಗದೇಕಮಲ್ಲನ ದಂಡನಾಯಕ ವಾವಣರೂರನ ಮಡದಿ ರೇವಕಬ್ಬರಸಿ ಪೊಳವೂರಿನ ಆಡಳಿತ ನಿರ್ವಹಿಸುತ್ತಿದ್ದು, ಈಕೆ 'ಮಹಾಪಸಾಯಿತೆ' ಎಂಬ ಬಿರುದು ಹೊಂದಿದ್ದಳು. ಸ್ತ್ರೀಯರಿಗೆ ಆಡಳಿತದಲ್ಲಿ ದೊರಕಿಸಿಕೊಟ್ಟ ಅವಕಾಶಗಳು ಕಡಿಮೆ. ದೊರೆತ ಅವಕಾಶವನ್ನು ಸಮರ್ಥವಾಗಿ ನಿರ್ವಹಿಸಿರುವರು(ವಸಂತಲಕ್ಷ್ಮಿ ಕೆ.(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೮). ಆಡಳಿತ ವಿವಿಧ ಶಾಖೆಗಳನ್ನು ಒಳಗೊಂಡಿರುತ್ತದೆ. ಅದರಲ್ಲಿ ಹಣಕಾಸು ಒಂದು ಜವಾಬ್ದಾರಿಯುತ ವಿಭಾಗ. ಅಂಥ ಜವಾಬ್ದಾರಿ ಸ್ಥಾನ ನಿರ್ವಹಿಸಿದ ಸ್ತ್ರೀಯರು ಇದ್ದಾರೆ. ಗೋವೆ ಕದಂಬರ ಆಳ್ವಿಕೆಯಲ್ಲಿ ತೆರಿಗೆ ಸಂಗ್ರಹಣ ಅಧಿಕಾರಿಣಿ ಇದ್ದಳು. ಇತಿಹಾಸದಲ್ಲಿ ದೊರೆತ ಅಪರೂಪದ ಮಾಹಿತಿ ಇದು. ಶತಮಾನಗಳಿಂದಲೂ ಸ್ತ್ರೀಯನ್ನು ಹಣಕಾಸಿನ ವಿಷಯದಲ್ಲಿ ಅಸಮರ್ಥಳೆಂದು ದೂರವಿರಿಸಲಾಗಿದೆ. ಅವಳಿಗೆ ಅವಕಾಶವನ್ನೇ ಕೊಟ್ಟಿರುವುದಿಲ್ಲ. ಅವಳಿಗೆ ಸಾಮರ್ಥ್ಯವಿದೆ. ಆದರೆ ಜವಾಬ್ದಾರಿ ಕೊಡುವ ಮನಸ್ಸು ಪುರುಷನಿಗಿಲ್ಲ(ವಸಂತಲಕ್ಷ್ಮಿ ಕೆ.(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೮). ಹಣಕಾಸಿನ ವಿಭಾಗದಲ್ಲಿ ತೆರಿಗೆ ಸಂಗ್ರಹಣೆ ಲೆಕ್ಕಾಚಾರದ ಕ್ಲಿಷ್ಟ ವಿಷಯವಾದರೂ ಅದು ಆಡಳಿತದಲ್ಲಿ ಸಣ್ಣ ಹುದ್ದೆಯಾಗಿದೆ. ಅದೇ ಶಾಖೆಯಲ್ಲಿ ಉನ್ನತ ಹುದ್ದೆ ಮಹಾಸುಂಕಾಧಿಕಾರಿಯದು. ಅಂಥ ಉನ್ನತ ಹಣಕಾಸಿನ ಸ್ಥಾನದಲ್ಲೂ ಸ್ತ್ರೀಯರು ತಮ್ಮ ಬುದ್ಧಿವಂತಿಕೆ ಮೆರೆದಿದ್ದಾರೆ. ಲಕ್ಷ್ಮಾದೇವಿ ಹಲಸಿಗೆ ೧೨೦೦ದ ಮಹಾಸುಂಕಾಧಿಕಾರಿ ಯಾಗಿದ್ದಳು(ವಸಂತಲಕ್ಷ್ಮಿ ಕೆ.(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೮).

ರಾಜ್ಯದ ಸರ್ವಾಧಿಕಾರಿ ರಾಣಿಯರು ರಾಜನ ಸಹವರ್ತಿಗಳಾಗಿದ್ದರು. ಆಡಳಿತದಲ್ಲಿ ಕೆಲವೊಮ್ಮೆ ಸಲಹೆಗಳನ್ನು ನೀಡುತ್ತಿದ್ದರಷ್ಟೆ ಆ ಸಲಹೆಗಳಿಗೆ ಮನ್ನಣೆ ನೀಡಿ ಸ್ವೀಕರಿಸಲಾಗುತ್ತಿತ್ತೇ ಅಥವಾ ಇಲ್ಲವೇ? ಸ್ವೀಕರಿಸಿದರೂ ಅದು ಬಹಿರಂಗವಾಗಿ ಅಲ್ಲದಿರಬಹುದು. ಆದರೆ ಯಾದವ ಸಿಂಘಣನ ಆಳ್ವಿಕೆಯಲ್ಲಿ ವಿಜಾಪುರದ ಆಡಳಿತ ಹೊಣೆ ಹೊತ್ತಿದ್ದ ಭಾಗುಬಾಯಿಯನ್ನು 'ಸರ್ವಾಧಿಕಾರಿ ಭಾಗುಬಾಯಿ' ಎಂದು ಕರೆಯಲಾಗಿದೆ(SII. XVIII, 377). ರಾಜ ನೇಮಿಸಿದ ಅಧಿಕಾರಿಯೇ ಆಗಿದ್ದರೂ ಆ ಪ್ರದೇಶದಲ್ಲಿ ಸರ್ವಾಧಿಕಾರಿಯಂತೆ ಆಡಳಿತ ಹಿಡಿತ ಹೊಂದಿರಲೇಬೇಕು. ಅಲ್ಲದೆ ಕಠಿಣ ಕಾನೂನು, ಶಿಸ್ತಿನ ಆಡಳಿತ ರಾಜ್ಯಕ್ಕೆ ಸಹಾಯಕ ವಾಗಿರುವುದರಿಂದ ಆ ಪ್ರದೇಶದಲ್ಲಿ ಸಂಪೂರ್ಣ ಹಸ್ತಕ್ಷೇಪ ರಹಿತ ಸ್ವಾತಂತ್ರ್ಯ ಆಕೆಗಿತ್ತಿರಬಹುದು. ಭಾಗುಬಾಯಿಯ ಆಡಳಿತ ಮೆಚ್ಚಿ ಈ ಬಿರುದು ನೀಡಿರುವ ಸಾಧ್ಯತೆ ಇದೆ. ಇಲ್ಲದಿದ್ದರೆ ಬಿಜಾಪುರದ ಶಾಸನದಲ್ಲಿ ಈ ಅಪರೂಪದ ಶಬ್ದ ಬಳಕೆ ಅಸಾಧ್ಯ. ದೇವಗಿರಿಯನ್ನು ಸಂದರ್ಶಿಸಿದ ಇಬ್ನ ಬತೂತ ಅಲ್ಲಿಯ ಸ್ತ್ರೀಯರ ಬಗ್ಗೆ ಮೆಚ್ಚುಗೆ ಮಾತಾಡಿದ್ದಾನೆ. 'ಲೇಖಪದ್ಧತಿ' ಎನ್ನುವ ಸಮಕಾಲೀನ ಗ್ರಂಥದಲ್ಲಿ ಇದೇ ರೀತಿಯ ಮಾಹಿತಿ ದೊರಕುತ್ತದೆ. ಸ್ತ್ರೀಯರು ಸಾರ್ವಜನಿಕ ಕಾರ್ಯದಲ್ಲಿ ಭಾಗವಹಿಸುತ್ತಿದ್ದರು. ಅದರಲ್ಲಿ ಭಾಗೂಬಾಯಿ ಜೊತೆಗೆ ಮೈಲೂಬಾಯಿ, ಪದ್ಮಲದೇವಿ ಮುಂತಾದ ಸ್ತ್ರೀಯರು ರಾಜ್ಯದ ಆಡಳಿತದಲ್ಲಿಯೂ ಭಾಗವಹಿಸುತ್ತಿದ್ದರು(ನರಸಿಂಹಮೂರ್ತಿ ಎ. ವಿ.; ಕರ್ನಾಟಕದ ಸೇವುಣರ ಇತಿಹಾಸ, ಪುಟ ೧೧೪).

ಆಡಳಿತಕ್ಕೆ ಸಂಬಂಧಿಸಿದಂತೆ ರಾಣಿಯರ ಸಲಹೆ ಸೂಚನೆಗಳನ್ನು, ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಅಭಿಪ್ರಾಯಗಳನ್ನು ಕೇಳುವುದು, ಹೀಗೆ ಮಾಡಿದರೆ ಪುರುಷ ಸ್ವಾಭಿಮಾನಕ್ಕೆ ಧಕ್ಕೆಯಾದಂತೆ. ಸ್ತ್ರೀಯರಿಗೆ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯವಿಲ್ಲ ಎಂಬುದು ಪೂರ್ವಗ್ರಹವಾಗಿದೆ. ಒಂದು ವೇಳೆ ತೆಗೆದುಕೊಂಡರೂ ಬಹಿರಂಗವಾಗಿ ವ್ಯಕ್ತಪಡಿಸುವುದಿಲ್ಲ. ಆದರೆ ಇಲ್ಲೊಂದು ಶಾಸನ ಮಾಹಿತಿ ಅಂಥ ಸೂಕ್ಷ್ಮ ವಿಚಾರವನ್ನು ಉಲ್ಲೇಖಿಸಿದೆ. ಪಶ್ಚಿಮ ಚಾಲುಕ್ಯ ದೊರೆ ತೈಲಪನ ದಂಡನಾಯಕ ಎರಿಯಾಲ ಎರ್ರನ ಪತ್ನಿ ಕಾಮವಾಸನಿ ಕಾಕತೀಯ ವಂಶ ಪುನಃ ಆಳ್ವಿಕೆಗೆ ಬರಲು ಕಾರಣಳಾದಳು. ಕಾಕತೀಯ ದೊರೆ ಉಂಡುರಾಜನು ಆಂಧ್ರದ ಕೊರವಿ ಮಂಡಲವನ್ನು ಆಳ್ವಿಕೆ ಮಾಡುತ್ತಿದ್ದಾಗ, ಚಾಲುಕ್ಯ ದಂಡನಾಯಕ ಎರಿಯಾಲ ಗುಂಡುರಾಜನನ್ನು ಯುದ್ಧದಲ್ಲಿ ಕೊಂದು, ಬೊಟ್ಟುಬೇದ ಎಂಬುವನನ್ನು ಕೊರವಿ ಆಡಳಿತ ನಿರ್ವಹಣೆಗೆ ನೇಮಿಸುವುದರಲ್ಲಿದ್ದ. ಇದು ಕಾಕತೀಯ ವಂಶದ ನಿರ್ನಾಮದ ಸಂದಿಗ್ಧ ಸಮಯ. ಇಂಥ ಕ್ಲಿಷ್ಟ ಸಂದರ್ಭದಲ್ಲಿ ಕಾಮವಾಸಿನಿ ಪತಿಗೆ ಕಾಕತೀಯ ವಂಶದವರನ್ನೇ ಅಧಿಕಾರಕ್ಕೆ ತರುವುದು ನ್ಯಾಯ ಸಮ್ಮತವಾದುದು ಎಂದು ಮನವೊಲಿಕೆ ಮಾಡುತ್ತಾಳೆ. ಆಗ ಎರಿಯಾಲ ಕಾಕತೀಯ ವಂಶದ ಗುಂಡುರಾಜನ ಮಗ ಗರುಡ ಬೇಟನನ್ನು ಕೊರವ ಮಂಡಲಕ್ಕೆ ನೇಮಿಸುತ್ತಾನೆ. ಸೂಕ್ಷ್ಮ ಸಂದರ್ಭದಲ್ಲಿ ಸರಿಯಾದ ನಿರ್ಧಾರ ತೆಗೆದುಕೊಂಡಿದ್ದರಿಂದ

ಆಗುತ್ತಿದ್ದ ಅವಗಡ ತಪ್ಪಿಸಿದಳು. ಇಂಥ ದೊಡ್ಡ ಘಟನೆಗಳ ಹಿಂದೆ ಸ್ತ್ರೀಯರ ವಿಚಾರಗಳಿರುವುದು ಬೆಳಕಿಗೆ ಬರುವುದೇ ಇಲ್ಲ(ವಸಂತಲಕ್ಷ್ಮಿ ಕೆ.(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೯). ಇಂಥ ಸಂದರ್ಭವನ್ನು ಬಳಕೆ ಮಾಡಿಕೊಂಡೇ ಸಲಹೇಶು ಮಂತ್ರಿಯೆಂದು ಮಂತ್ರಿ ಸ್ಥಾನಕ್ಕೆ ಹೋಲಿಸಲಾಗಿದೆ. ಆದರೂ ಬೌದ್ಧಿಕವಾಗಿ ಅಧೀನವಾಗಿರುವಳು. ಆದರೆ ಗಂಡಿಗೆ ತಾನು ತೆಗೆದುಕೊಂಡ ಸಲಹೆ ಹೆಣ್ಣಿನಿಂದ ಎಂದರೆ ಅವನ ಅತ್ಮಗೌರವಕ್ಕೆ ಧಕ್ಕೆಯಾದಂತೆ ಎಂದು ಭಾವಿಸಿದ್ದಾನೆ. ಮಾರ್ಗದರ್ಶನದ ಹಿಂದೆ ಹೆಣ್ಣು ಇದ್ದರೂ ಅದನ್ನು ಹೊರಗಿನ ಸಮಾಜಕ್ಕೆ ವ್ಯಕ್ತಪಡಿಸುವದಿಲ್ಲ. ಅವಳ ಬುದ್ಧಿವಂತಿಕೆಗೆ ತಾನು ಶರಣಾಗುವುದನ್ನು ಇಷ್ಟಪಡುವುದಿಲ್ಲ. ಸ್ತ್ರೀಯರನ್ನು ಭಾವನಾತ್ಮಕ ವಲಯದಲ್ಲಿ ಗುರುತಿಸಿರುವುದರಿಂದ ಅವನ ಬೌದ್ಧಿಕ ವಲಯಕ್ಕೆ ಧಕ್ಕೆಯಾಗುತ್ತದೆ.

ಆಡಳಿತಾತ್ಮಕ ವಿಚಾರಗಳಿಗೆ ಸಂಬಂಧಿಸಿದಂತೆ ಶಾಸನಗಳನ್ನು ಅಧ್ಯಯನ ಮಾಡಿದಾಗ, ಅದರಲ್ಲೂ ಪುರುಷರಿಗೆ ಹೋಲಿಸಿದಾಗ ಸ್ತ್ರೀಯರು ಆಡಳಿತ ನಿರ್ವಹಿಸಿದ ಕುರಿತು ಮಾಹಿತಿ ನೀಡುವ ಶಾಸನಗಳು ತೀರ ವಿರಳ. ಅಂದರೆ ಇದಕ್ಕೆ ಕಾರಣ ಸ್ತ್ರೀಯರಿಗೆ ರಾಜಕೀಯ ಚಟುವಟಿಕೆಯಲ್ಲಿ ನೀಡಿದ ಪ್ರಾತಿನಿಧ್ಯ ಕಡಿಮೆ. ಪ್ರಮುಖ ವಿಚಾರಗಳ ಚರ್ಚೆಯಲ್ಲಿ ಅವರ ಉಪಸ್ಥಿತಿ ಇರುತ್ತಿತ್ತಷ್ಟೆ. ಅವರಿಗೆ ಮನ್ನಣೆ ಇರುತ್ತಿರಲಿಲ್ಲ. ಅವರಲ್ಲಿ ಸಾಮರ್ಥ್ಯ ವಿರಲಿಲ್ಲವೆಂದೇನಿಲ್ಲ. ಆದರೆ ಪ್ರಾತಿನಿಧ್ಯವಿರಲಿಲ್ಲ. ಪುರುಷರಂತೆ ಅಧಿಕಾರಗಳು ಸುಲಭವಾಗಿ ದೊರೆಯುತ್ತಿರಲಿಲ್ಲ. ರಾಜನಿಗೆ ಒಬ್ಬ ಅಸಮರ್ಥ ಪುತ್ರನಿದ್ದರೆ ವಂಶಪಾರಂಪರ್ಯವಾಗಿ ಯುವರಾಜನಾಗಿಯೋ ಅಥವಾ ಮಾಂಡಲಿಕನಾಗಿಯೋ ಅಧಿಕಾರ ತಂತಾನೆ ಹಸ್ತಾಂತರವಾಗುತ್ತದೆ. ಆಡಳಿತ ಸಾಮರ್ಥ್ಯ ಇಲ್ಲದೇ ಹೋದರೂ ಆತನ ಅಧಿಕಾರ ಪ್ರಶ್ನಾತೀತ. ಹೀಗಾಗಿಯೇ ಇತಿಹಾಸದಲ್ಲಿ ಎಷ್ಟೋ ರಾಜರು ಮದ್ಯವ್ಯಸನಿಗಳು, ವಿಲಾಸಿಗಳು, ಭ್ರಷ್ಟರು ಆಡಳಿತದಲ್ಲಿ ದಾಖಲಾಗಿ ಉಳಿದಿರುವುದು. ಅವನು ಹೇಗೆ ಇದ್ದರೂ ರಾಜ ಪದವಿ ಅವನದೇ. ಆದರೆ ಅದಕ್ಕೆ ಬದಲಾಗಿ ಒಬ್ಬ ಸಮರ್ಥ ಮಗಳಿದ್ದರೂ ರಾಣಿಯಾಗಿ ರಾಜ್ಯದ ಪರಮಾಧಿಕಾರಿಣಿಯಾಗಲು ಸಾಧ್ಯವಿಲ್ಲ. ಇದು ಪುರುಷಪ್ರಧಾನ ಸಮಾಜ. ಅವಳ ಅಧೀನದಲ್ಲಿ ಕಾರ್ಯ ನಿರ್ವಹಿಸಲು ಪುರುಷ ಸಮಾಜ ಒಪ್ಪುವುದಿಲ್ಲ.

ರಾಜನ ಆಸ್ಥಾನದಲ್ಲಿ ರಾಣಿಯರು ಕೂಡ ಕೆಲವೊಮ್ಮೆ ದೊರೆಗಳಷ್ಟೇ ಮಹತ್ವದ ಪಾತ್ರವನ್ನು ವಹಿಸುತ್ತಿದ್ದರು ಎಂದು ಹೇಳಲಾಗುತ್ತಿದೆಯಾದರೂ ರಾಜನಿಗೆ ದೊರೆತ ಮಾನ್ಯತೆ ಅವರಿಗೆ ದೊರೆಯಲಿಲ್ಲ. ಅಧಿಕಾರದಲ್ಲಿದ್ದರೂ ಸ್ವತಂತ್ರ ತೀರ್ಮಾನ ಕೈಗೊಳ್ಳುವಷ್ಟು ಸ್ವಾಮಿತ್ವ ಅವರಿಗಿರಲಿಲ್ಲ. ರಾಜಮನೆತನಕ್ಕೆ ಸೇರಿದ ಅಕ್ಕಾದೇವಿಯಂತವರು ಪ್ರಾಂತಗಳ ಆಳ್ವಿಕೆ ಮಾಡಿದರೆ ಹೊರತು ರಾಜ್ಯದ ರಾಣಿಯಾಗಿ ಅಧಿಕಾರ ವಹಿಸಿಕೊಳ್ಳಲಿಲ್ಲ. ಶಾಸನದಲ್ಲಿ ಉಲ್ಲೇಖಿಸಿದಂತೆ ಅಕ್ಕಾದೇವಿ ಆಡಳಿತವಷ್ಟೇ ಅಲ್ಲ, ಯುದ್ಧಭೂಮಿಯಲ್ಲೂ ಹೋರಾಡುತ್ತಿದ್ದಳು. ಆದರೂ ಆಕೆಯನ್ನು ಸ್ತ್ರೀ ಪರಿಮಿತಿಯಲ್ಲೇ ನೋಡಲಾಗಿದೆ. ಆಡಳಿತದಲ್ಲಿ ಒಂದು ಸ್ವತಂತ್ರ ಅಸ್ತಿತ್ವ

ದೊರಕಿಸಿಕೊಟ್ಟಿಲ್ಲ. ಮೇಲ್ನೋಟಕ್ಕೆ ಆಡಳಿತ ನಡೆಸಿದ್ದಳೆಂದೇ ಹೇಳಲಾಗುತ್ತದೆಯಾದರೂ ರಾಜ್ಯದ ಕಾನೂನು, ಧರ್ಮ, ಆಡಳಿತದಂಥ ವಿಚಾರಕ್ಕೆ ಬಂದಾಗ ತನ್ನವೆನ್ನುವ ವಿಚಾರಗಳನ್ನು ಜಾರಿಗೆ ತರಲು ಅವಕಾಶವಿರಲಿಲ್ಲ. ಆ ಹುದ್ದೆಯಲ್ಲಿ ಕುಳಿತು ರಾಜ್ಯ ಶಾಸನಗಳನ್ನು ಮುಂದುವರಿಸಿಕೊಂಡು ಹೋಗುವುದಷ್ಟೇ ಆಕೆಗಿದ್ದ ಅಧಿಕಾರ. ಅದೇ ಒಬ್ಬ ದೊರೆಯ ವಿಷಯದಲ್ಲಿ ಹೀಗಿರುವುದಿಲ್ಲ. ಅಗ್ರಹಾರ, ವಿಷಯ, ಭತ್ತಗ್ರಾಮ, ನಾಡು, ಗ್ರಾಮ ಈ ಎಲ್ಲ ವಿಭಾಗಗಳಲ್ಲಿ ಸಾಮಾನ್ಯ ಮಹಿಳೆಯರು ಕಾರ್ಯ ನಿರ್ವಹಿಸುತ್ತಿದ್ದ ಬಗ್ಗೆ ಶಾಸನ ಮಾಹಿತಿ ಇದೆ. ದೊರೆತ ಶಾಸನಗಳು ಅವರ ಆಳ್ವಿಕೆ ಕ್ಷೇತ್ರವನ್ನು ಮಾತ್ರ ಸೂಚಿಸಿವೆಯೇ ಹೊರತು ಆಡಳಿತ ಸ್ವರೂಪವನ್ನಾಗಲಿ, ಇಂಥ ಒಂದು ಪ್ರದೇಶವೆನ್ನಲಾಗಿದೆ ಹೊರತು ವಿಸ್ತಾರವನ್ನು ದಾಖಲಿಸಿಲ್ಲ. ಅವರು ಜಾರಿಗೆ ತಂದ ಕಾನೂನನ್ನಾಗಲಿ, ಶಾಸನಗಳನ್ನಾಗಲಿ, ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ ಮೂರು ಪುರುಷರ ಕೈಯಲ್ಲೇ ಇದ್ದವು. ಸ್ತ್ರೀಯರು ಅಲ್ಲಲ್ಲಿ ಆಡಳಿತದ ಕೆಲವು ಸ್ಥಾನಗಳಲ್ಲಿ ಕಾರ್ಯ ನಿರ್ವಹಿಸಿರುವರು. ಅಷ್ಟೇ ಮಾಹಿತಿಯನ್ನು ಶಾಸನಗಳು ನೀಡುವಲ್ಲಿ ಮೌನ ವಹಿಸಿರುವುದು ವಿಮರ್ಶೆಗೆ ದಾರಿ ಮಾಡಿವೆ.

ಇತಿಹಾಸದಲ್ಲಿ ಸ್ತ್ರೀಯರು ರಾಜಕೀಯ ಚಟುವಟಿಕೆಯಲ್ಲಿ ಭಾಗವಹಿಸಿದ್ದರು. ವಿವಿಧ ಹುದ್ದೆಗಳನ್ನು ಹೊಂದಿದ್ದರು ಎಂದು ಒಂದು ಸಾಮೂಹಿಕ ಹೇಳಿಕೆ ನೀಡುವುದು ಎಷ್ಟು ಸರಿ? ಹಾಗೆ ಅಧಿಕಾರ ಹೊಂದಿದ್ದವರಲ್ಲಿ ಪ್ರತಿಶತ ಎಷ್ಟು ಮಹಿಳೆಯರು. ಅವರು ಅಧಿಕಾರಕ್ಕೆ ಬರುವ ಕಾರಣಗಳು ಅನಿವಾರ್ಯದ ಮೂಲವನ್ನು ಹೊಂದಿದ್ದವು. ಸಮಾಧಾನದ ನೆಪವೂ ಆಗಿದ್ದವು. ಕುಟುಂಬಕ್ಕೆ ಆರ್ಥಿಕ ನೆರವಿನ ರೂಪದಲ್ಲಿ ಹೆಸರಿಗೆ ಮಾತ್ರ ನೀಡಿದ ಸ್ಥಾನವೂ ಆಗಿರಬಹುದು. ಇನ್ನು ಅಧಿಕಾರ ಹೊಂದಿದ್ದವರಾದರೂ ನೈಜ ಅಧಿಕಾರ ಹೊಂದಿದ್ದರೆ, ಇಲ್ಲವೇ ನಾಮಮಾತ್ರಕ್ಕೆ ಎಂಬ ಅನುಮಾನ ಕೆಲವು ಶಾಸನಗಳ ಅಧ್ಯಯನದಿಂದ ಸುಳಿಯುತ್ತದೆ. ಅಧಿಕಾರ ವರ್ಗದವರಲ್ಲಿದ್ದ ಸ್ತ್ರೀಯರ ಹಿಂದೆ ಪುರುಷನ ಬಲಿಷ್ಠ ಕೈಗಳು ಇದ್ದವೆಂಬ ಅನುಮಾನಕ್ಕೆ ಎಡೆ ಮಾಡಿವೆ. ಅಕ್ಕಾದೇವಿಯಂತ ಪ್ರಬಲ ರಾಣಿಗೆ ಮಹಾಸಾಮಂತ ಅಜ್ಜರಭೂಮಿ ಪೆರ್ಗಡೆ ನಾಗದೇವಯ್ಯ(SII. XI, 91) ಇದ್ದರು. ಚಾಲುಕ್ಯ ಪಟ್ಟಮಹಾದೇವಿಯ ಮನೆವೆರ್ಗಡೆ ದಂಡನಾಯಕ ಶ್ರೀಧರನಿದ್ದನು. ಕದಂಬ ಜಯಕೇಶಿಯ ರಾಣಿ ಮೈಳಲಾದೇವಿಯ ಮಹಾಪ್ರಧಾನ ಅಂತಃಪುರಾಧ್ಯಕ್ಷ ಪಸಾಯಿತ ದಂಡನಾಯಕ ಲಕ್ಕರಸ, ಮತ್ತೊಬ್ಬ ಮನೆವೆರ್ಗಡೆ ಪಸಾಯಿತ ದಂಡನಾಯಕ ಮಹಾಪ್ರಧಾನ ಸಿಂಗಮರಸ ಎಂಬ ಇಬ್ಬರು ಇದ್ದರೆಂದು ನರೇಂದ್ರ ಶಾಸನ ಉಲ್ಲೇಖಿಸುತ್ತದೆ(ವಸಂತಲಕ್ಷ್ಮಿ ಕೆ.(ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೯). ಶಿರೂರು ಶಾಸನದಲ್ಲಿ ಭಾಗಲಾಮಹಾದೇವಿಯ ಮಾಂಡಳಿಕ ಪೆರ್ಗಡೆ ಮಾರ್ತಂಡಯ್ಯ ಸೇನಬೋವ ಇದ್ದನು(SII. XI, 206).

ಸ್ತ್ರೀಯರು ನೈಜವಾಗಿ ಅಧಿಕಾರ ಹೊಂದಿದ್ದರೆ ಎಂಬುದು ಅವರಿಗಿತ್ತ ಆರ್ಥಿಕ ಸ್ವಾಮ್ಯದ ಮೇಲೆ ಹೇಳಬಹುದು. ರಾಣಿಯರಿಗೆ ಅಧಿಕಾರ ಕೊಟ್ಟರೂ ಅವರ ಭಂಡಾರ ನೋಡಿಕೊಳ್ಳಲು

ಮೇಲ್ವಿಚಾರಕನನ್ನು ನೇಮಕ ಮಾಡುತ್ತಿದ್ದರು. ದೊರೆಗಳು ವಿಕ್ರಮಾದಿತ್ಯನ ರಾಣಿ ಮಲಹಣದೇವಿಯ ಮನೆಯಲ್ಲಿ ಮಾಣಿಕ ಭಂಡಾರವಿದ್ದು ಅದರ ಮೇಲ್ವಿಚಾರಕನಾಗಿ ನಾಗವರ್ಮನೆಂಬಾತನನ್ನು ನೇಮಕ ಮಾಡಲಾಗಿತ್ತು(ವಸಂತಲಕ್ಷ್ಮಿ ಕೆ.(ಸಂ);ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೬೯). ಹೀಗೆ ಮಹಿಳಾ ಆಡಳಿತ ವರ್ಗದ ಸುತ್ತ ಪುರುಷ ಅಧಿಕಾರಿಗಳನ್ನು ನೇಮಕ ಮಾಡಲಾಗುತ್ತಿತ್ತು. ಇವರೇ ನಿಜವಾಗಿ ಆಡಳಿತ ನಿರ್ವಹಿಸುವವರು. ರಾಣಿಯರ ಸ್ಥಾನ ಏನಿದ್ದರೂ ಅಲಂಕರಿಸುವುದಕ್ಕೆ. ಅಧಿಕಾರಿಗಳು ಸಹಾಯಕ್ಕೆಂದು ಮೇಲ್ನೋಟಕ್ಕೆ ತೋರಿದ್ದರೂ ಇವರ ಅನುಮತಿಯಂತೆಯೇ ಎಲ್ಲ ರಾಜಕೀಯ ಚಟುವಟಿಕೆಗಳು ನಡೆಯುವುದು ಅಥವಾ ಅವರ ತೀರ್ಮಾನವೇ ಆಡಳಿತದಲ್ಲಿ ಅಂತಿಮವಾಗಿ ಜಾರಿ ಬರುವುದು ಎನ್ನಬಹುದು.

ಸ್ತ್ರೀಯರಿಗೆ ಸ್ವತಂತ್ರ ಆಡಳಿತ ನಿರ್ವಹಿಸುವ ಸಾಮರ್ಥ್ಯವಿರಲಿಲ್ಲವೆಂದೇನಿಲ್ಲ. ಆದರೆ ಪುರುಷಸಮಾಜ ಅಧಿಕಾರ ಕೊಡುವಲ್ಲಿ ಆತಂಕವಿದೆ ಎಂದು ಹೇಳಬಹುದು. ಕಾರಣವಿಷ್ಟೇ ಅಧಿಕಾರ ಪಡೆದುಕೊಂಡಿದ್ದ ಸ್ತ್ರೀಯರೆಲ್ಲರೂ ಸಮರ್ಥವಾಗಿ ಕಾರ್ಯ ನಿರ್ವಹಿಸಿರುವುದು. ದುರಾಡಳಿತಕ್ಕೆ ಯಾವ ಸ್ತ್ರೀಯರೂ ಉದಾಹರಣೆಗೆ ಸಿಕ್ಕುವುದಿಲ್ಲ. ಆದರೆ ಹಿಂದಿನಿಂದಲೂ ಸ್ತ್ರೀಯರ ಬಗ್ಗೆ ತಳೆದಿದ್ದ ಬಹುಸಂಖ್ಯಾತ ಪುರುಷರ ತಪ್ಪು ಗ್ರಹಿಕೆಯೆಂದರೆ, ಅವರ ಬೌದ್ಧಿಕ ಸಾಮರ್ಥ್ಯ ಪುರುಷನಿಗಿಂತಲೂ ಕಡಿಮೆ ಅವರು ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯವಿಲ್ಲದವರು. ಸದಾ ರಕ್ಷಣೀಯಳಾಗಿರುವವಳಿಗೆ ರಾಜ್ಯರಕ್ಷಣೆ ಮಾಡುವ ಶಕ್ತಿ ಹೇಗಿರುತ್ತದೆ? ಇವೆಲ್ಲ ವೈದಿಕ ಯುಗದಲ್ಲಿ ನಿರ್ಧಾರವಾದವುಗಳು. ಅವಳ ಬಗ್ಗೆ ಒಂದು ಪೂರ್ವಕಲ್ಪನೆ ಅದಾಗಲೇ ಸಿದ್ಧವಾಗಿತ್ತು ಅದಕ್ಕಾಗಿ ಪುರುಷ ಸ್ತ್ರೀಯರ ಪರವಾಗಿ ತೆಗೆದುಕೊಂಡ ನಿರ್ಧಾರವೆನ್ನಬಹುದು. ಸ್ತ್ರೀಯರಿಗೆ ಅಧಿಕಾರ ನೀಡುವ ಉದಾರತೆ ತೋರಲಾಗಿದೆಯಾದರೂ ಅದೇನಿದ್ದರೂ ಸೀಮಿತ ವಲಯಕ್ಕೆ ಸೇರಿದೆ. ಕೆಲವೊಂದು ಸಂದರ್ಭಗಳನ್ನು ಹೊರತು ಪಡಿಸಿ ಅವರ ಅಧಿಕಾರವೇನಿದ್ದರೂ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ದಾನ, ದತ್ತಿ ಕಾರ್ಯಕ್ಕೆ ಸೀಮಿತವಾಗಿದೆ. ಅದರ ಹಿಂದೆಯೂ ಕೂಡ ಆರ್ಥಿಕ ಒಡೆಯನ ಬಲವಿದೆ.

ಇದೆಲ್ಲ ನಿರ್ಬಂಧಗಳ ಮಧ್ಯೆಯೂ ಸ್ತ್ರೀ ತನ್ನ ಸಾಮರ್ಥ್ಯ ಮೆರೆದಿರುವಳು. ಸಮಯ ಪ್ರಜ್ಞೆ, ಮುಂದಾಲೋಚನೆ, ಸರಿಯಾದ ನಿರ್ಧಾರಕ್ಕೆ ಕಾಮವಾಸಿನಿ, ಎಂಥ ಜವಾಬ್ದಾರಿಯನ್ನೂ ನಿಭಾಯಿಸಬಲ್ಲೆ ಎಂದು ತೋರಿಸಿಕೊಟ್ಟ ಸುಂಕಾಧಿಕಾರಿ ಲಕ್ಷ್ಮಾದೇವಿ, ಯುದ್ಧಭೂಮಿಯಲ್ಲಿ ವೈರಿಗಳೊಂದಿಗೆ ಹೊರಾಡಲು ಸೈ ಎಂದ ಅಕ್ಕಾದೇವಿ, ಯುದ್ಧ ಮತ್ತು ಸಾವಿನ ಬಗ್ಗೆ ವಿರೋಧಿ ಬಾವನೆ ಇರುವ ಚೋಳಮಹಾದೇವಿ.

ಇತಿಹಾಸದಲ್ಲಿ ಸ್ತ್ರೀಯರು ಅಧಿಕಾರ ಪಡೆಯುತ್ತಿದ್ದ ಮತ್ತೊಂದು ಪ್ರಸಂಗ ರಾಜರಿಗೆ ಬಹುಮಂದಿ ಪತ್ನಿಯರು ಇದ್ದಾಗ ಅವರಿಗೆ ಮಾನ್ಯತೆ, ಸಮಾನತೆ, ನೀಡುವ ನೆಪದಲ್ಲಿ ಅಗ್ರಹಾರ, ನಾಡಿನ ಕೊನೆಗೆ ಒಂದು ಊರಿನ ಉಸ್ತುವಾರಿಯನ್ನು ವಹಿಸಿಕೊಡುವುದರ

ಮೂಲಕ ಅವರಿಗೂ ಆಡಳಿತದಲ್ಲಿ ಸಮಾನ ಸ್ಥಾನ ದೊರಕಿಸಿಕೊಟ್ಟು ಉದಾರತೆ ಮೆರೆದರೆಂದು ಹೇಳಲಾಗುತ್ತದೆ. ಪತ್ನಿಯಾಗಿರಲಿ, ಅನ್ಯ ಸ್ತ್ರೀಯರೇ ಆಗಿರಲಿ ಅವರಿಗೆ ದೊರಕಬೇಕಾದ್ದು ಉದಾರತೆಯಲ್ಲ. ಸಮಾನತೆ. ಆದರೆ ಅದು ಯಾವ ಕಾಲಕ್ಕೂ ದೊರೆತಿಲ್ಲ. ಪಲ್ಲವ ಮಹೇಂದ್ರರಾಜ ಮೂವರು ರಾಣಿಯರಿಗೂ ಮೂರು ಬೇರೆ ಬೇರೆ ಊರುಗಳ ಆಳ್ವಿಕೆ ಕೊಡಲಾಗಿತ್ತು, ರಾಜ ಒಂದು ಸಾಮ್ರಾಜ್ಯ ಆಳಿದರೆ ರಾಣಿಯರಿಗೆ ದೊರೆಯುತ್ತಿದ್ದ ಸ್ಥಾನ ಒಂದು ಅಗ್ರಹಾರ ಅಥವಾ ಗ್ರಾಮದ್ದು. ಗ್ರಾಮ ಮಟ್ಟದಲ್ಲಿ ಗೌಡ, ಶಾನುಭೋಗ, ನಾಳ್ಗಾವುಂಡ ನಾಡಿಗೆ, ನ್ಯಾಯ ತೀರ್ಮಾನ ಮಾಡಲು ಪಂಚಾಯಿತಿ ಇರುವಾಗ ಅಲ್ಲಿ ರಾಣಿಯ ಪಾತ್ರವೇನು? ಅವರಿಗೆ ದೊರೆತ ಹುದ್ದೆ ಯಾವುದು? ಎಂಬುದು ಪ್ರಶ್ನೆಯಾಗಿದೆ.

ದೊರೆಗಳು ಬಹುಪತ್ನಿತ್ವದ ಆಪತ್ತಿನಿಂದ ತಪ್ಪಿಸಿಕೊಳ್ಳಲು ತಾವೇ ಸೃಷ್ಟಿಸಿದ ಅಧಿಕಾರ ವಹಿಸಿಕೊಡುವ ನೆಪ. ಸವತಿಮತ್ಸರ ಕಾರಣವೆನ್ನಬಹುದಾದರೂ ಸವತಿ ಮದಭಂಜನೆ ಎಂಬ ಬಿರುದು ಹೊಂದಿದ್ದು ಕೆಲವೇ ರಾಣಿಯರು. ಬಹುಪತ್ನಿಯರನ್ನು ಹೊಂದಿದ್ದು ಎಲ್ಲ ದೊರೆಗಳು ಒಂದು ಸಲ ಒಬ್ಬ ರಾಣಿಯನ್ನು ಮೆಚ್ಚಿ ವಿವಾಹವಾದನೆಂದರೆ ಅವಳೊಬ್ಬಳೊಂದಿಗೆ ಮಾತ್ರ ಆತನ ದಾಂಪತ್ಯ ಸೀಮಿತವಾಗಿರುತ್ತಿರಲ್ಲಿಲ್ಲ. ಸುಂದರವಾಗಿರುವ ಕನ್ಯೆಯರನ್ನು ಮತ್ತೆ ಮತ್ತೆ ಮೆಚ್ಚಿ ವಿವಾಹವಾಗುವುದು ಹಾಗೆಯೇ ಮುಂದುವರಿಯುತ್ತಿತ್ತು. ಹೀಗೆ ಹಲವು ರಾಣಿಯರನ್ನು ಪತ್ನಿಯರನ್ನಾಗಿ ಮಾಡಿಕೊಂಡು ಅವರಿಗೆ ಅಧಿಕಾರ ವಹಿಸಿಕೊಡುವ ಅತಿಯಾದ ಔದಾರ್ಯತೆಯನ್ನು ಮೆರೆದಿರುವರು. ಮತ್ತೊಂದು ಗಮನಿಸಬೇಕಾದ ಅಂಶ ರಾಜರು ಅಧಿಕಾರ ಕೊಟ್ಟರು ಎನ್ನುವುದಕ್ಕಿಂತ ಅವನು ಬಹುಪತ್ನಿಯರನ್ನು ಹೊಂದಿದ್ದಾಗ ಸಹಜವಾಗಿ ತೋರಿಸುತ್ತಿದ್ದ ನಿರ್ಲ್ಲಕ್ಷ್ಯದಿಂದ ಇವರೇ ರಾಜರಿಂದ ದೂರ ಉಳಿದು ತಮ್ಮನ್ನು ಆಡಳಿತದಲ್ಲಿ ತೊಡಗಿಸಿಕೊಳ್ಳುವಲ್ಲಿ ಆಸಕ್ತಿ ವಹಿಸಿದ್ದಾರೆ. ಇದಕ್ಕೆ ದೊರೆಗಳು ಬಹುಪತ್ನಿವಲ್ಲಭರಾಗಿರುವುದು ಪ್ರಮುಖ ಕಾರಣವಾಗಿದೆ.

ಆರನೇ ವಿಕ್ರಮಾದಿತ್ಯನು ಹಲವರು ರಾಣಿಯರನ್ನು ಹೊಂದಿದ್ದು ಒಬ್ಬೊಬ್ಬರನ್ನು ಒಂದೊಂದು ಪ್ರದೇಶದಲ್ಲಿಟ್ಟಿದ್ದನು. ಅವರು ಸಾಮಾನ್ಯವಾಗಿ ರಾಜಮನೆತನಕ್ಕೆ ಸೇರಿದವರಾದ್ದರಿಂದ ಆಡಳಿತಾನುಭವ ಆಸಕ್ತಿ ಸಹಜವಾಗಿಯೇ ರಕ್ತಗತವಾಗಿರುವುದು. ಅರಮನೆಯಲ್ಲಿ ರಾಜನ ಜೊತೆಗಿದ್ದು ಸೇವೆಗೈಯಲು ಅವರ ಅಹಂ ಒಪ್ಪುವುದಿಲ್ಲ. ರಾಜಕಾರ್ಯಕ್ಕೆ ಒಬ್ಬ ಪತ್ನಿ ಪಟ್ಟದರಸಿ ಸದಾ ದೊರೆಯ ಜೊತೆಗೆ ಇರುವಾಗ ಉಳಿದ ಪತ್ನಿಯರು ಉಪೇಕ್ಷೆಗೆ ಒಳಗಾಗುವುದಕ್ಕಿಂತ ಪ್ರತ್ಯೇಕವಾಗಿ ಉಳಿದರು.

ಜಕ್ಕಿಯಬ್ಬೆಗೆ ಅಧಿಕಾರ ಪತಿ ಸತ್ತ ಕಾರಣಕ್ಕೆ ದೊರತಿತ್ತು. ಆಡಳಿತದ ಬಗ್ಗೆ ಪೂರ್ವಜ್ಞಾನವಿಲ್ಲ. ಆಕೆಗೆ ಪತಿಯ ಜೀವಿತಾವಧಿಯಲ್ಲಿ ಅದು ಅವಳದಲ್ಲದ ಕ್ಷೇತ್ರ. ತನಗೆ ಪೂರ್ವಾನುಭವವಿಲ್ಲದ ಆ ಕ್ಷೇತ್ರವನ್ನು ಪತಿಯ ಮರಣದ ನಂತರ ಸಮರ್ಥವಾಗಿ

ನಿರ್ವಹಿಸಿರುವಳೆಂದು ಮೇಲಿನ ಸಾಲುಗಳಿಂದ ತಿಳಿದುಬರುತ್ತದೆ. ಆಕೆ ಅಧಿಕಾರಕ್ಕೆ ಬಂದಾಗ ರಾಜ್ಯಕ್ಕೆ ತೀರಿಸಬೇಕಾದ ಸಾಲದ ಹೊರೆಯು ಇತ್ತು(E.C. VII. (ರೈ), ಶಿಕಾರಿಪುರ ೨೧೯). ಸಾಲದ ಹೊರೆಯನ್ನು ಜಕ್ಕಲಿತಲಿದ್ದ ನಾಲ್ಕು ಮತ್ತರು ಗದ್ದೆಯನ್ನು ದೇವಾಲಯಕ್ಕೆ ದಾನ ಮಾಡಿದಳು. ತನ್ನ ಶಕ್ತಿ ಇರುವವರೆಗೂ ಅಧಿಕಾರದಲ್ಲಿದ್ದು ಶಕ್ತಿ ಕುಂದಿದ ಮೇಲೆ ಮಗಳಿಗೆ ಆಡಳಿತ ಒಪ್ಪಿಸಿ ಬಂದಳಿಕೆ ತೀರ್ಥಕ್ಕೆ ಬಂದು ದೇಹತ್ಯಾಗ ಮಾಡಿದಳು. ಜಕ್ಕಿಯಬ್ಬೆಗೆ ಪುತ್ರ ಸಂತಾನ ಇರದ ಕಾರಣಕ್ಕೆ ಮತ್ತು ಪತಿ ಮರಣಿಸಿದ್ದಕ್ಕೆ ಅಧಿಕಾರ ದೊರೆತಿದ್ದು ನಂತರ ಮಗಳಿಗೆ ಕೂಡ ಅನಿವಾರ್ಯವಾಗಿ ಅನ್ಯಥಾ ಮಾರ್ಗವಿಲ್ಲದೆ ಹಸ್ತಾಂತರಗೊಂಡಿದೆ. ಸವದತ್ತಿ ಶಾಸನವೊಂದು ಗಂಡುಮಕ್ಕಳಿಲ್ಲದೆ ಇದ್ದಾಗ ಹೆಣ್ಣುಮಕ್ಕಳು ಮದುವೆಯಾಗಿ ತವರು ಮನೆಯಲ್ಲೇ ಉಳಿದು ಗೌಡಿಕೆ ನಡೆಸಿದುದನ್ನು ತಿಳಿಸುತ್ತದೆ(SII. XX, 248).

ಗಂಗ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಆಡಳಿತದ ಅವಧಿಯಲ್ಲಿ ರಾಣಿಯರು ಆಡಳಿತದಲ್ಲಿ ಭಾಗವಹಿಸಿದಷ್ಟು ನಂತರ ಬಂದ ಹೊಯ್ಸಳ, ವಿಜಯನಗರ ಅರಸರ ಅವಧಿಯಲ್ಲಿ ಕಾಣುವುದಿಲ್ಲ. ಅಂದರೆ ಸ್ತ್ರೀಯರಿಗೆ ಆರಂಭಿಕ ಅವಧಿಯಲ್ಲಿ ದೊರೆತಷ್ಟು ಸ್ಥಾನ ಸಮ್ಮಾನಗಳು ನಂತರದ ಅವಧಿಯಲ್ಲಿ ದೊರೆಯದಿರುವುದನ್ನು ಕಾಣುತ್ತೇವೆ. ಒಂದು ರೀತಿ ಇಳಿಕೆ ಕ್ರಮದಲ್ಲಿ ಸಾಗಿದೆಯೆಂದರೆ ಆರಂಭದಲ್ಲಿ ಅಧಿಕಾರಗಳು ತಮ್ಮ ಹಿಡಿತದಲ್ಲೇ ಇದ್ದರೂ ಹೆಸರಿಗೆ ಮಾತ್ರ ಅವರಿಗೆ ಅಧಿಕಾರಗಳು ದೊರೆತಿದ್ದವು. ಆದರೆ ವಿಜಯನಗರ ಸಾಮ್ರಾಜ್ಯದ ಕಾಲಕ್ಕೆ ಒಬ್ಬ ರಾಣಿಯೂ ಉನ್ನತ ಸ್ಥಾನದಲ್ಲಿದ್ದದ್ದಾಗಲಿ, ಆಡಳಿತ ನಿರ್ವಹಿಸಿದ್ದಾಗಲಿ ಮಾಹಿತಿ ಕುರಿತ ಉಲ್ಲೇಖ ದೊರೆಯುವುದೇ ಇಲ್ಲ. ವಿಜಯನಗರ ಸಾಮ್ರಾಜ್ಯದಲ್ಲಿದ್ದ ಎಷ್ಟೋ ರಾಣಿಯರ ಹೆಸರುಗಳು ಸಹ ಉಲ್ಲೇಖವಾಗಿಲ್ಲ. ಅಂದರೆ ರಾಣಿಯರು ಯಾವುದೇ ರೀತಿಯಿಂದಲೂ ಅವರಿಗೆ ಮುಖ್ಯವಾಗಿರಲೇ ಇಲ್ಲವೆನಿಸುತ್ತದೆ. ವ್ಯವಸ್ಥೆಯಲ್ಲಿ ಸ್ತ್ರೀಯರನ್ನು ಹೇಗೆ ಅಧೋಗತಿಗೆ ತಳ್ಳಲಾಯಿತು ಎಂಬುದು ನಮಗೆ ಇದರಿಂದ ತಿಳಿದುಬರುತ್ತದೆ.

ಸ್ತ್ರೀಯರು ಕೂಡ ಪುರುಷನಷ್ಟೇ ಅಂತಃಶಕ್ತಿ ಸಾಮರ್ಥ್ಯ ಹೊಂದಿರುವರು ಆದರೂ ಪುರುಷಸಮಾಜ ಮಹಿಳೆಯರನ್ನು ಕುರಿತು ಯೋಚನೆ ಮಾಡುವಾಗ ತನಗಿಂತ ಕೆಳ ಮಟ್ಟದಲ್ಲಿಟ್ಟು ಯೊಚಿಸಿರುವರು. ಏಕೆಂದರೆ ಇದು ಪುರುಷನಿಂದ ನಿರ್ಮಾಣವಾದ ಸಮಾಜ. ತನ್ನ ಸರಿಸಮಾನವಾಗಿ ತನಗಿಂತ ಮೇಲ್ಮಟ್ಟದಲ್ಲಿ ಸ್ತ್ರೀಯರನ್ನು ಕುರಿತು ಯೋಚಿಸಲಾರ. ಅಂದಮೇಲೆ ಅವಳಿಗಾಗಿ ಯಾವುದೂ ಇಲ್ಲಿ ನಿರ್ಮಾಣವಾಗಿಲ್ಲ, ಏನು ಮಾಡಿದರೂ ಸ್ವಹಿತಾಸಕ್ತಿಯ ಹೊರತಾಗಿ ಮಾಡಿಲ್ಲ. ಮೊದಲ ಆದ್ಯತೆ ತನ್ನದೆ. ನಂತರದ ಎರಡನೇ ಸ್ಥಾನ ಸ್ತ್ರೀಯರಿಗೆ. ಅದಕ್ಕಾಗಿ ಸ್ತ್ರೀ ಸರ್ವವಿಧದಲ್ಲೂ ಅಸಮರ್ಥಳೆಂಬತೆ ಸೃಷ್ಟಿಸಿದ. ಇತಿಹಾಸದಲ್ಲೇ ಸ್ತ್ರೀಯರಿಗೆ ರಾಜ್ಯಾಡಳಿತದಲ್ಲಿ ಸಮಾನ ಸ್ಥಾನ ಕೊಟ್ಟಿದ್ದರೆ ಇಂದಿಗೂ ಮಹಿಳಾ ಮೀಸಲಾತಿಗಾಗಿ ಮಹಿಳೆಯರು ಹೋರಾಟ ಮಾಡಬೇಕಾಗಿರಲಿಲ್ಲ. ಗಂಡುಮಕ್ಕಳಂತೆ ಅವಳಿಗೂ ಅಧಿಕಾರಗಳು

ಹುಟ್ಟಿನಿಂದಲೇ ಹಸ್ತಾಂತರವಾಗುತ್ತಿದ್ದವು. ಪ್ರಾಚೀನ ಕಾಲದಿಂದ ಪ್ರಸ್ತುತ ರಾಜಕೀಯ ಚಟುವಟಿಕೆಯಲ್ಲಿ ಮಹಿಳೆಯರ ಭಾಗವಹಿಸುವಿಕೆ ಅಷ್ಟೇ ಪ್ರಮಾಣದಲ್ಲಿದೆ. ಯಾವ ಕಾಲಘಟ್ಟದಲ್ಲೂ ಸಮಾನತೆ ಸಾಧಿಸಿಲ್ಲ. ಇಂದಿಗೂ ಸಮಾನತೆ ಸಾಧ್ಯವಾಗಿಲ್ಲ. ಆಡಳಿತ ಮತ್ತು ರಾಜಕೀಯ ವ್ಯವಸ್ಥೆಯಲ್ಲಿ ಅವಳಿಗೆ ಸಮಾನ ಅಧಿಕಾರ ದೊರೆತದ್ದೇ ಆಗಿದ್ದರೆ ತಮ್ಮ ಭದ್ರತೆ ಕುರಿತು ಹೆಣ್ಣುಮಕ್ಕಳು ಪ್ರಸ್ತುತ ದೇಶದ ಕಾನೂನಿಗೆ ತಮ್ಮ ರಕ್ಷಣೆ ಕುರಿತು ವಿಶೇಷ ಕಾನೂನುಗಳನ್ನು ರಚನೆ ಮಾಡಿ ಎಂಬ ಕೂಗು ಕೇಳಿಬರುತ್ತಿರಲಿಲ್ಲ.

ಒಟ್ಟು ಜನಸಂಖ್ಯೆಯಲ್ಲಿ ಅರ್ಧದಷ್ಟು ಮಹಿಳೆಯರಿದ್ದಾರೆ. ಆದರೆ ಆಡಳಿತದಲ್ಲಿ ಎಷ್ಟು ಪ್ರಮಾಣದಲ್ಲಿ ಸ್ತ್ರೀಯರಿದ್ದಾರೆ? ರಾಜಕೀಯ ವ್ಯವಸ್ಥೆಯಲ್ಲಿ ಸ್ತ್ರೀಯರಿಗೆ ದೊರೆತ ಸ್ಥಾನಗಳೆಷ್ಟು? ಪುರುಷ ಶಾಸಕರಷ್ಟೇ ಸ್ತ್ರೀಯರು ಇರಬೇಕಿತ್ತು. ಆದರೆ ಇರುವುದು ಬೆರಳೆಣಿಕೆಯಷ್ಟೆ ರಾಜಕೀಯ ಶಾಸಕಾಂಗಗಳಲ್ಲಿ ನ್ಯಾಯೋಚಿತವಾದ ಸ್ಥಾನ ದೊರಕಿಸುವುದು ಸೂಕ್ತವೆಂದು ವಾದಿಸಲಾಗುತ್ತದೆ. ಮಹಿಳೆಯರ ರಾಜಕೀಯ ಮೀಸಲಾತಿ ಈ ಹಿಂದಿನ ತಪ್ಪನ್ನು ಸರಿಪಡಿಸುವುದು. ಶಾಸಕಾಂಗದಲ್ಲಿಯ ತಪ್ಪನ್ನು ಸರಿಪಡಿಸುತ್ತದೆ ಎಂಬ ಮೂಲ ಉದ್ದೇಶದಿಂದ ಮಹಿಳೆಯರ ಮೀಸಲಾತಿ ಬಗ್ಗೆ ಸ್ವಾತಂತ್ರ್ಯಪೂರ್ವದಲ್ಲೇ ಮೀಸಲಾತಿ ಪ್ರಶ್ನೆ ಎತ್ತಲಾಯಿತು. ಕ್ರಿ.ಶ. ೧೯೩೫–೧೯೭೪ರ ನಡುವೆ ಮೂರು ಸಲ ಮಹಿಳೆಯರ ರಾಜಕೀಯ ಪ್ರಾತಿನಿಧ್ಯವನ್ನು ಖಾತರಿ ಪಡಿಸುವ ವಿಶೇಷ ವಿಧಿಗಳ ಐಚ್ಛಿಕವನ್ನು ಕೈ ಬಿಡಲಾಯಿತು. ಕ್ರಿ. ಶ. ೧೯೩೮ರಲ್ಲಿ ನೆಹರು ಮತ್ತು ಸುಭಾಷ್‌ಚಂದ್ರಭೋಸ್ ರಚಿಸಿದ ರಾಷ್ಟ್ರೀಯ ಯೋಜನಾ ಸಮಿತಿಗಳಿಗೆ ಮಹಿಳಾ ಉಪಸಮಿತಿಯನ್ನು ರಚಿಸಲಾಯಿತು. ಇದು ಮಹಿಳೆಯರಿಗಾಗಿ ಪ್ರತ್ಯೇಕ ರಾಜಕೀಯ ಮೀಸಲಾತಿ ಕೋಟವನ್ನು ನೀಡುವ ಅಗತ್ಯವಿಲ್ಲವೆಂದು ಅಭಿಪ್ರಾಯಪಟ್ಟಿತು(ಒಡೆಯರ್ ಡಿ. ಹೆಗಡೆ; ಭಾರತದಲ್ಲಿ ಮಹಿಳಾ ರಾಜಕೀಯ ಪ್ರಾತಿನಿಧ್ಯ, ಪುಟ ೮೨). ಸಮಾನತೆಗಾಗಿ ಸಾರ್ವತ್ರಿಕ ಸ್ಥಾನಮಾನವಿದೆ ಎನ್ನುವುದು ಅವರ ಅಭಿಪ್ರಾಯದ ಹಿಂದಿರುವ ಉದ್ದೇಶವಾಗಿತ್ತು. ಆದರೆ ಅಂಥ ಸ್ಥಾನಮಾನಗಳು ಎಲ್ಲಿ ದೊರೆತಿವೆ? ಪ್ರಸ್ತುತ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬೌದ್ಧಿಕವಾಗಿ ಗುರುತಿಸಲ್ಪಟ್ಟ ಒಂದು ಹೆಣ್ಣು ಚುನಾವಣೆಗೆ ನಿಂತರೆ ಕಡಿಮೆ ಮತಗಳನ್ನು ನೀಡಿ ಸೋಲಿಸಲಾಗುತ್ತದೆ. ಅವಳ ಸೋಲಿಗೆ ಹೆಣ್ಣು ಎನ್ನುವುದು ಕೂಡ ಕಾರಣವಾಗಿರುತ್ತದೆ. ೧೯೫೨ರ ಮೊದಲ ಚುನಾವಣೆಯಲ್ಲಿ ೪೮೯ ಸ್ಥಾನಗಳ ಸಂಖ್ಯೆಯಲ್ಲಿ ಚುನಾಯಿತ ಮಹಿಳೆಯರು ೨೨, ಶೇ: ೪.೫ರಷ್ಟು. ೧೯೯೯ರಲ್ಲಿ ನಡೆದ ಚುನಾವಣೆಯಲ್ಲಿ ೫೪೩ ಸ್ಥಾನಗಳಲ್ಲಿ ಮಹಿಳೆ ಚುನಾಯಿತಳಾದದ್ದು ೪೭, ಶೇ. ೮.೬(ಒಡೆಯರ್ ಡಿ. ಹೆಗಡೆ; ಭಾರತದಲ್ಲಿ ಮಹಿಳಾ ರಾಜಕೀಯ ಪ್ರಾತಿನಿಧ್ಯ, ಪುಟ ೮೨). ಪುರುಷರಷ್ಟೇ ಇರುವ ಮಹಿಳೆಯರು ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ರಾಜಕೀಯ ವ್ಯವಸ್ಥೆಯಲ್ಲಿ ಭಾಗವಹಿಸಿದ್ದಾರೆ. ಈ ಅಂಶವನ್ನು ಗಮನಿಸಿದರೆ ಮಹಿಳೆಯರಿಗೆ ರಾಜಕೀಯ ಸ್ಥಾನ ಪ್ರಸ್ತುತ ಕಾಲದಲ್ಲಿಯೂ ದೊರೆತಿಲ್ಲ. ಹೆಣ್ಣು ಸ್ವತಂತ್ರವಾಗಿ ಸಮಾಜದಲ್ಲಿ ಗುರುತಿಸಿಕೊಳ್ಳಲು ಸಾಧ್ಯವಾಗಿಲ್ಲ. ಅವಳು ತನ್ನನ್ನು

ಗುರುತಿಸಿಕೊಳ್ಳುವುದಾದರೆ ಪತಿ, ತಂದೆ, ಸಹೋದರ ಹೀಗೆ ಗಂಡಿನ ಜೊತೆಗೆ ಗುರುತಿಸಿಕೊಳ್ಳಬೇಕು. ಭಾರತದಲ್ಲಿ ಶ್ರೀಮತಿ ಇಂದಿರಾಗಾಂಧಿ ಪ್ರಥಮ ಮಹಿಳಾ ಪ್ರಧಾನಿ. ಅದೂ ಸ್ವತಂತ್ರ ದೊರೆತ ಕೆಲವೇ ವರ್ಷಗಳಲ್ಲಿ ಪ್ರಧಾನಿ ಹುದ್ದೆಗೇರಿದಳು ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ನಾವು, ಆಕೆಗೆ ನೆಹರು ಎಂಬ ಪ್ರಭಾವಿ ತಂದೆಯ ಹಿನ್ನೆಲೆ ಇತ್ತು ಎನ್ನುವುದನ್ನು ಮರೆಯುವಂತಿಲ್ಲ.

ಸ್ತ್ರೀಯರು ಆಡಳಿತ ಮತ್ತು ರಾಜಕೀಯ ವ್ಯವಸ್ಥೆಯಲ್ಲಿ ಭಾಗವಹಿಸಿರುವುದನ್ನು ಅಧ್ಯಯನ ಮಾಡಿದಾಗ ಸ್ತ್ರೀಯರು ಬೌದ್ಧಿಕ ಮತ್ತು ದೈಹಿಕ ಸಾಮರ್ಥ್ಯದಲ್ಲಿ ಪುರುಷನಿಗಿಂತ ಕಡಿಮೆ ಇಲ್ಲ. ಪುರುಷರಂತೆ ಶಿಕ್ಷಣ, ತರಬೇತಿ ದೊರೆತಿದ್ದಾದರೆ ಅವರನ್ನು ಯಾರೂ ರಕ್ಷಿಸುವ ಅಗತ್ಯವಿಲ್ಲ. ತಮ್ಮನ್ನು ತಾವು ರಕ್ಷಿಸಿಕೊಳ್ಳುವುದರ ಜೊತೆಗೆ ಸಮಾಜವನ್ನು ಉತ್ತಮ ಮಾರ್ಗದತ್ತ ಕೊಂಡೊಯ್ಯುತ್ತಾರೆ ಎನ್ನುವುದು ಈ ಮೇಲಿನ ಅಧ್ಯಯನದಿಂದ ತಿಳಿದುಬರುತ್ತದೆ. ಅಕ್ಕಾದೇವಿ ಮತ್ತು ಉಮಾದೇವಿಯಂಥ ಹಲವಾರು ಮಹಿಳೆಯರು ಆಡಳಿತ ಮತ್ತು ಯುದ್ಧ ಎರಡರಲ್ಲೂ ಯಶಸ್ವಿಯಾಗಿದ್ದಾರೆ. ಆದರೆ ಅವರ ಬಗ್ಗೆ ಸಂಪೂರ್ಣ ಮಾಹಿತಿ ಒದಗಿಸುವಲ್ಲಿ ಸಮಾಜದಂತೆ ಶಾಸನಗಳೂ ಅವರನ್ನು ನಿರ್ಲಕ್ಷ್ಯ ಮಾಡಿವೆ. ಅಂದರೆ ಆ ಕಾಲದ ಸಮಾಜಕ್ಕೆ ಹೆಣ್ಣಿನ ಸಾಧನೆ ಕುರಿತು ದಾಖಲಿಸುವುದು ಅಷ್ಟೇನೂ ಮಹತ್ವವೆನಿಸಲಿಲ್ಲ, ಶಾಸನಗಳಲ್ಲಿ ದಾಖಲಾಗುವುದರಲ್ಲೂ ಮಹಿಳೆ ನಿರ್ಲಕ್ಷ್ಯಕ್ಕೆ ಒಳಗಾಗಿದ್ದಾಳೆ.

### ೪. ೨. ಧಾರ್ಮಿಕ ಕ್ಷೇತ್ರದಲ್ಲಿ ಮಹಿಳೆ

ಇತಿಹಾಸದಲ್ಲಿ ದಾನ ಶಾಸನಗಳದ್ದೇ ಮೇಲುಗೈ. ಹೆಚ್ಚಿನ ಶಾಸನಗಳು ದಾನ ಕುರಿತಾಗಿಯೇ ಮಾಹಿತಿ ನೀಡುತ್ತವೆ. ಈ ದಾನ ನೀಡುವ ಸಂಸ್ಕೃತಿ ವೈದಿಕರಿಂದ ಬಂದ ಬಳುವಳಿ. ದೇವರು, ದೇವಾಲಯಗಳಿಗೆ ನೀಡುವ ದಾನ ಸಂಪತ್ತಿನ ರೂಪದಲ್ಲಿ, ಭೂಮಿಯ ರೂಪದಲ್ಲಿ ಇರುತ್ತಿತ್ತು. ಭೂಮಿಯಿಂದ ಬರುವ ಆದಾಯದ ಮೂಲ ದೇವಾಲಯಗಳ ವಿವಿಧ ಕಾರ್ಯಚಟುವಟಿಕೆಗೆ ಸಲ್ಲುತ್ತದೆ. ವೈದಿಕರು ಹೋಮದಲ್ಲಿ ಬೆಲೆ ಬಾಳುವ ವಸ್ತುಗಳನ್ನು ಸುರಿಯುವುದರ ಮೂಲಕ ಅದು ದೇವರಿಗೆ ತಲುಪಿ ದೇವರ ಕೃಪೆಗೆ ಪಾತ್ರರಾಗುವುದು ಮತ್ತು ತಮಗೆ ಬೇಕಾದ ವರವನ್ನು ಪಡೆದುಕೊಳ್ಳುವುದು. ದೇವರಿಗೆ ಪ್ರಿಯವಾದುದನ್ನು ದೇವರಿಗೆ ಕೊಟ್ಟು, ತಮಗೆ ಬೇಕಾದುದನ್ನು ಪಡೆದುಕೊಳ್ಳುವುದಾಗಿದೆ.

ತಾವು ಅನುಸರಿಸುವ ಧರ್ಮದ ಪ್ರಚಾರ ಮತ್ತು ಏಳಿಗೆ ಮೂಲ ಉದ್ದೇಶವನ್ನಿಟ್ಟುಕೊಂಡು ತಮ್ಮ ಮನೋಭಿಲಾಷೆಗಳ ಈಡೇರಿಕೆಗಾಗಿ ದಾನ ನೀಡುವುದಾಗಿತ್ತು. ಇಂಥ ಸೇವೆಯನ್ನು ಎಲ್ಲ ವರ್ಗದ ಮಹಿಳೆಯರು ಮಾಡಿರುವರು. ಈ ರೀತಿಯ ಸೇವೆ ಮಾಡುವುದಕ್ಕೆ ಯಾವ ವರ್ಗ, ಭೇದವಿರಲಿಲ್ಲ. ಯಾರು ಬೇಕಾದರೂ ದಾನ ಮಾಡಬಹುದಿತ್ತು. ರಾಣಿಯರಷ್ಟೇ ಮಹತ್ವದ ಪಾತ್ರವನ್ನು ಸಾಮಾನ್ಯ ಮಹಿಳೆಯರು ವಹಿಸಿದ್ದಾರೆ. ದಾನವಾಗಿ ಹಣ, ಭೂಮಿ, ಗೋವು, ತೆರಿಗೆಯಿಂದ ಬಂದ ಆದಾಯವನ್ನು ದೇವರ ನಂದಾದೀಪಕ್ಕೆಂದು, ನೈವೇದ್ಯಕ್ಕೆ,

ಹೀಗೆ ನಾನಾ ವಿಧದಲ್ಲಿ ದಾನ ನೀಡಲಾಗುತ್ತಿತ್ತು. ಕದಂಬರ ಕಾಲದಲ್ಲಿಯೇ ಭೂಮಿದಾನ ಕೊಡುವ ಪದ್ಧತಿ ಆರಂಭವಾಯಿತು. ಆ ಕಾಲಾವಧಿಯಿಂದ ದೇವಾಲಯಗಳು ಸಂಪತ್ತಿನಿಂದ ಕೂಡಿದ ಬಲಿಷ್ಠ ಸಂಸ್ಥೆಗಳಾಗಿ ಬೆಳೆದವು. ಕೆ. ಇಸ್ಮಾಯಿಲ್ ಅವರು ದೇವಾಲಯಗಳಿಗೆ ಹರಿದು ಬರುವ ದಾನಗಳನ್ನು ಈ ರೀತಿ ವಿಭಾಗಿಸಿದ್ದಾರೆ. ಗ್ರಾಮಗಳ ದಾನ, ಭೂಮಿ ದಾನ, ತೆರಿಗೆ ಮತ್ತು ದಂಡ, ಹಣದ ರೂಪದಲ್ಲಿ ದಾನ, ಇವಲ್ಲದೆ ಪ್ರಾಣಿಗಳನ್ನು, ಎಣ್ಣೆ ಗಾಣಗಳು ದಾನ, ಆಭರಣಗಳು(ಇಸ್ಮಾಯಿಲ್ ಕೆ.; ಕರ್ನಾಟಕ ಟೆಂಪಲ್ಸ್, ಪುಟ ೫೪). ದೇವಾಲಯಗಳು ಆರ್ಥಿಕವಾಗಿ ಪ್ರಬಲವಾಗಿ ಬೆಳೆಯುವುದಕ್ಕೆ ಇಲ್ಲಿ ಉಲ್ಲೇಖಿಸಲಾದ ದಾನದತ್ತಿಗಳು ಕಾರಣವಾಗಿವೆ.

**ರಾಣಿಯರು ನೀಡಿದ ದಾನ**

ಕ್ರಿ.ಶ. ೯೩೨ರಲ್ಲಿ ಕನ್ನರನು ಸಿಂಧವಾಡಿ ೧೦೦೦ವನ್ನು ಆಳುತ್ತಿದ್ದಾಗ ಆತನ ಪತ್ನಿ ಚಂದಿಯಬ್ಬೆ ಬಸದಿ ನಿರ್ಮಾಣದಂತಹ ಕಾರ್ಯದಲ್ಲಿ ತೊಡಗಿದ್ದಳು. ನಂದವಾಡಿಯಲ್ಲಿ ಬಸದಿ ನಿರ್ಮಿಸಿ ಭೂಮಿ ಮತ್ತು ಮೂರು ಗದ್ಯಾಣ ದಾನ ಬಿಡುತ್ತಾಳೆ(ರಾಷ್ಟ್ರಕೂಟರ ಶಾಸನಗಳು, ಸಂಪುಟ-೧, ಆಲೂರು, ೨೩೪).

ಕ್ರಿ.ಶ. ೯೫೦ರ ಕಾಲಾವಧಿಯಲ್ಲಿ ಭೂತುಗನ ರಾಣಿ ಪದ್ಮಾಬರಸಿ ಕಟ್ಟಿಸಿದ ಬಸದಿಗೆ ಕೆರೆಯನ್ನು ದಾನವಾಗಿ ಕೊಟ್ಟ ಮಾಹಿತಿ ಇದೆ. ಭೂತುಗನಿಗೆ ರಾಷ್ಟ್ರಕೂಟರ ರಾಣಿ ರೇವಕ ನಿರ್ಮಿಡಿಯಲ್ಲದೇ ಪದ್ಮಂಬರಸಿ ಎಂಬ ಮತ್ತೊಬ್ಬ ಹೆಂಡತಿಯಿದ್ದಳು. ಈಕೆ ದಾನ ನೀಡಿದ ಕುರಿತು ನರೇಗಲ್ ಶಾಸನದಲ್ಲಿ ಮಾಹಿತಿಯಿದೆ(SII. XI, 38). ಪಲ್ಲವ ರಾಜಮಹಿಷಿ ಹಿರಿಯಬ್ಬೆ ಜಿನಧರ್ಮದಲ್ಲಿ ಉನ್ನತ ಪದವಿ ಪಡೆಯಲು ಸಂಪೂರ್ಣ ಧಾರ್ಮಿಕ ಸೇವೆಯಲ್ಲಿ ತೊಡಗಿಸಿಕೊಂಡಿದ್ದಳು. ಈಕೆ ಜಿನಬಸದಿ ಜಿನಬಿಂಬ ಜಿನಾಭಿಷೇಕ ಮಾಡಿಸಿದಳು. ಈಕೆ ಜೈನಮುನಿ ಪುಂಗವರೊಂದಿಗೆ ವಿನಯ, ಸಚ್ಚಾರಿತ್ರ್ಯ, ಧರ್ಮಕ್ರಿಯೆ, ಹೊಂದಿದ್ದರಿಂದ ಸುರೇಂದ್ರ ಪದವಿ ಪಡೆದಳು ಎಂದು ಹೇಳಲಾಗಿದೆ(ಕ.ವಿ.ಶಾ. ಸಂಪುಟ-೨, ಕೊಪ್ಪಳ ೮೨). ಕ್ರಿ.ಶ. ೧೦೩೩ರಲ್ಲಿ ಜಗದೇಕಮಲ್ಲ ಏತಗಿರಿಯಿಂದ ರಾಜ್ಯಭಾರ ಮಾಡುತ್ತಿದ್ದಾಗ ಅವನ ರಾಣಿ ಬಿಜ್ಜಳದೇವಿ ತಡಕಲ್ಲಿನ ದೇವಾಲಯಕ್ಕೆ ಸೂರ್ಯಗ್ರಹಣದಂದು ಭೂದಾನ ಮಾಡಿದ ಮಾಹಿತಿ ತಡಕಲ್ ಶಾಸನದಲ್ಲಿದೆ(ಕ.ವಿ.ಶಾ. ಸಂಪುಟ-೭,ಮಾನ್ವಿ, ೧೬). ಚಾಲುಕ್ಯ ಜಗದೇಕಮಲ್ಲನ ರಾಣಿ ಸೋಮಲದೇವಿ ಹೆಗ್ಗಡೆ ಕಕ್ಕಪ್ಪಯ್ಯ ವಿಷ್ಣು ದೇವಾಲಯ ಕಟ್ಟಿಸಿದಾಗ ಈಕೆ ಭೂಮಿ ದಾನ ಮಾಡಿದ ಕುರಿತು ಮಾಹಿತಿ ಇದೆ( ಕ.ವಿ.ಶಾ. ಸಂಪುಟ-೭, ಮಾನ್ವಿ, ೮೧).

ಕ್ರಿ. ಶ. ೧೦೮೪ರಲ್ಲಿ ಆರನೇ ವಿಕ್ರಮಾದಿತ್ಯನ ಹಿರಿಯ ರಾಣಿ ಲಕ್ಷ್ಮಾದೇವಿ ಸೂಡಿಯ ಅಚಲೇಶ್ವರ ಸೋಮೇಶ್ವರ ಪಂಡಿತದೇವರಿಗೆ ಪೊಂಗಲಿ ಎಂಬ ಗ್ರಾಮವನ್ನು ದಾನವಾಗಿ

ನೀಡಿದಳು(SII. XI, 131). ಚಾಲುಕ್ಯರ ಭುವನೈಕ್ಯ ಮಲ್ಲನ ಹೆಂಡತಿ ಪಂಪಾದೇವಿ ಕಪ್ಪಗಲ್ಲಿನ ಭೋಗೇಶ್ವರ ದೇವರಿಗೆ ದಾನ ನೀಡಿದ್ದಾಳೆ(ಕ.ವಿ.ಶಾ. ಸಂಪುಟ– ೭, ಮಾನ್ವಿ, ೫೫). ಬಲ್ಲಟಗಿ ಶಾಸನ ಕ್ರಿ.ಶ. ೧೬೨೨ರಲ್ಲಿ ೨ನೇ ಜಯಸಿಂಹನ ಮಹಾದೇವಿ ತ್ರೈಪುರುಷ ದೇವಾಲಯಕ್ಕೆ ಅಯ್ಯಣವಾಡಿ ೩೦೦ ಮನ್ನೆ ಭೂಮಿ ಪಡೆದು ದಾನ ಬಿಟ್ಟಿದ್ದಾಳೆ(ಕ.ವಿ.ಶಾ. ಸಂಪುಟ–೭, ಮಾನ್ವಿ, ೯೦).

ಕ್ರಿ.ಶ. ೧೦೩೧ರಲ್ಲಿ ರಾಣಿ ಸೋಮಲದೇವಿ ಏತಗಿರಿಯಲ್ಲಿದ್ದಾಗ ಮಧುಸೂಧನ ಭಟ್ಟರಿಗೆ ಬತ್ತ ಗ್ರಾಮ ಬಳ್ಳನಿಟ್ಟಿಗೆ, ಭೂಮಿ ದಾನ ನೀಡಿದ್ದಾಳೆಂದು ಬಲ್ಲಟಗಿ ಶಾಸನ ಮಾಹಿತಿ ಇದೆ(ಕ.ವಿ.ಶಾ. ಸಂಪುಟ–೭, ಮಾನ್ವಿ, ೯೧). ವಿಕ್ರಮಾದಿತ್ಯನ ರಾಣಿ ಚಂದಲದೇವಿ ತಡಕೆರೆಯ ಊರೊಡೆಯ ಪ್ರಮುಖ ಋಗ್ವೇದ ಕಂಡಿಕಕ್ಕೆ ಮತ್ತು ಶಾಸ್ತ್ರ ಕಂಡಿಕಕ್ಕೆ ಎಂಟೆಂಟು ದಾನ ಮಾಡುತ್ತಾಳೆ(ಕ.ವಿ.ಶಾ. ಸಂಪುಟ–೯, ಮುಧೋಳ, ೩೧).

ಪಲ್ಲವ ಮನೆತನದ ವೀರನೊಳಂಬ ಪಲ್ಲವ ಪೆರ್ಮಾನಡಿ ದೇವರ ಮಹಾದೇವಿ ರೇವಲಾದೇವಿಯವರು ಕಾಳನೃಪ ದೇವರಿಗೆ ಮತ್ತು ವಿಷ್ಣು ದೇವರಿಗೆ ದತ್ತಿ ಬಿಟ್ಟಿರುವ ಮಾಹಿತಿ ಕಂಚುಗಾರ ಬೆಳಗಲ್ಲು ಶಾಸನದಲ್ಲಿದೆ(SII. IX, 74). ಕರಡಿಕಲ್ಲು ಶಾಸನದಲ್ಲಿ ಕ್ರಿ. ಶ. ೧೧೨೪ರಲ್ಲಿ ತ್ರಿಭುವನಮಲ್ಲನ ರಾಣಿ ಅಬ್ಬಲದೇವಿ ಕರಡೀಕಲ್ಲು ೩೦೦ರ ಬಳಿಯ ಲಿಂಗವನ್ನು ಆಳ್ವಿಕೆ ಮಾಡುತ್ತಿದ್ದಾಗ ಕಲಿದೇವೇಶ್ವರ ದೇವರ ದೂಪ, ದೀಪಕ್ಕೆ ದಾನ ನೀಡಿದ್ದಾಳೆ. (ಕ.ವಿ.ಶಾ. ಸಂಪುಟ–೭, ಲಿಂಗಸೂರು, ೧). ಕ್ರಿ.ಶ. ೧೦೫೩ ಅಕ್ಕಾದೇವಿ ಪೆಂಪೆಯ ತೀರ್ಥದಲ್ಲಿ ರಾಜಧಾನಿ ಬ್ರಹ್ಮಪುರಿಯಲ್ಲಿ ೪೨ ಜನ ಬ್ರಾಹ್ಮಣ ಉಪಾಧ್ಯಾಯರಿಗೆ ದಾನ ನೀಡಿದ್ದಾಳೆ(SII. XI, 88). ಅರಸೀಬೀದಿ ಶಾಸನದಲ್ಲಿ ಅಕ್ಕಾದೇವಿಗೆ ದಾನವಿನೊದೆ, ದೀನನಾಥ ಚಿಂತಾಮಣಿಯೆಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಅಲ್ಲದೆ ವಿದ್ಯಾರ್ಥಿ ಜನಬಂಧು ಎಂದು ಕರೆದಿರುವುದು ಉಪಾಧ್ಯಾಯರಿಗೆ ದಾನ ಕೊಡುವುದರ ಮೂಲಕ ಪ್ರೋತ್ಸಾಹ ನೀಡುತ್ತಿದ್ದ ಕಾರಣಕ್ಕೆ ಇರಬೇಕು. ಆರನೇ ವಿಕ್ರಮಾದಿತ್ಯನ ಹಿರಿಯರಾಣಿ ಲಕ್ಷ್ಮಾದೇವಿ ದೋಣಿ ಆಳ್ವಿಕೆ ಮಾಡುತ್ತಿದ್ದಾಗ ಸೋಕ ಶೆಟ್ಟಿ ಕಟ್ಟಿಸಿದ ಬಸದಿಗೆ ದಾನ ನೀಡಿದ ಉಲ್ಲೇಖ ದೋಣಿ ಶಾಸನದಲ್ಲಿದೆ(SII. XI, 140). ಲಕ್ಷ್ಮಾದೇವಿ ಶೈವಧರ್ಮದಲ್ಲಿ ಒಲವು ಹೊಂದಿದ್ದಳು. ಆದರೂ ಜೈನ ಧರ್ಮಕ್ಕೂ ದಾನ ನೀಡಿದ್ದಾಳೆ.

**ಸಾಮಾನ್ಯ ವರ್ಗದ ಮಹಿಳೆಯರ ದಾನ**

ರಾಣಿಯರ ಹೊರತಾಗಿ ಸಾಮಾನ್ಯವರ್ಗದ ಮಹಿಳೆಯರು ದೇವಾಲಯಗಳಿಗೆ ದಾನ ನೀಡಿದ್ದಾರೆ. ಮದ್ಯಯುಗದಲ್ಲಿ ಜನಸಾಮಾನ್ಯರು ಧರ್ಮದ ಭಯದಲ್ಲಿ ಬದುಕುತ್ತಿದ್ದರು. ಪಾಪವಿಮೋಚನೆ, ಪುಣ್ಯ ಪ್ರಾಪ್ತಿ, ಮುಕ್ತಿ ಕಲ್ಪನೆ, ಇವೆಲ್ಲ ದೇವರನ್ನು ಸಂತೃಪ್ತಗೊಳಿಸುವುದರಿಂದ ಪಡೆದುಕೊಳ್ಳಬಹುದು ಎಂಬ ಬಲವಾದ ನಂಬಿಕೆ ಇತ್ತು ಆ ಕಾರಣಕ್ಕಾಗಿ ಆದಷ್ಟು ದೇವರ

ಕೃಪೆಗೆ ಒಳಗಾಗಬೇಕೆಂದರೆ ದಾನ ಕೊಡುವುದು ಅದಕ್ಕೆ ಇರುವ ಮಾರ್ಗವೆಂದು ದೇವರಿಗೆ ಮತ್ತು ದೇವಲಯಕ್ಕೆ ಭೂಮಿ ಧನಕನಕಾದಿಯಿಂದ ಹಿಡಿದು ಸಂಪತ್ತೆಂದು ಪರಿಗಣಿಸುವ ಎಲ್ಲವನ್ನು ದೇವರಿಗೆ ಅರ್ಪಿಸುತ್ತಿದ್ದರು.

ಶಿರಗಂಬಿ ಶಾಸನದಲ್ಲಿ ಎರೆಅಮ್ಮರಸನ ಪತ್ನಿ ಪೋಲಬ್ಬೆ ಆರುಮತ್ತರು ಭೂಮಿಯನ್ನು ಬೆಳ್ದೇವರಿಗೆ ದಾನವಾಗಿ ಕೊಟ್ಟಿರುವಳು. ಇದೇ ಶಾಸನದ ಮುಂದಿನ ಭಾಗದಲ್ಲಿ(ಎರಡನೇ) ತಿರುಗೆಮ್ಮೆಯನ್ನು ಅವರೆವರಸ ಆಳುತ್ತಿದ್ದು ಈತನ ಪತ್ನಿ ಲೋಕಬ್ಬೆ ತಿರುಗೆಮ್ಮೆ ಮತ್ತು ತಳಕೆರೆಯ ನಿವಾಸಿಗಳ ಒಪ್ಪಿಗೆಯೊಂದಿಗೆ ಅವರೆವರಸನ ಪತ್ನಿ ಲೋಕಬ್ಬೆ ದಾನ ನೀಡಿದ್ದಾಳೆ. ಲೋಕಬ್ಬೆ ದಾನ ನೀಡಬೇಕೆಂದು ಬಯಸಿದ ಭೂಮಿ ಅಲ್ಲಿಯ ಸ್ಥಳೀಯರಿಗೆ ಸೇರಿದ್ದಿರಬೇಕು ಆ ಕಾರಣದಿಂದ ಅವರ ಒಪ್ಪಿಗೆ ಪಡೆದು ದಾನ ನೀಡಿರುವ ಸಾಧ್ಯತೆ ಇದೆ(ರಾಷ್ಟ್ರಕೂಟರ ಶಾಸನಗಳು, ಸಂಪುಟ–೧, ಹಿರೇಕೆರೂರು, ೮೧).

ತಮ್ಮ ಆಡಳಿತದಲ್ಲೇನಾದರೂ ಕ್ಲಿಷ್ಟ ಸಂದರ್ಭಗಳು ಎದುರಾದರೆ ಅಂಥ ಸಂದರ್ಭದಲ್ಲೂ ಬಂದೊದಗಿದ ಕಷ್ಟ ಪರಿಹಾರಕ್ಕಾಗಿ ದೇವಾಲಯಕ್ಕೆ ದಾನ ಮಾಡುತ್ತಿದ್ದರು. ಬಂದಳಿಕೆ ಶಾಸನದಲ್ಲಿ ಈ ಕುರಿತ ಉಲ್ಲೇಖವಿದೆ. ನಾಗರಖಂಡದ ಮೇಲಿನ ಸಾಲಬಾಧೆಯಿಂದ ಹೊರಬರಲು ಜಕ್ಕಿಯಬ್ಬೆ ದೇವಾಲಯಕ್ಕೆ ದಾನ ಮಾಡಿದ್ದಾಳೆ(E.C. VII (ರೈ), ಶಿಕಾರಿಪುರ. ೨೧೯). ತಾಳಗುಂದ ಶಾಸನದಲ್ಲಿ ಪೆರ್ಗಡೆ ಪುಳಿಯಮ್ಮ ದೇವರ ನಂದಾದೀಪಕ್ಕೂ ನೈವೇದ್ಯಕ್ಕೂ ಭೂಮಿದಾನ ಕೊಟ್ಟಿದ್ದ ಕುರಿತು ಮಾಹಿತಿ ಇದೆ(E.C. VII (ರೈ), ಶಿಕಾರಿಪುರ, ೧೯೪). ಕ್ರಿ. ಶ. ೯೩೯ರ ಓಟೂರು ಶಾಸನದಲ್ಲಿ ಪೊಲೆಯಮ್ಮ ಕೇಶವ ಮತ್ತು ಆದಿತ್ಯ ದೇವರುಗಳನ್ನು ಪ್ರತಿಷ್ಠಾಪಿಸಿ ವಲಯ ಅಗ್ರಹಾರದಲ್ಲಿರುವ ಎಲ್ಲವನ್ನು ಈಶ್ವರಯ್ಯ ಎಂಬುವರಿಗೆ ಕಾಲ್ತೊಳೆದು ಕೊಟ್ಟಳು(E.C. VIII,(ರೈ), ಸೊರಬ, ೭೦–೭೧). ಕ್ರಿ.ಶ. ೯೬೪ರ ಆಡನೂರು ಶಾಸನದ ಪ್ರಕಾರ ಈಶ್ವರಯ್ಯ ಎಂಬವರು ಅಗ್ರಹಾರದ ಉಸ್ತುವಾರಿಯ ಜೊತೆಗೆ ಪುರೋಹಿತನಿರಬೇಕು, ಆ ಕಾರಣಕ್ಕೆ ಎಲ್ಲವನ್ನು ಅರ್ಪಿಸಿದ್ದಾಳೆ. ಆಡನೂರು ಶಾಸನದಲ್ಲಿ ಕದಂಬಳಿಗೆ ೧೦೦೦ವನ್ನು ಆಳುತ್ತಿದ್ದ ಲೋಕಯ್ಯನ ಪತ್ನಿ ಬಿಯಬ್ಬರಸಿ ಉಮಾಮಹೇಶ್ವರನ್ನನ್ನು ಕಾಂತೇಶ್ವರನೆಂಬ ಹೆಸರಿನಿಂದ ಮರು ನಾಮಕರಣ ಮಾಡಿ ಪ್ರತಿಷ್ಠಾಪಿಸಿ ಭೂಮಿ ದಾನವಾಗಿತ್ತಳು(E.C. XI, (ರೈ), ಹೊಳಲಕೆರೆ, ೩೦).

ಕ್ರಿ.ಶ. ೧೦೩೯ರ ಬಾಗುಳಿಯ ಶಾಸನ ಅರಸಿಕೆರೆಯ ಕಲಿಯಮ್ಮ ಗೌಡನ ಮಗಳು ಪಿರಿಯಾದ ಪೆರ್ಗಡೆ ಹೆಂಡತಿಯಾದ ಬಾಚಲದೇವಿ ಸೂರ್ಯಗ್ರಹಣದಂದು ಗೌಡಿಕೆ ತಮಗೆ ನಡೆಯುವುದಕ್ಕಾಗಿ ಧನ, ಭೂಮಿಯನ್ನು ಶ್ರೀಸ್ವಯಂಭೂಕಲಿದೇವರ ಅಂಗರಂಗಭೋಗಕ್ಕೆ ಬ್ರಾಹ್ಮಣರಿಗೆ ಭೂಮಿಯನ್ನು ಧಾರೆ ಎರೆದು ಕೊಟ್ಟಳು. ತಮ್ಮ ಬೇಡಿಕೆ ಈಡೇರಿದ್ದಕ್ಕಾಗಿ ನೀಡಿರುವ ದಾನ ಇದಾಗಿದೆ(ಕ.ವಿ.ಶಾ. ಸಂಪುಟ–೧, ಹರಪನಹಳ್ಳಿ, ೧೦೦). ಬಾಗುಳಿಯ

ಲಿಂಗಮ್ಮ ಮಗನಿಗೆ ಶುಭವಾಗಲೆಂದು ಕಲಿದೇವರಿಗೆ ರಾತ್ರಿ ನೈವೇದ್ಯಕ್ಕೆ ಸ್ಥಾನಿಕ ದೇವರಾಸಿಜೀಯರ ಕೈಯಿಂದ ದಾನ ನೀಡುತ್ತಾಳೆ(ಕ.ವಿ.ಶಾ. ಸಂಪುಟ–೧, ಹರಪನಹಳ್ಳಿ, ೧೨೦). ಹೆಣ್ಣಿಗೆ ತನ್ನ ಕುಟುಂಬ ತಮ್ಮ ಮಕ್ಕಳಿಗೆ ಶ್ರೇಯಸ್ಸು ಲಭಿಸಲಿ ಎನ್ನುವಂಥ ಹಂಬಲ ಎಲ್ಲ ಕಾಲಕ್ಕೂ ಇದೆ. ಹಲವಾರು ಬೇಡಿಕೆಗಳನ್ನಿಟ್ಟುಕೊಂಡು ಅವೆಲ್ಲ ಪೂರೈಸಲಿ ಎನ್ನುವ ಕಾರಣಕ್ಕೆ ಈ ರೀತಿ ದಾನವನ್ನು ನೀಡುತ್ತಿದ್ದರು. ಕ್ರಿ.ಶ. ೧೧೯೭ರ ಕವಲೂರು ಶಾಸನದಲ್ಲಿ ತ್ರಿಭುವನಮಲ್ಲನ ಆಳ್ವಿಕೆಯ ಅವಧಿ, ಚಾವುಂಡ ಭಟ್ಟನ ಮೊಮ್ಮಗಳು ಶಾಂತಿಕಬ್ಬೆ ಗಂಡ ಯುದ್ಧದಲ್ಲಿ ಮರಣ ಹೊಂದಿದ ಮೇಲೆ ವಿಷ್ಣು ಧ್ಯಾನ ಮಾಡುತ್ತಾ ವ್ರತಗಳನ್ನು ಆಚರಿಸುತ್ತಾ ಕೇಶವ ದೇವರನ್ನು ಪ್ರತಿಷ್ಠಾಪನೆ ಮಾಡಿಸಿ ದಾನಗಳನ್ನು ನೀಡಿದಂತೆ ತಿಳಿದು ಬರುತ್ತದೆ(ಕ.ವಿ.ಶಾ. ಸಂಪುಟ–೨, ಕೊಪ್ಪಳ, ೭). ಪತಿ ಮರಣದ ನಂತರ ಸತಿ ಹೋಗದ ಹೆಣ್ಣುಮಕ್ಕಳು ಎಲ್ಲವನ್ನು ದೇವರಿಗೆ ದಾನ ಮಾಡಿ, ವೈರಾಗ್ಯ ಹೊಂದಿ ದೇವರ ಧ್ಯಾನ, ವ್ರತಗಳನ್ನು ಮಾಡುತ್ತಾ ಕಾಲ ಕಳೆಯುತ್ತಿರಬೇಕಿತ್ತು. ಇಲ್ಲದೆ ಹೋದರೆ ಅಂಥವರಿಗೆ ಸಮಾಜದಲ್ಲಿ ಮಾನ್ಯತೆ ದೊರೆಯುತ್ತಿರಲಿಲ್ಲ.

ಗಬ್ಬೂರು ಶಾಸನ ಸೋಮೇಶ್ವರ ಭಟರ ಮಗಳು ಲಕ್ಷ್ಮಕ್ಕ ತನ್ನ ತಂದೆ ಕಡೆಯಿಂದ ಭಾಗವಾಗಿ ಬಂದ ಬೆಳೆ ಭಾಗವನ್ನು ಕೋಟಿ ಹೋಮಕ್ಕೆ ಮತ್ತು ದೇವರ ದೀಪ, ಧೂಪ, ಆರಾಧನೆಗೆ ನೀಡುತ್ತಾಳೆ. ತನ್ನ ತಂದೆ ಮತ್ತು ಗಂಡನ ಶ್ರೇಯಾಭಿವೃದ್ಧಿ ದಾನದ ಉದ್ದೇಶವಾಗಿತ್ತು. (ಕ.ವಿ.ಶಾ. ಸಂಪುಟ–೭, ದೇವದುರ್ಗ, ೫). ೧೩ ಶತಮಾನದ ಮಸ್ಕಿ ಶಾಸನ ಪಜಿಕಾರ ಎಳೆವೊಜೆಂಸೆ ಮಗಳು ಸೋಮಕ್ಕ ೧೪ ಮತ್ತರು ಭೂಮಿಯನ್ನು ದಾನ ಮಾಡಿದಳೆಂದು ಇದೆ(ಕ.ವಿ.ಶಾ. ಸಂಪುಟ–೭, ಲಿಂಗಸೂರು ೪೩). ಇಲ್ಲಿ ಸೊಮಕ್ಕ ನೀಡುವ ಆಸ್ತಿ ಅವಳ ತಂದೆ ಕಡೆಯಿಂದ ಅವಳಿಗೆ ಬಂದಿರುವ ಸಾಧ್ಯತೆ ಇದೆ. ಆದರೂ ಅವಳು ಅದನ್ನು ಅನುಭೋಗಿಸುತ್ತಿಲ್ಲವೆಂದರೆ ತನ್ನ ಬದಲಾಗಿ ತನ್ನ ಮಗಳಿಂದ ಭೂಮಿ ದಾನ ನೀಡಿರುವ ಸಾಧ್ಯತೆ ಇದೆ. ಮಲ್ಲಿಗೆ ಮಡುವಿನ ಪುಳಿಯಮ್ಮ ಮತ್ತು ೩೨ ಜನ ಸೇರಿ ಆ ಗ್ರಾಮದ ಮೂಲಸ್ಥಾನ ದೇವರಿಗೆ ನಿವೇಶನ ತೋಟ ದಾನ ನೀಡುತ್ತಾಳೆ(ಕ.ವಿ.ಶಾ. ಸಂಪುಟ–೭, ಮಾನ್ವಿ, ೨೬). ಕ್ರಿ.ಶ. ೧೧೩೩ ಮಹಾ ಪ್ರಧಾನ ನಿಂಬಣ್ಣಯ್ಯನ ಮಗಳು ನಾಗಲಾದೇವಿ ತನಗೆ ಬಳುವಳಿಯಾಗಿ ಕೊಟ್ಟ ತೈಲಪದೇವರ ಅಗ್ರಹಾರ, ರಾರಾವಿಯಲ್ಲಿ ಬಂದ ವೃತ್ತಿಯಲ್ಲಿ ಅರ್ಧವೃತ್ತಿ ಶಂಕರೇಶ್ವರ, ನಗರೇಶ್ವರದ ದೇವರಿಗೆ ದಾನ ಮಾಡಿದಳು(ಕ.ವಿ.ಶಾ. ಸಂಪುಟ–೭, ಮಾನ್ವಿ, ೪೪). ಈ ಶಾಸನವನ್ನು ಅಧ್ಯಯನ ಮಾಡಿದಾಗ ಹೆಣ್ಣುಮಕ್ಕಳಿಗೆ ಬಳುವಳಿಯಾಗಿ ಬಂದ ಆಸ್ತಿಯನ್ನು ಅನುಭೋಗಿಸುವುದಿಲ್ಲ. ಅವಳ ಒಡೆತನದಲ್ಲಿ ಆಸ್ತಿ ಇರುವುದು ಅಸಮ್ಮತ. ಆಸ್ತಿ ಹೊಂದ್ದಿದ್ದರೆ ಕುಟುಂಬದಲ್ಲಿ ಪುರುಷನ ಯಜಮಾನ್ಯವನ್ನು ಧಿಕ್ಕರಸಬಹುದಾದ ಸಾಧ್ಯತೆ ಇರಬಹುದು. ಆಸ್ತಿ ಆರ್ಥಿಕ ಒಡೆತನಕ್ಕೆ ಕಾರಣವಾಗುತ್ತದೆ. ಪತಿ ಮರಣ ಹೊಂದಿದರೆ

ಎಲ್ಲವನ್ನು ತ್ಯಾಗ ಮಾಡುವುದು ಸಹಜವಾಗಿತ್ತು. ಅಧಿಕ ಆಸ್ತಿ ಸಂಪತ್ತಿರುವ ಕಾರಣದಿಂದಲೂ ದಾನ ಮಾಡಿರಬಹುದಾದ ಸಾಧ್ಯತೆ ಇದೆ. ಕ್ರಿ.ಶ. ೧೦೮೧ರಲ್ಲಿ ಚಾಲುಕ್ಯರ ಆಳ್ವಿಕೆ ಕಾಲದಲ್ಲಿ ನಾಲಿಕಬ್ಬೆ ಎಂಬುವಳು ತನ್ನ ಗಂಡನ ನೆನಪಿನಲ್ಲಿ ಕುಂದೆಕುಂದೆಯ ತೀರ್ಥದಲ್ಲಿ ಚಟ್ಟಜಿನಾಲಯವೆಂದು ಪರೋಕ್ಷ ವಿನಯದಿಂದ ಬಸದಿ ಮಾಡಿಸಿದಳು ಆಂಧ್ರದ ಕೋನಕೊಂಡ್ಲ ಶಾಸನದಲ್ಲಿದೆ(ಕ.ವಿ.ಶಾ. ಸಂಪುಟ–೫, ಭಾಗ–೧, ಗುತ್ತಿ, ೧೨೨).

ಸ್ತ್ರೀಯರು ಮಾಡುವ ಧಾರ್ಮಿಕ ಕಾರ್ಯಗಳಿಗೂ ಸ್ತ್ರೀ ಮತ್ತು ಧರ್ಮ ಇವೆರಡನ್ನು ಸ್ತ್ರೀಯರ ಧಾರ್ಮಿಕ ನೀತಿ ಎಂದು ಒಂದೇ ಶೀರ್ಷಿಕೆ ಅಡಿಯಲ್ಲಿ ವಿಷಯ ಮಂಡಿಸುವುದಾಗಲಿ, ಚರ್ಚೆ ಮಾಡುವುದಾಗಲಿ ಸಮ್ಮತವಲ್ಲ. ಇವೆರಡನ್ನೂ ಪ್ರತ್ಯೇಕವಾಗಿಯೇ ಪ್ರಸ್ತಾಪಿಸುವುದರಿಂದ ವಿಷಯಸ್ಪಷ್ಟತೆ ಇರುತ್ತದೆ. ಸ್ತ್ರೀ ಮತ್ತು ಧರ್ಮದ ಮಧ್ಯೆ ಸಮಾಜ ಸೃಷ್ಟಿಸಿದ ನಿಯಮಗಳಿವೆ. ಸ್ತ್ರೀ ಮತ್ತು ದಾನದ ಮಧ್ಯೆ ಅರ್ಥಿಕ ಪ್ರಾಬಲ್ಯವಿದೆ. ಇಲ್ಲಿ ಪ್ರಸ್ತಾಪಿಸಲಾದ ವಿಷಯ ದಾನ ದತ್ತಿ ಕುರಿತ ವಿಚಾರ ಮಾತ್ರವಿರುವುದು. ಸ್ತ್ರೀಯರು ಮಾಡಿದ ದಾನದ ಹಿಂದೆ ಪ್ರಬಲವಾದ ಆರ್ಥಿಕ ಶಕ್ತಿ ಇರಲೇಬೇಕು. ನಾವು ಇಲ್ಲಿಯವರೆಗೂ ದಾನ ಕುರಿತಾದ ಶಾಸನೋಲ್ಲೇಖಗಳನ್ನು ಕುರಿತು ಅಧ್ಯಯನ ಮಾಡಲಾಯಿತು. ಅವೆಲ್ಲ ಸ್ತ್ರೀಯರ ದಾನವನ್ನು ಕುರಿತ ಮಾಹಿತಿ ನೀಡುತ್ತವೆ. ದಾನವನ್ನು ಸ್ವಂತ ಶಕ್ತಿ ಸ್ವತಂತ್ರ ನಿರ್ಧಾರವೆಂದು ಭಾವಿಸುವಂತಿಲ್ಲ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಕುಟುಂಬದಲ್ಲಿ ಸದಸ್ಯರ ಇರುವಿಕೆ, ಆಹಾರ, ವಿಹಾರ, ನಿರ್ಧಾರಗಳು, ಹಕ್ಕು ಬಾಧ್ಯತೆಗಳೆಲ್ಲವೂ ಮನೆಯ ಯಜಮಾನನ ನಿರ್ದೇಶನದಂತೆ ಸಾಗುತ್ತವೆ. ಕುಟುಂಬದಲ್ಲಿ ಎಲ್ಲ ಸದಸ್ಯರ ಬಾಧ್ಯಸ್ಥಿಕೆಯನ್ನು ಒಪ್ಪಿಕೊಂಡಿದ್ದಾಗಿದ್ದರೂ ಆಸ್ತಿ, ಸಂಪತ್ತಿನ ವಿಚಾರ ಬಂದಾಗ ಹೆಣ್ಣುಮಕ್ಕಳ ಪರವಾಗಿ ಮನೆಯ ಯಜಮಾನ ಉಸ್ತುವಾರಿಯನ್ನು ವಹಿಸಿಕೊಳ್ಳುತ್ತಾನೆ. ಇದು ಪಿತೃಪ್ರಧಾನ ವ್ಯವಸ್ಥೆಯ ಮೂಲ ಆಶಯ. ಇದು ಇಂದಿಗೂ ಪ್ರಸ್ತುತ. ಪುರುಷ ಯಾಜಮಾನ್ಯ ನೆಲೆಯನ್ನು ಧರ್ಮಗಳು ಒಪ್ಪಿರುವುದರಿಂದ ಸ್ತ್ರೀಯರು ಮಾಡಿರುವ ದಾನ ದತ್ತಿಗಳು ಗಂಡಿನ ಒಪ್ಪಿಗೆ ಮೂಲಕವೇ ನಡೆದಿವೆ. ಸ್ತ್ರೀಯರನ್ನು ದಾನ ದತ್ತಿಯ ಹೊರತಾಗಿ ಧಾರ್ಮಿಕ ಆಚರಣೆಯಲ್ಲಿ ಪರಿಧಿಯಾಚೆ ಇರಿಸಲಾಗಿದೆ. ಆಚರಣೆಯಲ್ಲಿ ಹೆಣ್ಣು ಪರಿಕರಗಳಂತೆ ಬಳಕೆಯಾಗಿದ್ದಾಳೆ. ಸಮಾಜದ ಚಿಕ್ಕ ಘಟಕ ಕುಟುಂಬದಿಂದ ಹಿಡಿದು ರಾಜ್ಯದವರೆಗೂ ಅರ್ಥವ್ಯವಸ್ಥೆ ಹಿಡಿತ ಪುರುಷನ ಕೈಲಿರುವುದು. ಆದ್ದರಿಂದ ಅವರು ನಿರ್ವಹಿಸುವ ಪ್ರತಿಯೊಂದು ಧಾರ್ಮಿಕ ಕಾರ್ಯಕ್ಕೆ ಪುರುಷರ ಅನುಮತಿ ಬೇಕಿತ್ತು. ಇದು ಅಷ್ಟೇ ಅನಿವಾರ್ಯ ಕೂಡ ಎನ್ನಬಹುದು. ಆಸ್ತಿ ಸಂಪತ್ತಿನ ಒಡೆಯರು ಪುರುಷರೇ ಆಗಿದ್ದರು.

ಒಂದನೇ ತ್ರೈಲೋಕ್ಯಮಲ್ಲನ ರಾಣಿ ಚಾಮಲದೇವಿ ಮಾಳಲಾಪುರದಲ್ಲಿದ್ದಾಗ ತುಂಗಭದ್ರ–ಕೃಷ್ಣ ನದಿಯ ಸಂಗಮದಲ್ಲಿ ಸ್ನಾನ ಮಾಡಿದ ನೆನಪಿಗಾಗಿ ಎಡದೊರೆ ೨೦೦೦ ದಲ್ಲಿರುವ ಮೊಸಳೆಕಲ್ಲು, ೩೦೦ರ ಭತ್ತಗ್ರಾಮ, ಬಲ್ಲಟಗಿಯಲ್ಲಿ ದಾನ ಬಿಡುತ್ತಾಳೆ ಈ

ದಾನವನ್ನು ರಾಣಿಯ ಕೈಯಿಂದ ಕೊಡಿಸಿದವರು ಬಾಸ್ಕರ ಶೆಟ್ಟಿ(ಕ.ವಿ.ಶಾ. ಸಂಪುಟ-೭, ಮಾನ್ವಿ ೯೫).

ದಾನ ನೀಡುವ ಉದ್ದೇಶವಾಗಲಿ, ದಾನ ಕೊಡಲು ಆಕೆಯ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಾಗಲಿ ಯಾವುವು ಇರಲಿಲ್ಲ. ಆದರೂ ಅವಳ ಕೈಯಿಂದ ದಾನ ಕೊಡಿಸಲಾಗಿದೆ. ತಾವು ದಾನ ಕೊಡುವ ಬದಲಾಗಿ ರಾಣಿಯರ ಕೈಯಿಂದ ದಾನ ಕೊಡಿಸಲಾಗುತ್ತಿತ್ತು. ಪುರುಷರು ತಮ್ಮ ಹೆಂಡತಿ ಮಕ್ಕಳು ಇಲ್ಲವೇ ತಾಯಿಯ ಪರವಾಗಿ ತಾವೇ ದಾನ ಮಾಡುತ್ತಿದ್ದರು. ಹೊಸೂರು ಶಾಸನದಲ್ಲಿ ಆಯ್ಚಗಾವುಂಡನು ತನ್ನ ಪತ್ನಿ ಕಂಚಿಕಬ್ಬೆ ಗಾವುಂಡಿಗೆ ಪರೋಕ್ಷ ವಿನಯವಾಗಿ ಬಸದಿ ಮಾಡಿಸಿ ನಾಗಚಂದ್ರ ಸಿದ್ಧಾಂತಿಗರಿಗೆ ಕಾಲ ತೊಳೆದು ಎಲೆ ತೋಟದಲ್ಲಿ ಒಂದು ಬಳ್ಳಿಯನ್ನು, ಅಡಿಕೆ ತೋಟದಲ್ಲಿ ಒಂದು ಮರವನ್ನು ದಾನ ನೀಡುತ್ತಾನೆ(SII. XI, 65). ಇದಕ್ಕೆ ಪರೋಕ್ಷ ವಿನಯ ಎನ್ನಲಾಗುತ್ತದೆ. ಅಂದರೆ ತಾವು ಪ್ರತ್ಯಕ್ಷವಾಗಿ ಮಾಡದೆ ಬಂಧುಗಳ ಹೆಸರಲ್ಲಿ ಅವರ ಹಿತಾಸಕ್ತಿ ಬಯಸಿ ಅವರ ಹತ್ತಿರದ ಸಂಬಂಧಿಗಳು ನೀಡುವ ದಾನವಾಗಿದೆ. ಇಲ್ಲಿ ಹಿತಾಸಕ್ತಿ ಯಾರದ್ದೇ ಆಗಿರಲಿ ಅದು ಮುಖ್ಯವಾದ ವಿಚಾರವಾಗುವುದಿಲ್ಲ. ಸ್ತ್ರೀಯರು ದಾನ ದತ್ತಿಗಳನ್ನು ಮಾಡುತ್ತಿದ್ದರೆಂದರೆ ಆರ್ಥಿಕವಾಗಿ ಸ್ವತಂತ್ರವಾಗಿದ್ದರು ಮತ್ತು ಬಲಿಷ್ಠವಾಗಿರುವ ಸಾಧ್ಯತೆ ಇತ್ತು ಎಂಬ ತೀರ್ಮಾನಕ್ಕೆ ಬರುವುದು ಎಷ್ಟು ಸರಿ? ಪುರುಷ ದಾನ ನೀಡುವಾಗ ಪತ್ನಿಯ ಒಪ್ಪಿಗೆಯನ್ನು ಪಡೆದು ದಾನ ನೀಡುವುದಿಲ್ಲ. ತನಗೆ ಇಷ್ಟಬಂದಂತೆ ಭೂಮಿಯನ್ನು ದಾನ ನೀಡುತ್ತಾನೆ. ಅದು ಮನೆಯಲ್ಲಿರುವ ಸ್ತ್ರೀಯರಿಗೆ ದಾನದ ವಿಷಯ ತಲುಪುವುದೇ ಇಲ್ಲ. ಅದೇ ಸ್ತ್ರೀಯರ ವಿಚಾರಕ್ಕೆ ಬಂದಾಗ ಈ ರೀತಿ ಯೋಚಿಸುವುದಕ್ಕೂ ಸಾಧ್ಯವಿಲ್ಲ.

ಕ್ರಿ.ಶ. ೧೧೩೪ರಲ್ಲಿ ಎರಡನೇ ಜಯಸಿಂಹನ ಆಳ್ವಿಕೆ ಅವಧಿಯಲ್ಲಿ ಕಳ್ಳಿಹಾಳ ಶಾಸನ ರಾಣಿಯರು ದಾನ ನೀಡುವಾಗ ದೊರೆಗಳಲ್ಲಿ ಬಿನ್ನವಿಸಿಕೊಂಡು ದೇವಾಲಯಗಳಿಗೆ ದಾನ ಸಲ್ಲಿಸುತ್ತಿದ್ದರು. ಎಂಬ ಮಾಹಿತಿಯನ್ನು ದಾಖಲಿಸಿದೆ. ಲಕ್ಷ್ಮೀದೇವಿಯು ಬಿನ್ನವಿಸಿಕೊಂಡಾಗ ಆಕೆಯ ಬಿನ್ನಪದ ಮೇರೆಗೆ 'ಶ್ರೀ ಮಲ್ಲಕ್ಷ್ಮಾದೇವಿಯರ ಬಿನ್ನಪದಿಂ' ಜಗದೇಕಮಲ್ಲನು ಅಜ್ಜಡಿಯ ಸಹದೇವೇಶ್ವರ ದೇವರಿಗೆ ಪೊಟ್ಟಳಕೆರೆ ಬೀಡಿನಲ್ಲಿದ್ದಾಗ ಶೀಕಂಠ ಭಟ್ಟಾರಕರಿಗೆ ಹಸ್ತೋದಕ ಮಾಡಿ ಪೂರ್ವವೃತ್ತಿಯನ್ನು ಬಿಡುತ್ತಾಳೆ(SII. XVIII, 50). ಕ್ರಿ.ಶ. ೧೧೮೯ರ ದೇವರಗೆಣ್ಣೂರು ಶಾಸನದಲ್ಲಿ ಆರನೇ ವಿಕ್ರಮಾದಿತ್ಯನ ರಾಣಿ ಅಂಗಬ್ಬರಸಿ ಗಂಡಗೆ ಗ್ರಾಮವನ್ನು ಆಳ್ವಿಕೆ ಮಾಡುತ್ತಿದ್ದಾಗ ತಾನು ಆಳ್ವಿಕೆ ಮಾಡುತ್ತಿದ್ದ ಶ್ರೀ ಬಲ್ಲವರಸರ್ಗೆ 'ಭಿನ್ನಪಂಗೆಯ್ದು' ದಾನ ಬಿಟ್ಟಿದ್ದಾಳೆ. ಇಲಿ ಬಲ್ಲವರಸ ಎಂದರೆ ಪತಿ ವಿಕ್ರಮಾದಿತ್ಯ(SII. XVIII, 94). ಆರನೇ ವಿಕ್ರಮಾದಿತ್ಯ ಹಲವಾರು ರಾಣಿಯರನ್ನು ಹೊಂದಿದ್ದು ಎಲ್ಲರಿಗೂ ಆಡಳಿತ ನೋಡಿಕೊಂಡು ಹೋಗಲು ಒಂದೊಂದು ಅಗ್ರಹಾರವನ್ನು ಕೊಟ್ಟಿದ್ದ. ಆದರೆ ಅವರಿಗೆ ಕೊಟ್ಟಿದ್ದ ಅಧಿಕಾರಗಳು

ಹಸ್ತಕ್ಷೇಪದಿಂದ ಕೂಡಿದ್ದವು ಎನ್ನುವುದನ್ನು ಅವೇ ಶಾಸನಗಳು ಉಲ್ಲೇಖಿಸುತ್ತವೆ. ಕ್ರಿ.ಶ. ೧೧೫೫೮ರ ಒಂದನೇ ನರಸಿಂಹನ ಆಳ್ವಿಕೆ ಅವಧಿಯಲ್ಲಿ ಜಕ್ಕವ್ವೆ 'ಶ್ರೀ ಮನ್ಮಹಾಮಂಡಲೇಶ್ವರ ನಾರಸಿಂಹ ದೇವರಿಗೆ ಬಿನ್ನಹಂ ಗೆಯ್ದು' ಬಸದಿ ನಿರ್ಮಾಣ ಮಾಡಿಸಿದ ಉಲ್ಲೇಖವಿದೆ(E.C. VIII, ಹಾಸನ, ೧೪೬). ದಾನ ಮಾಡಬೇಕಾದರೆ ಒಪ್ಪಿಗೆ ಪಡೆದುಕೊಳ್ಳಲೇಬೇಕಿತ್ತು. ರಾಣಿಯರಾಗಿರಲಿ, ಸಾಮಾನ್ಯ ವರ್ಗದ ಮಹಿಳೆಯರಾಗಿರಲಿ ಸ್ವ ಇಚ್ಛೆಯಿಂದ ನಿರ್ಮಾಣ ಮಾಡುವಂತಿರಲಿಲ್ಲ. ಜಯಸಿಂಹನ ರಾಣಿ ಮಹಾದೇವಿ ಪುರವಳ್ಳಿಯ ಬೀಡಿನಲ್ಲಿದ್ದಾಗ ತಂತ್ರಪಾಳಮಲ್ಲಯ ಬಳ್ಳನಿಟ್ಟಗೆಯಲ್ಲಿ ಸ್ಥಾಪಿಸಿದ ತ್ರೈಪುರುಷ ದೇವಾಲಯಕ್ಕೆ ಅಯ್ಯಣವಾಡಿ ೩೦೦ರ ಮನ್ನೆಯ ಲೋಕಾದಿತ್ಯನಿಂದ ಭೂಮಿ ಪಡೆದು ದಾನ ಬಿಡುತ್ತಾಳೆ (ಕ.ವಿ.ಶಾ. ಸಂಪುಟ-೭, ಮಾನ್ವಿ, ೯೦). ಒಂದು ರಾಜ್ಯದ ರಾಣಿಯಾದವಳಿಗೆ ಅವಳದೇ ಆದ ಖಾಸಗಿ ಆಸ್ತಿ ಇರಲಿಲ್ಲವೆಂಬುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ರಾಣಿ ಲೋಕಾದಿತ್ಯನಿಂದ ಭೂಮಿ ಪಡೆದು ದಾನ ಬಿಡುತ್ತಾಳೆ. ಆಸ್ತಿಯ ಹಕ್ಕು ಸಾಮಾನ್ಯ ಮಹಿಳೆಯರಿಂದ ಮಹಾರಾಣಿಯವರೆಗೆ ಯಾರಿಗೂ ಇರಲಿಲ್ಲ. ರಾಣಿಯರ ವಿವಾಹ ಸಂದರ್ಭದಲ್ಲಿ ತಂದೆಯು ಮಗಳನ್ನು ಸಂಪತ್ತು, ಆಳು, ಧನಕನಾದಿ ದಾಸಿಯರ ಜೊತೆಗೆ ಕಳಿಸಿಕೊಡುತ್ತಿದ್ದನು. ವಿಕ್ರಮಾದಿತ್ಯನು ದಂಡೆತ್ತಿ ಬರುವುದನ್ನು ಕೇಳಿ ಪೆರ್ಮಾಡಿದೇವನು ತನ್ನ ಮಗಳನ್ನು ಕೊಟ್ಟು, ಆನೆ, ಕುದುರೆ, ಭಂಡಾರವನ್ನು ರಾಜನಿಗೆ ಕಳುಹಿಸಿಕೊಟ್ಟನು. ಮತ್ತೊಬ್ಬ ರಾಣಿ ಚೋಳ ವೀರರಾಜೇಂದ್ರನ ಪುತ್ರಿ, ಈಕೆಯನ್ನು ವಿವಾಹ ಮಾಡಿ ಕೊಡುವ ಸಂದರ್ಭದಲ್ಲಿ ಅಪಾರ ಸಂಪತ್ತನ್ನು ಕೊಟ್ಟು ಪಾದಗಳಿಗೆರಗಿದನೆನ್ನಲಾಗುತ್ತದೆ(ನಾಗಯ್ಯ ಜೆ. ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೩೧). ಅದೊಂದು ರೀತಿಯ ಪಾರತಂತ್ರ್ಯವಾಗುತ್ತದೆ. ಅಲ್ಲಿ ಅರಮನೆಯಿಂದ ತೆರವಾದ ಸಂಪತ್ತು ಮತ್ತೆ ಅರಮನೆಗೆ ಬಂದು ತಲುಪುತ್ತದೆ. ತಂದೆಯಿಂದ ಬರುವ ಸಂಪತ್ತಾದರೂ ಅದರ ಒಡೆತನ ಅವರದಲ್ಲ. ರಾಜರಿಗೆ ಅರ್ಪಿಸುವ ಕಾಣಿಕೆಯಲ್ಲಿ ಸಂಪತ್ತಿನ ಜೊತೆಗೆ ಮಗಳೂ ಸೇರಿರುತ್ತಾಳೆ. ಅವಳೇ ರಾಜನಿಗೆ ಸೇರುವ ಸಂಪತ್ತೆಂದ ಮೇಲೆ ಅವರು ಸಂಪತ್ತಿನ ಒಡೆಯರಾಗಲು ಹೇಗೆ ಸಾಧ್ಯ. ಅಂದ ಮೇಲೆ ದಾನ ದತ್ತಿ ಬಿಡಲು ಹೇಗೆ ಸಾಧ್ಯ.

ತಾವು ನೀಡಿದ ದಾನ ಅಥವಾ ಧಾರ್ಮಿಕ ಸೇವೆಯನ್ನು ಮುಂದುವರಿಸುವ ಸಾಮರ್ಥ್ಯವು ಹೆಣ್ಣುಮಕ್ಕಳಿಗೆ ಇದೆ ಎಂದು ಭಾವಿಸಿರಲಿಲ್ಲ. ಆರನೇ ವಿಕ್ರಮಾದಿತ್ಯನ ಕರಡಿಹಳ್ಳಿ ಶಾಸನವೊಂದು ನೀಡಿದ ಮಾಹಿತಿ ಕೇಸಿಮಯ್ಯ ಮತ್ತು ಪತ್ನಿ ಮಾರಬ್ಬೆ ಚಂದೇಶ್ವರ ದೇವರ ನೈವೇದ್ಯಕ್ಕೆ ದೀಪ ಮೊದಲಾದ ಪೂಜಾಕಾರ್ಯಕ್ಕೆ ಬಾವಿ, ಹೊಲ ಬಿಡುತ್ತಾರೆ. ಕೇಸಿಮಯ್ಯ ಮರಣ ಹೊಂದಿದಾಗ ಅವನ ಮಗ ಕಪ್ಪಿಮಯ್ಯ ನಡೆಸಿಕೊಂಡು ಹೋಗುತ್ತಾನೆ. ಕಪ್ಪಿಮಯ್ಯನಿಗೆ ಶಕ್ತಿ ಕುಂದಿದಾಗ ತನ್ನ ಹಿರಿಯ ಮಗಳು ಜನ್ನಬ್ಬೆಯ ಪತಿ ಮಾದಿಮಯ್ಯನ್ನು ಕರೆಸಿ ಈ ಧರ್ಮ ಕಾರ್ಯ ಮುಂದುವರಿಸಲು ನೇಮಿಸುತ್ತಾನೆ ಮತ್ತು ಪುನರ್ ದತ್ತಿ ಬಿಡುತ್ತಾನೆ(E.C.

VII (ರೈ), part I, ಶಿಕಾರಿಪುರ, ೨೮೭). ತಾವು ನೀಡಿದ ದಾನ ಮುಂದುವರಿಸುವ ಸಾಮರ್ಥ್ಯ ಮಗಳಿಗೆ ಇಲ್ಲವೆಂದು ದಾನ ನಿರಂತರವಾಗಿ ಮುಂದುವರಿಯಬೇಕಾದರೆ ಮಗನಾದರೂ ಸರಿ, ಇಲ್ಲವೇ ಅಳಿಯನಾದರೂ ಸರಿ ಗಂಡು ಮಕ್ಕಳಿಂದ ಮಾತ್ರ ಸಾಧ್ಯವೆಂದು ಭಾವಿಸಲಾಗಿತ್ತು. ದಾನ ನೀಡುವಾಗ ಪತಿ ಪತ್ನಿಯ ಹೆಸರನ್ನು ಜೊತೆಗೆ ಸೇರಿಸಿಕೊಂಡು ದಾನ ಮಾಡುತಿದ್ದರು. ಸಾಮಂತ ಭರಮಯ್ಯ ಮತ್ತು ಆತನ ಹಿರಿಯ ಹೆಂಡತಿ ಬಾಗನಬ್ಬೆ ಗಂಗೇಶ್ವರ ದೇವರಿಗೆ ದತ್ತಿ ಬಿಟ್ಟರು(E.C. XII, ಕಡೂರು ೧೯೨). ಸೊರಬ ತಾಲ್ಲೂಕು ನೆಲ್ಲೂರಿನ ಶಾಸನವೊಂದು ಅಮ್ಮರಗಾವುಂಡ ಅವನ ಹೆಂಡತಿ ಪಿಟ್ಟಬ್ಬೆಗಾವುಂಡಿ ಲಿಂಗಪ್ರತಿಷ್ಠೆ ಮತ್ತು ದೇವಾಲಯವನ್ನು ಮಾಡಿಸಿ ಶಾಸನ ನಿಲ್ಲಿಸಿದರು(E.C. VIII, (ರೈ) Part II ಸೊರಬ, ೪೭೧). ಈ ಮೇಲಿನ ಎರಡು ಶಾಸನ ಅಧ್ಯಯನ ಮಾಡಿದಾಗ ಪತಿ ಪತ್ನಿಗೆ ಸಮಾನ ಸ್ಥಾನ ನೀಡಿದ್ದ ಎಂದೆನಿಸದೆ ಇರದು. ಆದರೆ ತಮ್ಮ ಹೆಸರಿನ ಹಿಂದೆ ಶ್ರೀಮತಿ ಎಂದು ಸೇರಿಸಿದಷ್ಟೆ ಹೊರತು ಅವಳಿಗೆ ತಾವು ನೀಡಿದ ದಾನದಲ್ಲಿ ಯಾವ ಪಾಲಿರುವುದಿಲ್ಲ.

## ೪. ೩. ಸಾಮಾಜಿಕ ಕ್ಷೇತ್ರದಲ್ಲಿ ಮಹಿಳೆ

### ೪. ೩. ೧. ಸಾರ್ವಜನಿಕ ಕಾರ್ಯಗಳು

ಹೆಣ್ಣಿಗೆ ಪ್ರಕೃತಿ ಸಹಜವಾಗಿ ಪರರ ನೋವು ಸಂಕಟಗಳಿಗೆ ಮಿಡಿಯುವ ಒಂದು ಅಂತರ್ಗತ ಭಾವವಿದೆ ಅದು ಸದಾ ಸುಪ್ತಾವಸ್ಥೆಯಲ್ಲಿರುತ್ತದೆ. ಸಮಯ ಮತ್ತು ಅವಕಾಶ ಬಂದಾಗ ಅದು ಚಟುವಟಿಕೆಯಲ್ಲಿ ತೊಡಗುತ್ತದೆ. ಆಗ ಪರೋಪಕಾರಾರ್ಥವಾಗಿ ಕಾರ್ಯಗಳನ್ನು ಕೈಕೊಳ್ಳುತ್ತಾರೆ. ಮಹಿಳೆ ಸಮಾಜದಲ್ಲಿ ತನ್ನದೇ ಆದ ಇತಿಮಿತಿಯಲ್ಲಿ ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಸಾರ್ವಜನಿಕ ಹಿತಕ್ಕಾಗಿ ಅನೇಕ ಕಾರ್ಯಗಳನ್ನು ಕೈಕೊಂಡಿದ್ದಾಳೆ. ಅವಳಿಗೆ ಸಮಾಜದ ಬಗ್ಗೆ ಕಾಳಜಿ ಇರುವುದರ ಜೊತೆಗೆ ಸಮಾಜವನ್ನು ಪ್ರಗತಿಯತ್ತ ಕೊಂಡೊಯ್ಯುವ ಮೂಲ ಆಶಯವಿದೆ. "ಕೆಱೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಂ ಮಾಡಿಸು ...."(ಕ.ವಿ.ಶಾ. ಸಂಪುಟ-೨, ಹಂಪಿ, ೬೯). ಲಕ್ಷ್ಮೀಧರಮಾತ್ಯ ಇತಿಹಾಸದಲ್ಲಿ ಸಾರ್ವಜನಿಕ ಕಾರ್ಯಗಳಿಗೆ ಪ್ರಖ್ಯಾತನಾಗಿದ್ದಾನೆಂದರೆ ಅದಕ್ಕೆ ಆತನ ಬಾಲ್ಯದಲ್ಲಿ ಆತನಿಗೆ ಆದ ತಾಯಿಯ ಪ್ರಭಾವ. ಮಗುವನ್ನು ಮಡಿಲಲ್ಲಿರಿಸಿಕೊಂಡು ತಾಯಿ ಸಿಂಗಲೆ 'ಪರೋಪಕಾರಂ ಇದಂ ಶರೀರಂ' ಎಂಬರ್ಥದಲ್ಲಿ ನೀತಿಯನ್ನು ಬೋಧಿಸಿದ್ದಾಳೆ. ಆಕೆಯ ಅನುಭಾವ, ಸಮಾಜದ ಬಗ್ಗೆ ಇದ್ದ ಕಳಕಳಿ ಇದರಿಂದ ವ್ಯಕ್ತವಾಗುತ್ತದೆ. ತಾನು ಮಾಡಲಾಗದ ಸಾಮಾಜಿಕ ಕಾರ್ಯಗಳನ್ನು ಮಗನ ಮೂಲಕ ಮಾಡಿಸಲು ಇಚ್ಛಿಸಿದ್ದಾಳೆ. ಸಮಾಜಕ್ಕೆ ಬೇಕಾದ ಅಗತ್ಯತೆಗಳು ಅನುಕೂಲತೆಗಳ ಅರಿವು ಒಂದು ಹೆಣ್ಣಿಗೆ ಗಂಡಿಗಿಂತಲೂ ಹೆಚ್ಚಿದೆ ಎಂಬುದು ಈ ಪ್ರಸ್ತುತ ಶಾಸನದಿಂದ ವೇದ್ಯವಾಗಿದೆ. ಸ್ತ್ರೀಯರು ತಮಗೆ ದೊರೆತ ಒಂದು ಸಣ್ಣ ಆರ್ಥಿಕ ಬೆಂಬಲದಿಂದಲೇ ಹಲವಾರು ಸಮಾಜೋಪಯೋಗಿ ಕಾರ್ಯಗಳ ನಿರ್ಮಾಣಕ್ಕೆ

ಸಹಾಯಕಳಾಗಿದ್ದಾಳೆ. ಆಕೆಯ ಸಮಾಜ ಸೇವೆಯನ್ನು ನಾವು ಕೆರೆ ಬಾವಿ ಅರವಟ್ಟಿಗೆಗಳ ನಿರ್ಮಾಣ, ವಿದ್ಯೆ, ಛತ್ರಗಳಿಗೆ ನೀಡಿದ ದಾನ ಆಕೆಯಲ್ಲಿರುವ ಸಾಮಾಜಿಕ ಹೊಣೆಗಾರಿಕೆಯನ್ನು ತಿಳಿಸಿಕೊಡುತ್ತದೆ.

ಗುಜ್ಜಲ ಇಮ್ಮಡಿ ಉಡಚ ನಾಯಕನ ಪತ್ನಿ ಚಿಣ್ಣಮ್ಮನು ಕನಕರಾಯನ ಕೆರೆಯನ್ನು ಕಟ್ಟಿಸಿದಂತೆ ಮಾಹಿತಿ ಇದೆ(ಕ.ವಿ.ಶಾ. ಸಂಪುಟ–೨ ಗಂಗಾವತಿ, ೭೫). ಬಸರಿಹಾಳ ಶಾಸನ ಚಿಣ್ಣಮ್ಮ ಕೆರೆ ನಿರ್ಮಾಣದ ಜೊತೆ ಜೊತೆಗೆ ಬಾವಿಯನ್ನು ಕಟ್ಟಿಸಿದ ಮಾಹಿತಿ ಇದೆ. (ಕ.ವಿ.ಶಾ. ಸಂಪುಟ–೨, ಗಂಗಾವತಿ, ೮೯). ಲಕುಮಣ್ಣ ನಾಯಕನ ಪತ್ನಿ ಬೊಮ್ಮನಾಗಿತಿ ಕಲ್ಲು ಕೆರೆಯನ್ನು ಕಟ್ಟಿಸಿದ ಉಲ್ಲೇಖ ಕನ್ನೇರುಮಡು ಶಾಸನದಲ್ಲಿ(ಕ.ವಿ.ಶಾ. ಸಂಪುಟ–೨ ಗಂಗಾವತಿ, ೯೦). ಜಕ್ಕಿಮವ್ವೆ ಶಿವಚ್ಛಂದ್ರ ದೇವರ ಗುಡಿ ಮತ್ತು ಕೆರೆ ಕಟ್ಟಿಸಿದ ಮಾಹಿತಿ ಇದೆ( E.C. II, ಶ್ರವಣಬೆಳಗೋಳ, ೫೦ಳ). ಅಹವಮಲ್ಲನ ಆಳ್ವಿಕೆ ಕಾಲದಲ್ಲಿ ಗಂಗಮನೆತನದ ರಾಜಕುಮಾರಿ ಅಜ್ಜಬ್ಬೆಯು 'ಚಪ್ಪಣ್ದಂಣ್ದಿ'(ಚೊಪ್ಪದಂಡಿ) ಆಚಬ್ಬ ಸಮುದ್ರ ಎಂಬ ಕೆರೆಯನ್ನು ಕಟ್ಟಿಸುತ್ತಾಳೆ(ಕ.ವಿ.ಶಾ. ಸಂಪುಟ–೫, ಭಾಗ ೨, ಕರೀಂನಗರ ೪೦೫). ಸತ್ಯಾಶ್ರಯನ ಅರಸಿ ಅಯ್ಯಬ್ಬದೇವಿ ಚರಿಯಕೊಮ್ಮಯ ಗಾವುಂಡನಿಗೆ ಕೆರೆ ಅಗಿಸುವಾಗಲೇ ದಶವಂದದ ಮಾನ್ಯ ಬಿಟ್ಟಿದ್ದಾಳೆ(ಕ.ವಿ.ಶಾ. ಸಂಪುಟ–೫, ಭಾಗ ೨, ಜನಗಾಂ, ೪೨೦). ತಾಳಗುಂದದ ದೊಡ್ಡ ಕೆರೆಯನ್ನು ಕಟ್ಟಿಸಿದ ಪೆರ್ಗಡೆ ಪುಳಿಯಮ್ಮ ಕೆರೆಗೆ ಭೂದಾನ ಕೊಟ್ಟಿದ್ದಾಳೆ(E.C. VII (ರೈ), ಶಿಕಾರಿಪುರ ೩೨೨). ಸಾಂತರ ರಾಣಿ ಚಟ್ಟಲಾದೇವಿ ಮಾಡಿದ ಸಾಮಾಜಿಕ ಕಾರ್ಯವನ್ನು ಉಲ್ಲೇಖಿಸುವ ಶಾಸನ ಪದ್ಯ ಹೀಗಿದೆ.

ಕೆರೆಬಾವಿ ಬಸದಿ ದೇಗುಲ
ಮರವಂಟಿಗೆ ತೀರ್ಥಶತ್ರಮಾರವೆ ಮೊದಲಾ
ಗರಿಕೆಯ ಧರ್ಮಾದಿಗಳಂ
ನೆರೆಮಾಡಿಸಿ ನೋನ್ತಳ್ ಚಟ್ಟಲದೇವಿ

(ರಾಷ್ಟ್ರಕೂಟರ ಶಾಸನಗಳು, ಸಂಪುಟ–೧, ಹೊಸನಗರ, ೮೦).ಮಾಯಕಾರ ನಾಮಪ್ಪಯ್ಯನು ತನ್ನ ಚಿಕ್ಕಮ್ಮ ಹಾಗೂ ಬಾಚರಸಯ್ಯನ ಹೆಂಡತಿ ಹಾಗೂ ಹೆಂಡತಿಯ ಅಮ್ಮಮ್ಮನ ಹೆಸರಿನಲ್ಲಿ ಅಮ್ಮ ಸಮುದ್ರ ಎಂಬ ಕೆರೆಯನ್ನು ಕಟ್ಟಿಸುತ್ತಾನೆ. ಅದೇ ಗ್ರಾಮದಲ್ಲಿ ದೊರೆತ ಮತ್ತೊಂದು ಶಾಸನ ತಂಮ್ಮಾಪುರ ಪಾರುಪತ್ಯಗಾರನಾಗಿದ್ದ ಬಯಕಾರ ರಾಮಪ್ಪಯ್ಯ ಪತ್ನಿ ವೀರಮ್ಮನ ಹೆಸರಿನಲ್ಲಿ ಬಾವಿ, ಮಂಟಪ, ಅರವಂಟಿಗೆ, ಸಾಲು ತೋಪು ನೆಡಿಸುತ್ತಾನೆ ಮತ್ತು ತನ್ನ ಮಗಳಿಗೆ ಪುಣ್ಯವಾಗಲಿಯೆಂದು ಮಂಟಪ, ಬಾವಿ ಅರವಂಟಿಗೆ ಮಾಡಿಸುತ್ತಾನೆ(ಕ.ವಿ.ಶಾ. ಸಂಪುಟ–೧ ಹೊಸಪೇಟೆ, ೫೭). ಧಾರ್ಮಿಕ ಕಾರ್ಯಗಳಿಗೆ ದಾನ ನೀಡುವಾಗ ತಮ್ಮ ಕುಟುಂಬದವರಿಗೆ ಪುಣ್ಯ ಪ್ರಾಪ್ತಿಯಾಗಲೆಂದು ದಾನ ಮಾಡುತ್ತಿದ್ದಂತೆ ಸಾಮಾಜಿಕ ಕಾರ್ಯಗಳನ್ನು ಕೈಗೊಂಡಾಗಲೂ ಅದೇ ಉದ್ದೇಶದಿಂದ ಮಾಡುತ್ತಿದ್ದರು.

ರಾಣಿಯರ ಹೆಸರಿನಲ್ಲಿಯೂ ಬೇರೆಯವರು ಸಾಮಾಜಿಕ ಕಾರ್ಯವನ್ನು ಕೈಗೊಳ್ಳುತ್ತಿದ್ದರು. ರಂಗನಾಥ ದೀಕ್ಷಿತ ಗ್ರಾಮದ ಮಾನ್ಯ ಪಡೆದುಕೊಂಡು ರಾಜನ ತಾಯಿ ನಾಗಲಾದೇವಿ ಹೆಸರಿನಲ್ಲಿ ನಾಗಸಮುದ್ರವೆಂಬ ಕೆರೆ, ನಾಗೇಶ್ವರವೆಂಬ ಶಿವ ದೇವಾಲಯ ಅಗ್ರಹಾರ ಮಾಡಿದ(ಕ.ವಿ.ಶಾ. ಸಂಪುಟ–೧, ಹೊಸಪೇಟೆ, ೨೮).

ಸ್ತ್ರೀಯರ ಕೆರೆ ನಿರ್ಮಾಣದ ಹಿಂದೆ ಅವರ ಬಲವಾದ ಒಂದು ಮೂಲ ಆಶಯವಿರುವುದು ತಿಳಿದುಬರುತ್ತದೆ. ಕೆರೆಗಳು ಮಳೆ ಆಧಾರಿತವಾದ ಅಂದಿನ ಕೃಷಿ ಕಾರ್ಯಕ್ಕೆ ಮೂಲಾಧಾರ. ಬೆಳೆಗೆ ನೀರಿನ ಮೂಲಗಳೆಂದರೆ ಕೆರೆಗಳು. ಅಂದಿನ ಜನರಿಗೆ ಮಳೆ ನೀರಿನ ಶೇಖರಣೆ ಮಾಡುವುದು ಅವಶ್ಯಕ ಮತ್ತು ಅನಿವಾರ್ಯ ಕೂಡ ಆಗಿತ್ತು. ಪ್ರಸ್ತುತ ಕಾಲದಲ್ಲಿ ತಜ್ಞರು ಅಂತರ್ಜಲದ ಅತಿಯಾದ ಬಳಕೆಯಿಂದ ಭವಿಷ್ಯದಲ್ಲಿ ಸಂಭವಿಸಬಹುದಾದ ಅಪಾಯದ ಮುನ್ಸೂಚನೆ ಅರಿತು ಮಳೆ ನೀರಿನ ಶೇಖರಣೆ ಕುರಿತು ಜನರಲ್ಲಿ ತಿಳುವಳಿಕೆ ಮೂಡಿಸುತ್ತಾರೆ. ಆದರೆ ಅಂದಿನ ಜನರಿಗೆ ಇದರ ಅರಿವಿಲ್ಲದೆ ಮಳೆ ನೀರಿನ ಸದುಪಯೋಗ ಪಡಿಸಿಕೊಳ್ಳುವ ನಿಟ್ಟಿನಲ್ಲಿ ಕೆರೆ ನಿರ್ಮಾಣದತ್ತ ಹೆಚ್ಚು ಆಸಕ್ತಿ ವಹಿಸುತ್ತಿದ್ದರು. ಮಳೆಗಾಲದಲ್ಲಿ ಮಳೆ ನೀರು ಶೇಖರಿಸಿಡುವ ಒಂದು ವಿಧಾನ ಕೆರೆ. ಸ್ತ್ರೀಯರಿಗೆ ಕೃಷಿ ಮೂಲ ಸಂಸ್ಕೃತಿಯಾಗಿರುವುದರಿಂದ ಸಹಜವಾಗಿಯೇ ಕೃಷಿ ಕಡೆ ಆಸಕ್ತಿ ಹೆಚ್ಚು. ಮಳೆ ನೀರಿನ ಬಳಕೆಯಿಂದ ಫಸಲು ಸಮೃದ್ಧವಾಗಿರುತ್ತವೆ. ಇದು ವೈಜ್ಞಾನಿಕ ಸತ್ಯ. ಇದನ್ನು ಹೇಳುತ್ತಿರುವುದು ಇಂದಿನ ಕೃಷಿ ವಿಜ್ಞಾನ. ಆದರೆ ಅಂದಿನ ಮಹಿಳೆಯರಿಗೆ ಇದು ವೈಚಾರಿಕ ಪ್ರಜ್ಞೆಯಲ್ಲಿತ್ತು ಎಂದರೆ ತಪ್ಪಾಗದು. ಕೆರೆ ನಿರ್ಮಾಣದ ಹಿಂದಿರುವ ಮೂಲ ಉದ್ದೇಶ ಕೃಷಿ. ಸ್ತ್ರೀಯರಿಗೆ ಕೃಷಿ ಬಗ್ಗೆ ಆಸಕ್ತಿಯೇ ಈ ಕೆರೆಗಳು.

ಕೆರೆ ನಿರ್ಮಾಣದ ಉದ್ದೇಶ ಕೃಷಿ ಪ್ರಧಾನವಾದರೂ ಅದನ್ನು ಹೊರತುಪಡಿಸಿ ಬಹೂಪಯೋಗಿಯಾಗಿದೆ ಎನ್ನುವುದು ಅಷ್ಟೇ ಸತ್ಯ. ಕೆರೆ ಹೊರತುಪಡಿಸಿ ಬಾವಿ, ಅರವಟ್ಟಿಗೆಗಳ ನಿರ್ಮಾಣ ಮಾಡುವುದು ಒಂದು ಸಾರ್ವಜನಿಕ ಸೇವೆಯೆಂದಾದರೂ ನೀರು ದಾನ ಮಾಡುವುದು ಒಂದು ಪುಣ್ಯದ ಕಾರ್ಯವೆಂದು, ನೀರು ದಾನದಿಂದ ಶ್ರೇಷ್ಠ ಫಲ ಲಭಿಸುತ್ತದೆ ಎಂಬ ಕಾರಣಕ್ಕೆ, ಕೆರೆ ಬಾವಿ ನಿರ್ಮಿಸುತ್ತಿದ್ದರು. ಕ್ರಿ.ಶ. ೧೪೭೬ರ ಬಂಕಾಪುರ ಶಾಸನದಲ್ಲಿ ನಾಯಕಾಚಾರ್ಯ ಇಮ್ಮಡಿಗೆ ಸಿಂಗನಾಯಕರ ಮದವಳಿಗೆ ಬಾಬಲಿ ನಾಯಕಿತಿಯರು ತಮ್ಮ ಮಗಳು ದೇವಮರಸಿ ದುರ್ಮರಣ ಹೊಂದಿದ ಸಂಬಂದ ಆಕೆಗೆ ಪುಣ್ಯವಾಗಲೆಂದು ಗೋದಾನ, ಭೂದಾನ, ವಸ್ತ್ರದಾನ, ಕನ್ಯಾದಾನ, ಅನ್ನದಾನ ಹಿರಣ್ಯದಾನ ಮುಂತಾದ ಸಮಸ್ತ ದಾನ ಮಾಡಿ ಇವೆಲ್ಲಕ್ಕಿಂತ ಉದಕ(ನೀರಿನ) ದಾನ ಶ್ರೇಷ್ಠತೆ ಕೇಳಿ ಬಂಕಾಪುರದ ಕಣನ ಪಡುವಲ್ಲಿ ಸೋಪಾನದ ಬಾವಿಯನ್ನು ತೊಡಿಸಿದರೆಂದು ಹೇಳಲಾಗುತ್ತದೆ.(SII. XVII, 416,). ಇದು ಕೂಡ ಒಂದು ಕಾರಣವಾಗಿತ್ತು ಎಂದು ಹೇಳಬಹುದು.

ದಂಡನಾಯಕಿತಿ ರಬ್ಬಲದೇವಿ 'ನಾನಾ ದೇಶದ ದ್ವಿಜ ಸ್ಥಾನದ ಸತ್ರಕ್ಕೆ ಬಿಟ್ಟ ೨ ಮತ್ತರು, ಮನೆ ಒಂದು ದಾನ ಬಿಟ್ಟಳು(ಕ.ವಿ.ಶಾ. ಸಂಪುಟ–೧, ಹೂವಿನಹಡಗಲಿ, ೮೩). ಕಾಗಿನೆಲೆ ಶಾಸನದಲಿ ಕಾಳಿಶೆಟ್ಟಿ ಮತ್ತು ಅವನ ಹೆಂಡತಿ ಅರವಂಟಿಗೆ ಮಾಡಿಸಿರುವರು (SII. XVII, 120,). ಕ್ರಿ.ಶ. ೧೦೭೬ರಲ್ಲಿ ವೀರನೊಳಂಬ ದೇವನ ಮಡದಿ ಮಾಳಲಾದೇವಿ ಉತ್ತುಂಗ ಶಿವಾಲಯ, ಆದಿತ್ಯಾಲಯ ಸಾಲೆ, ವಿಷ್ಣು ಗೃಹ, ಬುದ್ಧವಿಹಾರ, ಬಾವಿ, ದಿಗ್ಗಿಗೆ, ಕೆರೆ, ನಿರ್ಮಿಸಿದಂತೆ ಸತ್ರಗಳನ್ನು ನಿರ್ಮಿಸಿರುವ ಕುರಿತು ಕಲಕೇರಿ ಶಾಸನ ಮಾಹಿತಿ ಇದೆ (SII. XX, 49). ಮಾಳಲಾದೇವಿ ಒಂದೇ ಧರ್ಮಕ್ಕೆ ಕಟ್ಟು ಬಿದ್ದು ಅನ್ಯಧರ್ಮವನ್ನು ಕಡೆಗಣಿಸಿಲ್ಲ. ಮಾಳಲಾದೇವಿಗೆ ಅನ್ಯಮತ ಸಹಿಷ್ಣುತಾ ಭಾವವಿರುವ ಕುರಿತ ಮಾಹಿತಿ ಇದೆ. ಶೈವ, ವೈಷ್ಣವ, ಬೌದ್ಧ ಎಲ್ಲ ಧರ್ಮದ ಬಗ್ಗೆಯೂ ಸಮಾನ ಭಾವನೆಯನ್ನು ತಳೆದಿರುವಳು, ಸಾರ್ವಜನಿಕ ಕಾರ್ಯಗಳಿಗೂ ಅಷ್ಟೇ ಮಹತ್ವ ನೀಡಿರುವಳು. ನಾಗಿಯಬ್ಬೆಯ ಅಬ್ಬೆ(ತಾಯಿ) ನಾರಣಬ್ಬೆ ಕರೆಕಟ್ಟಿಸಿದಳು(ಜಯಮ್ಮ ಕರಿಯಣ್ಣ ಎಚ್.; ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೮೫). ಸಂಗಮದ ಮೊಮ್ಮಗಳ್ ಮಲಕೆರಿ 'ದುಗ್ಗಬ್ಬೆ ತುಮ್ಬು' ಕೆರೆಗೆ ತೂಬು ಮಾಡಿಸಿದ್ದಾಳೆ(ಜಯಮ್ಮ ಕರಿಯಣ್ಣ ಎಚ್.; ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೮೫).

ಸ್ತ್ರೀಯರು ಸಮಾಜದ ಮತ್ತು ಕುಟುಂಬದ ಎಲ್ಲ ಮಿತಿಗಳ ಮಧ್ಯೆ ಸಮಾಜಕ್ಕೆ ಬೇಕಾದ ಅಗತ್ಯತೆಗೆ ತನ್ನಿಂದ ಸಹಾಯವಾಗುವಂತಹ ಒಂದು ಕೊಡುಗೆಯನ್ನು ಈ ಸಮಾಜಕ್ಕೆ ಕೊಡಬೇಕೆಂದು ಬಯಸಿರುವಳು. ಅವಳಿಗಿರುವ ಆರ್ಥಿಕ ಮಿತಿಯಲ್ಲೇ ಅದಕ್ಕಾಗಿ ಶ್ರಮಿಸಿದ್ದಾಳೆ. ಸಮಾಜದಲ್ಲಿ ಸಮಾನತೆಯನ್ನು ತರುವ ಒಂದು ಸಣ್ಣ ಪ್ರಯತ್ನವಾಗಿದೆ. ಇಲ್ಲದವರ ಅನಾನುಕೂಲತೆಯನ್ನು ನೀಗಿಸಿ ಜೀವನ ಸುಧಾರಿಸಲು ಮಾಡಿದ ಸಹಾಯ.

### ೪. ೩. ೨. ವೃತ್ತಿ ಕ್ಷೇತ್ರದಲ್ಲಿ ಮಹಿಳೆ

ಕೃಷಿ ಉತ್ಪಾದನಾ ಕ್ಷೇತ್ರದಲ್ಲಿ ಪ್ರಥಮ ಆದ್ಯತೆ ಮತ್ತು ಅಷ್ಟೇ ವ್ಯಾಪ್ತಿಯನ್ನು ಹೊಂದಿದೆ. ಬಹು ಶ್ರಮಿಕ ವರ್ಗವನ್ನು ಹೊಂದಿರುವ ಪ್ರಥಮ ಉತ್ಪಾದನೆ ಕ್ಷೇತ್ರವಾಗಿದೆ. ಇಂಥ ಕೃಷಿ ಕ್ಷೇತ್ರದ ಸಂಶೋಧಕರು ಸ್ತ್ರೀಯರೆಂಬುದು ವಿದ್ವಾಂಸರ ಅಭಿಪ್ರಾಯ. ಸಂಶೋಧನೆಯಿಂದಲೂ ಅದೇ ಸತ್ಯ ಬೆಳಕಿಗೆ ಬಂದಿದೆ. ಕೃಷಿ ಶೋಧವಾದಂದಿನಿಂದ ಇಂದಿನವರೆಗೂ ಸ್ತ್ರೀಯರ ಶ್ರಮದ ಮೇಲೆ ನಿಂತಿದೆ. ಉತ್ಪಾದನೆಯ ಬಹುಪಾಲು ಸ್ತ್ರೀಯರದ್ದೇ ಆಗಿದೆ. ವ್ಯವಸಾಯದ ಆರಂಭದ ಹಂತ ಬೀಜ ಬಿತ್ತನೆಯಿಂದ ಫಸಲು ಕೊಯ್ಲಿನವರೆಗೂ ಸಸ್ಯದ ಚಿಕ್ಕ ಎಲೆಯಿಂದ ತೆನೆಯವರೆಗೂ ಅವಳ ಶ್ರಮದ ಒಡನಾಟದಲ್ಲೇ ಬೆಳೆ ಬೆಳೆಯುತ್ತಾ ಸಾಗುತ್ತದೆ. ಹೆಚ್ಚಿನ ಶ್ರಮ ಬಯಸುವ ಬಿತ್ತನೆ ಕೆಲಸ ಆರಂಭ ಮಾಡಿ ಪುರುಷರು ಮುಂದಿನ ಕೆಲಸ ಸ್ತ್ರೀಯರಿಗೆ ಬಿಡುತ್ತಾನೆ. ಹಾಗಾಗಿ ಕೃಷಿಯಲ್ಲಿ ಶ್ರಮದ ಹೆಚ್ಚಿನ ಪಾಲು ಹೆಣ್ಣು ಮಕ್ಕಳದ್ದು. ಕುಟುಂಬದೊಂದಿಗೆ

ಅವಳಿಗೆ ಹೇಗೆ ಒಂದು ಅವಿನಾಭಾವ ಸಂಬಂಧವಿರುತ್ತದೆಯೋ ಹಾಗೆ ಕೃಷಿ ಮೂಲ ಭೂಮಿಯೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿದ್ದಾಳೆ ಬೆಳಗಿನ ಅವಳ ಕೆಲಸ ಆರಂಭವಾಗುವುದೇ ಭೂಮಿ ತಾಯಿಯನ್ನು ನೆನೆಯುತ್ತ,

ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳೆಯೋಳ \ ಭೂಮಿತಾಯ
ಎದ್ದೊಂದು ಗಳಿಗೆ ನೆನದೇನ

(ರಂಗಾರೆಡ್ಡಿ ಕೋಡಿರಾಂಪುರ; ಗಂಧದ ಮಡುವ ಕಲಕೂತ, ಪುಟ ೧೯೬). ಮೌಖಿಕ ಸಾಹಿತ್ಯದಲ್ಲಿ ಜನಪದರು ಭೂಮಿಯನ್ನು ತಾಯಿಗೆ ಹೋಲಿಕೆ ಮಾಡಿ ಹಾಡಿದ್ದಾರೆ. ಇಬ್ಬರೂ ಫಲವಂತಿಕೆಯ ರೂಪಗಳೇ ಮಾನವ ಕುಲದ ವಂಶೋತ್ಪತ್ತಿ ಮಾಡುವ ಹೆಣ್ಣು. ಆ ಕುಲದ ಉಳಿವಿಗೆ ಫಲ ಸಮೃದ್ಧಿ ಮಾಡುವ ಭೂಮಿ, ಆ ತಾಯಿಯನ್ನು ಈ ತಾಯಿ ನೆನೆಯುವುದು ಅದ್ಭುತವಾಗಿದೆ.

ತನ್ನ ಜೀವನದ ಏಳುಬೀಳಿನೊಂದಿಗೆ ಜೊತೆಗಿರುವ ಭೂಮಿಯನ್ನು ತಾಯಿ ಎಂದು ಭೋದಿಸಿದ ಹೆಣ್ಣು, ಮಣ್ಣಿನ ಮಹತ್ವವನ್ನು ಕುರಿತು ಹೀಗೆ ಹಾಡಿದ್ದಾಳೆ. ಜಗತ್ತಿನಲ್ಲಿ ಎಲ್ಲದಕ್ಕಿಂತಲೂ ಬೆಲೆಯಾದದ್ದು ಹೊನ್ನಿಗಿಂತಲೂ ಮಣ್ಣು. ಮಣ್ಣೆ ನಮ್ಮ ಬದುಕು ಎಂದು ಹೇಳಿದ್ದಾಳೆ.

ಮಣ್ಣನ್ನು ನಂಬಿ ಮಣ್ಣಿಂದ ಬದುಕೇನು
ಮಣ್ಣೆನಗೆ ಮುಂದೆ ಹೊನ್ನು ಅಣ್ಣಯ್ಯ
ಮಣ್ಣು ಲೋಕದಲ್ಲಿ ಬೆಲೆಯಾದ್ದು...

(ರಂಗಾರೆಡ್ಡಿ ಕೋಡಿರಾಂಪುರ; ಗಂಧದ ಮಡುವ ಕಲಕೂತ, ಪುಟ ೧೯೬). ಮಣ್ಣಿನ ಮೌಲಿಕತೆಯನ್ನು ತಾತ್ವಿಕ ಚಿಂತನೆಗೊಳಪಡಿಸಿದ ಧ್ವನಿ ವ್ಯಕ್ತವಾಗಿದೆ. ಹೀಗೆ ಸ್ತ್ರೀಯರು ಬರಿ ಮನೆಯಲ್ಲಿ ಕುಳಿತು ಗೀತೆಯನ್ನು ರಚಿಸಲಿಲ್ಲ. ಕೃಷಿಯಲ್ಲಿ ಸದಾ ಕ್ರಿಯಾಶೀಲಳಾಗಿದ್ದಂತಹ ಸಂದರ್ಭದಲ್ಲಿ ತಮ್ಮ ಭಾವನೆಗಳನ್ನು ಹಾಡಿನ ಮೂಲಕ ಹೊರಹಾಕಿದ್ದಾರೆ. ಸ್ತ್ರೀಯರು ಕೃಷಿಯಲ್ಲಿ ತೊಡಗಿರುವುದನ್ನು ಉಲ್ಲೇಖಿಸುವ ಶಾಸನಗಳು ಬಹು ವಿರಳ. ಅಂತಹದರಲ್ಲಿ ಕೋಳೂರ ಶಾಸನ ಜೋಳದ ತೆನೆಗೆ ಬಂದೆರಗುವ ಗಿಳಿವಿಂಡನ್ನು ಹಾರಿಸಲು ನಿಂತ ಮಹಿಳೆಯ ಬಗ್ಗೆ ಮಾಹಿತಿ ಇದೆ.

ಬೆಳೆದು ಫಳಭರಡಿನೆರಗಿ
ದ್ರ್ಳೆ ಜೋಳದ ಕೊಯ್ಲುಳಂ ಮನೋಹರಿ ಕಾನ್ತಾ
ಕುಳಮಳೆಸುವ ಗಿಳಿ ಸೋವ
ರ್ಳಳಲುಡಮುಡಿ ಬೆನ್ನಲೆಯ ಧವಳೇಕ್ಷಣೆಯರ್

(ಕ.ವಿ.ಶಾ. ಸಂಪುಟ–೧, ಬಳ್ಳಾರಿ, ೩). ಈ ಶಾಸನದಲ್ಲಿ ಬೆಳೆದು ನಿಂತ ಬೆಳೆಗಳ ಬಗ್ಗೆ ಮಾಹಿತಿ ಇದೆ. ಬಾಳೆ, ನಿಂಬೆ, ಮಾದಲ ಫಲಗಳು ನೇರಳೆ, ತೆಂಗು, ಅಡಿಕೆ, ಭತ್ತ, ಹೀಗೆ ಹಲವಾರು ಬೆಳೆಗಳ ಕುರಿತು ದೊರೆತಿರುವುದು ಬರಿ ಮಾಹಿತಿಯಾದರೂ ಅದು ಬೃಹತ್ ಪ್ರಮಾಣದ ಕೃಷಿ ಮತ್ತು ಬಹುಬಗೆಯ ಆಹಾರ ಪದಾರ್ಥಗಳ ಉತ್ಪಾದನೆಯನ್ನು ಕುರಿತು ನೀಡುವ ಮಾಹಿತಿಯಾಗಿದ್ದು ಅಲ್ಲಿ ಸ್ತ್ರೀಯರ ಶ್ರಮವಿರುವುದನ್ನು ಧೃಢಪಡಿಸಿವೆ. ಇಂದಿಗೂ ಕೂಡಾ ಗ್ರಾಮೀಣ ಪ್ರದೇಶಗಳಲ್ಲಿ ಸ್ತ್ರೀಯರು ಹೆಚ್ಚಿನ ಸಂಖ್ಯೆಯಲ್ಲಿ ಕೃಷಿ ಕಾರ್ಯದಲ್ಲಿಯೇ ತೊಡಗಿರುವುದು ನಮಗೆಲ್ಲಾ ತಿಳಿದಿರುವ ವಿಚಾರ.

ಮತ್ತೊಂದು ಕೃಷಿಸಂಬಂಧಿ ಶಾಸನ ಕೇರಳದ ಕಾಸರಗೋಡಿನ ತಳಂಗೆರೆಯಲ್ಲಿ ದೊರೆತಿದ್ದು, ಇದು ಕ್ರಿ.ಶ. ೧೧ನೇ ಶತಮಾನಕ್ಕೆ ಸೇರಿದ ಜಯಸಿಂಹನ ಅಧಿಕಾರಾವಧಿಯನ್ನು ಉಲ್ಲೇಖಿಸುತ್ತದೆ. ಜಯಸಿಂಹನು ಮೋಚಬ್ಬರಸಿಗೆ ಕನ್ಯಾದಾನ ಮಾಡುವಂತೆ ಕೇಳಿಕೊಂಡಾಗ ಮೋಚಬ್ಬರಸಿ ಸಂತೋಷದಿಂದ ಜಯಸಿಂಹನಿಗೆ ಸಮನಾರೂ ಇಲ್ಲವೆಂದು ಕನ್ಯಾದಾನವನ್ನು ಕೊಡಲೊಪ್ಪಿ ಜೊತೆಗೆ ಊರ ಕಡೆಯ ತರೆಯ ತಡಿಯ ಮೇಲಿರುವ ಒಣ ಭೂಮಿಯನ್ನು ತನ್ನ ಧನದಿಂದಲೇ ಕಲ್ಲು ಕಾಡು ಬೆಟ್ಟಗಳಿಂದ ಕೂಡಿದ ಒಣಭೂಮಿಯನ್ನು ಸಮತಲ ಮಾಡಿಸಿ ಕೆರೆಯನ್ನು ಕಟ್ಟಿಸಿ, ಅಲ್ಲಿ ಉದ್ಯಾನವನ ನಿರ್ಮಿಸಿ, ಅದನ್ನು ಒಂದು ಸುಕ್ಷೇತ್ರವನ್ನಾಗಿ ಮಾಡಿಸಿ ಜಯಸಿಂಹನಿಗೆ ವರದಕ್ಷಿಣೆಯ ರೂಪದಲ್ಲಿ ಎಲ್ಲವನ್ನೂ ಕೊಡುತ್ತಾಳೆ(ಅಣ್ಣಿಗೇರಿ ಎ. ಎಂ. ಶೇಷಶಾಸ್ತ್ರಿ ಆರ್.; ಶಾಸನ ಸಂಪದ, ಕರ್ನಾಟಕದ ಶಾಸನಗಳು, ಪುಟ ೧೭). ಅದೇ ಶಾಸನದಲ್ಲಿ ಕೊನೆಗೆ ಜೋಗವ್ವೆ ಎಂಬಾಕೆ ತನ್ನ ವಂಶದ ಹೆಣ್ಣು ಮಕ್ಕಳಿಗೆ ಆಸ್ತಿ ಸಲ್ಲಬೇಕೆಂದು ಹೇಳುತ್ತಾಳೆ. ಒಂದು ವೇಳೆ ಹೆಣ್ಣು ಮಕ್ಕಳಿಲ್ಲದಿದ್ದರೆ ಗಂಡುಮಕ್ಕಳಿಗೆ ಸಲ್ಲಬೇಕು. ಈ ಶಾಸನ ದೊರೆತಿರುವ ಕೇರಳ ಕಾಸರಗೋಡಿನ ಪ್ರದೇಶಗಳು ಮಾತೃಪ್ರಧಾನ ನೆಲೆಯನ್ನು ಹೊಂದಿರುವಂತಹವು, ಈಗಲೂ ಇಲ್ಲಿ ಅಳಿಯ ಕಟ್ಟು ಪರಂಪರೆ ಕಂಡುಬರುತ್ತದೆ. ಇಲ್ಲಿ ಸ್ತ್ರೀಯರು ಆಸ್ತಿಯ ಒಡೆತನ ಹೊಂದಿದ್ದರು ಮತ್ತು ಅದನ್ನು ತಮ್ಮ ಹೆಣ್ಣುಮಕ್ಕಳಿಗೆ ಒಡೆತನ ಮುಂದುವರಿಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೇ ಈ ಶಾಸನ ಹೆಣ್ಣುಮಕ್ಕಳಿಗೆ ಕೃಷಿ ಬಗ್ಗೆ ಇದ್ದ ಕಾಳಜಿ ಮತ್ತು ಕೃಷಿ ಯೋಗ್ಯ ಭೂಮಿ ಮಾಡಲು ಹಾಕಿದ ಶ್ರಮ, ಅದರ ಬಗ್ಗೆ ಇದ್ದ ಆಸಕ್ತಿ ಈ ಶಾಸನದಲ್ಲಿ ಮುಖ್ಯವಾಗುತ್ತದೆ. ಇಂತಹ ಅಪರೂಪದ ಶಾಸನ ಸ್ತ್ರೀ ಮತ್ತು ಕೃಷಿಗೂ ಇರುವ ಸಂಬಂಧವನ್ನು ಸೂಚಿಸುವುದಲ್ಲದೆ ಕೃಷಿ ಸಂಶೋಧನೆ ಮೂಲ ಸ್ತ್ರೀಯರು ಮತ್ತು ಅವರ ಶ್ರಮದ ಮೇಲೆ ಅವಲಂಬನೆಯಾಗಿದೆ ಎನ್ನುವುದು ಕೂಡ ಅಷ್ಟೇ ನಿಜ.

ಕೃಷಿಯ ಬಗ್ಗೆ ಸ್ತ್ರೀಯರಿಗಿದ್ದ ಜ್ಞಾನವೆಂದರೆ ಕೃಷಿಮೂಲ ಕೆರೆಗಳ ಬಗ್ಗೆ, ಅದಕ್ಕಾಗಿ ಅವಳು ಕೆರೆ ನಿರ್ಮಾಣದ ಕಡೆಗೆ ಆಸಕ್ತಿ ವಹಿಸಿದಳು. ಚಪ್ಪಣ್ಡಣ್ಡಿಯ ಆಚಬ್ಬಸಮುದ್ರ(ಕಲ್ಯಾಣ ಚಾಲುಕ್ಯರ ಶಾಸನಗಳು, ಸಂಪುಟ ೧, ಚೋಪ್ಪದಂಡಿ, ಕರೀಂನಗರ೨೮). ಕನ್ನೇರುಮಡು

ಶಾಸನ ಬೊಮ್ಮನಾಗಿತಿ ಕಲ್ಲು ಕೆರೆ ಕಟ್ಟಿಸಿದ ಉಲ್ಲೇಖ(ಕ.ವಿ.ಶಾ. ಸಂಪುಟ–೨, ಗಂಗಾವತಿ, ೯೦). ಕಲಕೇರಿ ಶಾಸನದಲ್ಲಿ ವೀರ ನೊಳಂಬದೇವನ ಮಡದಿ ಮಾಳಲಾದೇವಿ ಶೈವ, ವೈಷ್ಣವ, ಬೌದ್ಧ ದೇವಾಲಯಗಳ ನಿರ್ಮಾಣದ ಜೊತೆಗೆ ಹಲವಾರು ಬಾವಿ ಕೆರೆ ನಿರ್ಮಿಸಿದ ಬಗ್ಗೆ ಮಾಹಿತಿ ಇದೆ(SII. XX, 49,). ಕ್ರಿ.ಶ. ೧೬೬೮ರ ಬಸ್ರಿಹಾಳ ಶಾಸನ ವುಡಿಸಿನಾಯಕನ ಪತ್ನಿ ಕನಕಮ್ಮನು ಬಾವಿಯನ್ನು ನಿರ್ಮಾಣ ಮಾಡಿದ ಬಗ್ಗೆ ಮಾಹಿತಿ ಇದೆ. (ಕ.ವಿ.ಶಾ. ಸಂಪುಟ–೨ ಗಂಗಾವತಿ, ೮೯). ಇದು ಕನಕಗಿರಿಯಿಂದ ಸ್ವಲ್ಪದೂರದಲ್ಲಿ ಉತ್ತರಕ್ಕೆ ಲಕ್ಷ್ಮೀಗುಡ್ಡದ ಬುಡದಲ್ಲಿ ಬಾವಿ ಇದೆ. ಹಿಂದೆ ಕೃಷಿಗೆ ಕರೆಯ ಜೊತೆಗೆ ಬಾವಿಗಳು ನೀರಿನ ಮೂಲಗಳಾಗಿದ್ದವು. ಕನಕಮ್ಮ ಕೃಷಿಗೆ ಉಪಯೋಗವಾಗಲೆಂದು ಬಾವಿಗಳನ್ನು ನಿರ್ಮಾಣ ಮಾಡಿರಬೇಕು.

ಕೃಷಿಯಲ್ಲಿ ತನ್ನ ತೊಡಗಿಸಿಕೊಂಡ ಸ್ತ್ರೀ ಅದರಲ್ಲಿ ಸಾರ್ಥಕ ಭಾವ ಕಂಡಿದ್ದಾಳೆ. ಆಕೆ ಕೃಷಿ ಒಡತಿಯಾಗಿರುವವರೆಗೂ ಕೃಷಿ ಸೀಮಿತ ವಲಯಕ್ಕೆ ಸೇರಿದ್ದು ವ್ಯಾಪಾರೀಕರಣ ಗೊಂಡಿರಲಿಲ್ಲ. ಜೀವನಾವಶ್ಯಕ ವಸ್ತುವಾಗಿ ವಿನಿಮಯ ಪದ್ಧತಿ ರೂಢಿಯಲ್ಲಿತ್ತು. ನಿಧಾನವಾಗಿ ಕೃಷಿಯಲ್ಲಿ ಆವಿಷ್ಕರಣವಾದಂತೆ ಸ್ತ್ರೀಯರ ಕೈತಪ್ಪಿ ಪುರುಷ ವಶವಾಗುತ್ತಾ ಹೋಯಿತು. ನಂತರ ವ್ಯಾಪಾರೀಕರಣಗೊಂಡು ಅದೊಂದು ಪೈಪೋಟಿಯ ಕ್ಷೇತ್ರವಾಗಿ ಪುರುಷ ಅದರ ಒಡೆತನ ಪಡೆದು ಸ್ತ್ರೀಯರನ್ನು ಅದರಲ್ಲಿ ದುಡಿಯುವ ಶ್ರಮಿಕ ವಲಯವನ್ನಾಗಿ ಮಾಡಿಕೊಂಡು ತಾನು ಒಡೆಯನಾಗಿಯೇ ಉಳಿದ. ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ೯೦ರಷ್ಟು ಹೆಣ್ಣು ಮಕ್ಕಳು ಕೃಷಿಸಂಬಂಧಿ ಚಟುವಟಿಕೆಯಲ್ಲೇ ತೊಡಗಿಸಿಕೊಂಡಿರುತ್ತಾರೆ. ಹಾಗಾಗಿ ಗ್ರಾಮೀಣ ಕುಟುಂಬಗಳಲ್ಲಿ ಹೆಣ್ಣುಮಕ್ಕಳು ಆರ್ಥಿಕ ಸ್ವಾವಲಂಬಿಗಳಾಗಿರುತ್ತಾರೆ. ಎಲ್ಲಿ ಸ್ತ್ರೀಯರು ಕೃಷಿ ಸಂಬಂಧಿ ಶ್ರಮ ನಂಬಿ ಬದುಕುತ್ತಿರುವರೋ ಅಲ್ಲಿ ಶೋಷಣೆ ಕಡಿಮೆ. ಇದನ್ನು ನಾವು ಗ್ರಾಮೀಣ ಜನರ ಜನಪದದಲ್ಲಿ ಕಾಣಬಹುದು. ಅಲ್ಲೆಲ್ಲ ಸುಗ್ಗಿ, ಹಬ್ಬ, ಮದುವೆ, ಸಮಾರಂಭಗಳು, ಜಾತ್ರೆ, ಉತ್ಸವ, ತವರಿನ ಸಡಗರ, ಗಂಡನೊಂದಿಗೆ ವಿರಸಕ್ಕಿಂತ, ಸರಸದ ಹಾಡುಗಳು ಹೆಚ್ಚು ದೊರೆಯುತ್ತವೆ. ಮೇಲ್ವರ್ಗದಲ್ಲಿ ಪತಿ ಪತ್ನಿಯ ನಡುವೆ ಗುರುತಿಸುವಷ್ಟು ಅಂತರವನ್ನು ಕೆಳವರ್ಗದ ಅದರಲ್ಲೂ ಕೃಷಿ ವೃತ್ತಿಯವರಲ್ಲಿ ಕಡಿಮೆ ಇರುತ್ತದೆ. ಇಲ್ಲಿ ಹೆಂಡತಿ ಗಂಡನನ್ನು ನೇರವಾಗಿ ಪ್ರತಿಭಟಿಸುವ ಮನೋಧರ್ಮವನ್ನು ಹೊಂದಿರುತ್ತಾಳೆ. ಅದಕ್ಕೆ ಅವಳ ಆರ್ಥಿಕ ಬಲವೇ ಕಾರಣವೆನ್ನಬಹುದು. ಆದರೆ ಮೇಲ್ವರ್ಗದಲ್ಲಿ ಹೆಣ್ಣು ಗಂಡಿನ ವಿರುದ್ಧ ಧ್ವನಿ ಎತ್ತುವುದಿಲ್ಲ. ಕಾರಣ ಅವಳು ಆರ್ಥಿಕವಾಗಿ ಗಂಡನನ್ನೇ ಅವಲಂಬಿಸಿರುತ್ತಾಳೆ.

ಕೃಷಿಯನ್ನು ಹೊರತುಪಡಿಸಿ ಸ್ತ್ರೀಯರು ತೊಡಗಿರುವುದು ಗೃಹಕೈಗಾರಿಕೆಗಳಲ್ಲಿ, ಈ ವೃತ್ತಿ ಕ್ಷೇತ್ರಗಳು ಲಾಭದಾಯಕ ಕ್ಷೇತ್ರಗಳಾಗಿರಬೇಕು. ಅವು ರಾಜ್ಯಾದಾಯದ ಮೂಲವಾಗಿವೆ. ವಿವಿಧ ವೃತ್ತಿಗಳ ಮೇಲೆ ವಿಧಿಸುತ್ತಿದ್ದ ತೆರಿಗೆ ಇದಕ್ಕೆ ಆಧಾರವಾಗಿವೆ. ಆದರೆ ಸ್ತ್ರೀಯರು ಇಂಥ ವೃತ್ತಿಗಳಲ್ಲಿ ತೊಡಗಿರುವುದರ ಬಗ್ಗೆ ಶಾಸನಗಳು ನಮಗೆ ನೀಡುವ ಮಾಹಿತಿ ನೀಡುವುದಿಲ್ಲ. ಕ್ರಿ.ಶ. ೧೨ನೇ ಶತಮಾನದಲ್ಲಿ ಬಾಳಿದ ವಚನಗಾರ್ತಿಯ ವಚನಗಳಿಂದ ಅವರೇ

ಉಲ್ಲೇಖಿಸಿದಂತೆ ಅವರ ವೃತ್ತಿಗಳ ಬಗ್ಗೆ ಮಾಹಿತಿ ದೊರೆಯುತ್ತದೇ ಅಲ್ಲದೆ ವೃತ್ತಿ ಮಹತ್ವ ನೈಪುಣ್ಯತೆ ಬೆಳಕಿಗೆ ಬರುತ್ತದೆ.

ಕದಿರಕಾಯಕದ ಕಾಳವ್ವೆ ತಾನು ನೂಲುವ ರಾಟೆಯ ಬಗ್ಗೆ ಅನುಭವದ ಮಾತುಗಳನ್ನು ತನ್ನ ವಚನದಲ್ಲಿ ಉಲ್ಲೇಖಿಸುತ್ತಾಳೆ.

ಕದಿರರೆಮ್ಮವ್ವೆ ತನ್ನ ವಚನಗಳಲ್ಲಿ
ನಾ ತಿರುಹುವ ರಾಟೆಯ; ಕುಲಜಾತಿಯ ಕೇಳಿರಣ್ಣ
ಅಡಿಯ ಹಲಗೆ ಬ್ರಹ್ಮ; ತೋರಣ ವಿಷ್ಣು;
ನಿಂದ ಬೊಂಬೆ ಮಹಾರುದ್ರ;
ರುದ್ರನ ಬೆಂಬಳಿಯವೆರಡು ಸೂತ್ರಕರ್ಣ
ಅರಿವೆಂಬ ಕದಿರು, ಭಕ್ತಿಯೆಂಬ ಕೈಯಲ್ಲಿ ತಿರುಹಲಾಗಿ
ಸುತ್ತಿತು ನೂಲು; ಕದಿರು ತುಂಬಿತ್ತು.
ರಾಟೆಯ ತಿರುಹಲಾರೆ–ಎನ್ನಯ ಗಂಡ ಕುಟ್ಟಿಹ
ಇನ್ನೇವೆ ಕದಿರರೆಮ್ಮಿಯೊಡೆಯ ಗುಮ್ಮೇಶ್ವರ.

(ವೀರಣ್ಣ ರಾಜೂರು(ಸಂ); ಶಿವಶರಣೆಯರ ವಚನ ಸಂಪುಟ–೫ ಕದಿರರೆಮ್ಮವ್ವೆ ವಚನಗಳು, ಪುಟ ೨೧೨).

ಕದಿರು ಎಂದರೆ ರಾಟೆಯಲ್ಲಿ ನೂಲು ಹೊರಡುವ ಕಡ್ಡಿ. ಈ ಮೇಲಿನ ಎರಡು ವಚನಗಳಿಂದ ಬಟ್ಟೆ ನೇಯುವ ವೃತ್ತಿಯಲ್ಲಿ ತೊಡಗಿರುವ ಕಾಳವ್ವೆ, ರೆಮ್ಮವ್ವೆ ಬಗ್ಗೆ ತಿಳಿದುಬರುವುದಷ್ಟೇ ಅಲ್ಲ, ಅವರು ವೃತ್ತಿ ನೈಪುಣ್ಯತೆಯನ್ನು ಹೊಂದಿದ್ದರು. ರೆಮ್ಮವ್ವೆ ಹೇಳುವ ನೂಲುವ ಯಂತ್ರದ ಪ್ರತಿಯೊಂದು ಭಾಗಗಳನ್ನು ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ಹೋಲಿಸುವ ಮೂಲಕ ಭಕ್ತಿಯನ್ನು ಕುರಿತು ಮುಖ್ಯವಾಗಿ ವಿವರಿಸುವ ರೀತಿಯಲ್ಲಿ ಕದಿರರೆಮ್ಮವ್ವೆಗೆ ನೂಲುವ ರಾಟೆಯ ಬಗ್ಗೆ ನೀಡುವ ಮಾಹಿತಿ, ನೆಯ್ಗೆ ಕ್ಷೇತ್ರದಲ್ಲಿ ಸ್ತ್ರೀಯರ ಪಾತ್ರ ಮತ್ತು ಅವರ ಶ್ರಮ ಮುಖ್ಯವಾಗಿತ್ತು ಎಂಬ ಮಾಹಿತಿಯನ್ನು ಉಲ್ಲೇಖಿಸುತ್ತದೆ. ಅದರಲ್ಲಿ ಅವರ ಪಾಲು ಹೆಚ್ಚಿನ ಪ್ರಮಾಣದಲ್ಲಿತ್ತು.

"ಕನ್ನಡಿ ಕಾಯಕದ ರೇವಮ್ಮೆ ಕೈಯಲ್ಲಿ ಕನ್ನಡಿಯಿರಲು ತನ್ನ ತಾ ನೋಡಬಾರದೆ?"(ವೀರಣ್ಣ ರಾಜೂರು(ಸಂ); ಶಿವಶರಣೆಯರ ವಚನ ರೇವಮ್ಮೆ, ಸಂಪುಟ–೫, ಪುಟ ೨೧೩). ಕನ್ನಡಿಯಂತಹ ಸೂಕ್ಷ್ಮ ಮತ್ತು ಕ್ಲಿಷ್ಟಕರವಾದ ಕಾಯಕದಲ್ಲಿ ಸ್ತ್ರೀಯರು ತೊಡಗಿದ್ದರು. ಇಂಥ ವೃತ್ತಿಗಳಲ್ಲಿ ಸ್ತ್ರೀಯರ ನಿರ್ವಹಣೆ ಇರುತ್ತದೆನ್ನುವುದನ್ನು ಊಹಿಸಲು ಸಾಧ್ಯವಿಲ್ಲ. ಆಧುನಿಕ ಕಾಲದಲ್ಲಿ ಗಾಜಿನಂತಹ ಸೂಕ್ಷ್ಮ ಕೆಲಸಗಳನ್ನು ಯಂತ್ರೋಪಕರಣಗಳು ಮಾಡುವ ಕೆಲಸವನ್ನು ಹನ್ನೆರಡನೇ ಶತಮಾನದಲ್ಲಿ ಸ್ತ್ರೀಯರು ಮಾಡುತ್ತಿದ್ದರೆಂದರೆ ಅವರ ವೃತ್ತಿ ನೈಪುಣ್ಯತೆ ಆಗಾಧವಾಗಿತ್ತೆನ್ನುವುದರಲ್ಲಿ ಯಾವುದೇ ಸಂಶಯವಿಲ್ಲ. ವೃತ್ತಿ ಕ್ಷೇತ್ರಗಳಲ್ಲಿ

ಸ್ತ್ರೀಯರು ಸಕ್ರಿಯವಾಗಿ ತೊಡಗಿಸಿಕೊಂಡಿದ್ದರಿಂದ ಕುಟುಂಬದ ಆರ್ಥಿಕ ಮೂಲವಾಗಿದ್ದರು. ಕಾಲಕಣ್ಣಿಯ ಕಾಮಮ್ಮನು ತನ್ನ ಒಂದು ವಚನದಲ್ಲಿ ತನ್ನ ವೃತ್ತಿಯ ಮೂಲಕ ಭಕ್ತಿಯನ್ನು ಹೀಗೆ ವ್ಯಕ್ತಪಡಿಸಿದ್ದಾಳೆ.

ಎನ್ನ ಕರಣಂಗಳ ಲಿಂಗದಲ್ಲಿ ಕಟ್ಟುವೆ
ಗುರುಲಿಂಗ ಜಂಗಮದ ಕಾಲ ಕಟ್ಟುವೆ;

(ವೀರಣ್ಣ ರಾಜೂರು(ಸಂ); ಶಿವಶರಣೆಯರ ವಚನ ಸಂಪುಟ-೫, ಕಾಮಮ್ಮನ ವಚನ, ಪುಟ ೨೧೪). ಕಾಮಮ್ಮನದು ಹಗ್ಗ ಹೊಸೆಯುವ ಕಾಯಕ. ತಾನು ಹೊಸೆದ ಹಗ್ಗದಿಂದಲೇ ಮನವೆಂಬ ಭಕ್ತಿಯನ್ನು ಅತ್ತಿತ್ತ ಹರಿಯದಂತೆ ಕಟ್ಟಿಹಾಕಿದ್ದಾಳೆ. ಹಗ್ಗ ಹೊಸೆಯುವಲ್ಲಿ ಕೈ ಮತ್ತು ಕಾಲಿನ ತೊಡೆಯ ಭಾಗದ ಬಿಗಿಯಾದ ಹಿಡಿತದಿಂದ ಹಗ್ಗ ತಯಾರಿಸಲಾಗುತ್ತದೆ. ತೋಳ್ಬಲ ವ್ಯಯವಾಗುತ್ತದೆ. ಇಂಥ ಕ್ಲಿಷ್ಟವಾದ ಕೆಲಸವನ್ನು ಸ್ತ್ರೀಯರು ಮಾಡುತ್ತಿದ್ದರು. ಮಾತೃ ಸಂಸ್ಕೃತಿಯಲ್ಲಿ ಹೆಣ್ಣು ಕೃಷಿ ವಲಯ ವಿಸ್ತರಣೆಯ ನಂತರ ಕುಟುಂಬದಲ್ಲಿ ಕೌಟುಂಬಿಕ ಬಳಕೆಗೆ ಬೇಕಾಗುವಂತಹ ವಸ್ತುಗಳನ್ನು ತಾನೇ ತಯಾರಿಸಿಕೊಳ್ಳುತ್ತಿದ್ದಳೆಂದು ಅಧ್ಯಯನ ಮಾಡಿದೆವು. ಅಂದರೆ ಅಡಿಗೆ ಬೇಯಿಸಲು ಮಡಕೆ, ವಸ್ತುಗಳನ್ನು ಸಂಗ್ರಹಿಸಿಡಲು ಬುಟ್ಟಿ, ಹೀಗೆ ಅಗತ್ಯವಾದ ವಸ್ತುಗಳನ್ನು ಬಿಡುವಿನ ವೇಳೆಯಲ್ಲಿ ತಾನೇ ತಯಾರಿಸಿಕೊಳ್ಳುತ್ತಿದ್ದಳು. ಅವೇ ವೃತ್ತಿಯಾಗಿ ಮಾರ್ಪಾಡುಗೊಂಡು ಪುರುಷನ ಯಜಮಾನಿಕೆ ಹಸ್ತಾಂತರವಾಗಿರುವುದು. ಆದರೆ ಉತ್ಪಾದನಾ ವೃತ್ತಿಯಲ್ಲಿ ತೊಡಗಿರುವುದು ಹೆಣ್ಣು ಎನ್ನುವುದು ನಮಗೆ ಇಂಥ ವಚನಗಳಿಂದ ತಿಳಿದುಬರುತ್ತದೆ.

ಕೊಟ್ಟಣದ ಸೋಮಮ್ಮ ಈಕೆಯದು ಭತ್ತ ಕುಟ್ಟುವ ಕಾಯಕ. ಇದು ಒಂದು ವೃತ್ತಿಯಾಗಿತ್ತು. ಕೆಳವರ್ಗದ ಮತ್ತು ಬಡವರು ತಮ್ಮ ಆಹಾರಕ್ಕೆ ಬೇಕಾಗುವ ಭತ್ತವನ್ನು ತಾವೇ ಕುಟ್ಟಿ ಅಕ್ಕಿ ತಯಾರು ಮಾಡಿಕೊಳ್ಳುತ್ತಾರೆ. ಆದರೆ ಶ್ರೀಮಂತ ಮತ್ತು ಮೇಲ್ವರ್ಗದವರಿಗೆ ಸಿದ್ಧಪಡಿಸಿದ ಅಕ್ಕಿ ಬೇಕಾಗುತ್ತದೆ. ಅಂಥವರಿಗೆ ಅಕ್ಕಿ ತಯಾರಿಸಿಕೊಡುವ ವೃತ್ತಿ ಈಕೆಯದ್ದಾಗಿರಬಹುದು. ಸೋಮಮ್ಮನ ವಚನದಿಂದಲೇ ಇದು ತಿಳಿಯುತ್ತದೆ. 'ಹದತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ'(ವೀರಣ್ಣ ರಾಜೂರು(ಸಂ); ಶಿವಶರಣೆಯರ ವಚನ ಸಂಪುಟ-೫, ಕೊಟ್ಟಣದ ಸೋಮಮ್ಮ, ಪುಟ ೨೧೬). ಭತ್ತ ಕುಟ್ಟುವುದು ದೈಹಿಕ ಶ್ರಮದ ಕೆಲಸವಾಗಿದೆ. ಈಗಿನಂತೆ ಯಂತ್ರೋಪಕರಣಗಳಿಲ್ಲದ ಕಾಲದಲ್ಲಿ ಸ್ತ್ರೀಯರು ಅನಿವಾರ್ಯವಾಗಿ ಈ ವೃತ್ತಿಯನ್ನು ಮಾಡಲೇಬೇಕಾಗಿತ್ತು. ಕುಟ್ಟುವ ಬೀಸುವ ಕೆಲಸಗಳು ಗಂಡಸರಿಗೆ ಗೌರವ ತರುವಂತಹದಲ್ಲ ಎಂದು ಭಾವಿಸಿದ್ದರು. ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲಾದೇವಿ ಬಹುಶಃ ಕುಂಬಾರಿಕೆ ವೃತ್ತಿಯನ್ನು ಮಾಡುತ್ತಿರಬೇಕು. "ಹದಮಣ್ಣಲ್ಲದೆ ಮಡಿಕೆಯಾಗಲಾರದು, ವ್ರತಹೀನನ ಬೆರೆಯಲಾಗದು". ಕುಂಭೇಶ್ವರ ಆಕೆಯ ವಚನಗಳ ಅಂಕಿತ. ಕುಂಬಾರಿಕೆ ಕುಂಬಾರ ಎಂಬ ಪುರುಷನನ್ನು ಕುರಿತು ಸಂಬೋಧನೆ (ಪುಲ್ಲಿಂಗ)ಯಾಗಿದೆ. ಕುಂಬಾರ ಕುಟುಂಬಕ್ಕೆ ಸೇರಿದವಳನ್ನು

ಕುಂಬಾರಕಿ ಎಂದು ಸಂಬೋಧಿಸಲಾಗುತ್ತದೆ. ಅಷ್ಟೆ ಆಕೆಗೆ ವೃತ್ತಿ ಸೂಚಕವಾಗಿ ಬಳಕೆಯಾಗಿಲ್ಲ. ಆದರೂ ಮಡಕೆ ಮಾಡುವುದರ ಹಿಂದೆ ಸ್ತ್ರೀ ಶ್ರಮವಿರುತ್ತದೆ, ಕುಟುಂಬದಲ್ಲಿ ಪುರುಷನಿಗೆ ಮಡಿಕೆ ಮಾಡುವಲ್ಲಿ ಆಕೆಯ ಸಹಾಯ ಬೇಕೇ ಬೇಕು. ಅಲ್ಲದೆ ಮಡಕೆ ಮಾಡಲು ಬಳಸುವ ಮಣ್ಣಿನ ಹದ ಕುರಿತು ಆಕೆ ಹೇಳಿರುವ ವಚನದ ಸಾಲು ಆಕೆ ಆ ವೃತ್ತಿಯಲ್ಲಿ ನೈಪುಣ್ಯ ಪಡೆದಿರುವಂತಿದೆ.

ಸಮಾಜದಲ್ಲಿ ಸ್ತ್ರೀಯರದ್ದು ಕೃಷಿಯಷ್ಟೇ ಅಲ್ಲದೆ ಗುಡಿ ಕೈಗಾರಿಕೆ, ಕರಕುಶಲ ವಸ್ತುಗಳ ತಯಾರಿಕೆಯಲ್ಲೂ ಅವರ ಪಾತ್ರವಿದೆ. ಅಂದರೆ ಒಂದು ಕುಟುಂಬ ಮತ್ತು ಸಮಾಜದ ಆರ್ಥಿಕತೆಯ ಕೇಂದ್ರ ಬಿಂದುವಾಗಿ ಪ್ರಧಾನ ಪಾತ್ರ ವಹಿಸಿರುವಳು. ಕೆಳವರ್ಗಗಳಲ್ಲಿ ಅವಳು ಕುಟುಂಬ ಮುನ್ನಡೆಸುವ ಆರ್ಥಿಕ ಶಕ್ತಿಯಾಗಿದ್ದಾಳೆ. ಅವಳ ಆದಾಯವೇ ಕುಟುಂಬಕ್ಕೆ ಮೂಲಾಧಾರವಾಗಿರುವುದರಿಂದ ಮೇಲ್ವರ್ಗದಲ್ಲಿ ಸ್ತ್ರೀ ಪುರುಷರ ನಡುವೆ ಇರುವ ಅಸಮಾನತೆ ಕೆಳವರ್ಗದಲ್ಲಿ ಕಾಣುವುದಿಲ್ಲ. ಕೆಳವರ್ಗದ ಸ್ತ್ರೀಯರಲ್ಲಿರುವ ಆರ್ಥಿಕ ಸ್ವಾಮ್ಯ ಅವರನ್ನು ಆಂತರಿಕವಾಗಿ ಪ್ರಬಲರನ್ನಾಗಿಸಿದೆ. ಇಂದಿಗೂ ಕೂಡ ಬುಟ್ಟಿ, ಮರ(ಧಾನ್ಯ ಸ್ವಚ್ಛ ಮಾಡುವ), ಕಸಬರಿಗೆ ಕಟ್ಟುವ, ಮಡಕೆ ತಯಾರಿಕೆ, ಕಟ್ಟಿಗೆ, ಮಣ್ಣಿನ ಬೊಂಬೆಗಳು, ಆಟಿಕೆಗಳನ್ನು ತಯಾರಿಸುವವರು ಮನೆಯಲ್ಲಿ ಹೆಣ್ಣುಮಕ್ಕಳೆ.

ಕಲಾರಾಧಕರು ಕಲಾವಿದರನ್ನು ಪೋಷಿಸುತ್ತಿದ್ದರಿಂದ ಆಗ ವೃತ್ತಿನಿರತ ಕಲಾವಿದರು ಇದ್ದರು. ತಾಳದ ಮಾಕಜ್ಜಿ(E.C. XXIV, ಗುಬ್ಬಿ, ೭೮). ಹಾಡುವ ಕಾಮವ್ವೆ ಮತ್ತು ನಾಗವ್ವೆ (ಕ.ವಿ.ಶಾ. ಸಂಪುಟ–೧, ಹರಪನಹಳ್ಳಿ, ೯೯), ಶ್ರೀ ಕಲಿದೇವರ ತೊತ್ತು ಪಾತ್ರದ ಸಿರಿಯವ್ವೆ (ಕ.ವಿ.ಶಾ. ಸಂಪುಟ–೧, ಹರಪನಹಳ್ಳಿ, ೯೯). ಒಬ್ಬ ಸಿಬಾರಗಿತ್ತಿ ದತ್ತಿ ಬಿಟ್ಟರುವಳು(E.C. XXIV, ಗುಬ್ಬಿ, ೭೮). ಎಣ್ಣೆ ಕೊಂಡು ಮಾರುವ ಕುಂಚಡಗಿತ್ತಿಯರು ಇದ್ದರೆಂದು(SII. XVIII, 266) ಶಾಸನ ಮಾಹಿತಿ ಇದೆ.

**೪. ೩. ೩. ಶಿಕ್ಷಣ ಮತ್ತು ಸಾಹಿತ್ಯ**

ಸ್ತ್ರೀಯರ ಶಿಕ್ಷಣದ ಬಗ್ಗೆ ಶಾಸನೋಕ್ತ ಆಧಾರಗಳು ಅಷ್ಟಾಗಿ ದೊರೆತಿಲ್ಲವಾದರೂ ದೊರೆತಿರುವ ಕೆಲವು ಶಾಸನಗಳು ಮೇಲ್ವರ್ಗದ ಮತ್ತು ರಾಣಿಯರ ಶಿಕ್ಷಣದ ಬಗ್ಗೆ ಮಾಹಿತಿ ನೀಡುತ್ತವೆ ಹೊರತು ಸಾಮಾನ್ಯ ಮಹಿಳೆಯರ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಶಿಕ್ಷಣ ಮೇಲ್ವರ್ಗದವರ ಮಕ್ಕಳಿಗೆ ಮತ್ತು ರಾಜಮನೆತನದವರಿಗೆ ಸಾಂಗೋಪಾಂಗವಾಗಿ ದೊರೆತಂತೆ ಸಾಮಾನ್ಯ ವರ್ಗದವರಿಗೆ ದೊರೆತಿಲ್ಲ. ಕೆಳವರ್ಗದವರು ಶಿಕ್ಷಣಕ್ಕೆ ಅರ್ಹರಲ್ಲ ಎಂಬ ಭಾವನೆ ಪ್ರಾಚೀನ ಕಾಲದಿಂದಲೂ ಬಂದಿದೆ. ಅದರಲ್ಲೂ ಮಹಿಳೆಯರ ವಿಚಾರ ಬಂದಾಗ ಅವರಿಗೆ ಶಿಕ್ಷಣ ಯಾಕೆ ಬೇಕು? ಎಂದು ಪ್ರಶ್ನೆ ಮಾಡುವಂತಹ ಪರಿಸ್ಥಿತಿ ಇತ್ತೆನ್ನಬಹುದು. ಬ್ರಾಹ್ಮಣರು ಬ್ರಹ್ಮನ ತಲೆಯಿಂದ ಜನಿಸಿದವರು, ಅವರಿಗೆ ಮಾತ್ರ ಬೌದ್ಧಿಕ ಸಾಮರ್ಥ್ಯವಿರುವುದು. ಹಾಗಾಗಿ

ಅವರು ಮಾತ್ರ ಶಿಕ್ಷಣ ಪಡೆಯಲು ಅರ್ಹರು. ಇನ್ನು ರಾಜಮನೆತನದವರು ರಾಜ್ಯ ರಕ್ಷಣೆಯ, ಮುನ್ನೆಡೆಸುವ ಜವಾಬ್ದಾರಿ ಇರುತ್ತದೆ. ಹಾಗಾಗಿ ಶಿಕ್ಷಣ ದೊರೆಯುತ್ತದೆ. ರಾಜಕುಮಾರರ ಜೊತೆಗೆ ರಾಜಕುಮಾರಿಯರಿಗೂ ಕಲಾ ಶಿಕ್ಷಣದ ಜೊತೆಗೆ ಶಾಸ್ತ್ರೋಕ್ತ ಶಿಕ್ಷಣ ನೀಡುತ್ತಿದ್ದರು. ಶಿಕ್ಷಣ ದೊರೆತ ಕಾರಣಕ್ಕೆ ರಾಣಿಯರು ಕವಯಿತ್ರಿಯರಾಗಿ, ಆಡಳಿತಗಾರ್ತಿಯರಾಗಿ ಜವಾಬ್ದಾರಿ ನಿರ್ವಹಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಮಧ್ಯಯುಗದ ಮಹಿಳೆಯರಿಗೆ ದೊರೆತಿದ್ದ ಶಿಕ್ಷಣದ ಬಗ್ಗೆ ಅಧ್ಯಯನ ಮಾಡುವುದಕ್ಕೂ ಪೂರ್ವದಲ್ಲಿ ಪ್ರಾಚೀನ ಕಾಲದಲ್ಲಿ ಸ್ತ್ರೀ ಶಿಕ್ಷಣದ ಬಗ್ಗೆ ಒಂದು ಸಣ್ಣ ಪಕ್ಷಿನೋಟ ಇಲ್ಲಿದೆ. ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಪ್ರಾಚೀನ ಕಾಲದಿಂದಲೂ ನಿರ್ಲಕ್ಷ್ಯವೇ. ಈ ನಿರ್ಲಕ್ಷ್ಯವೆಂಬ ಅಳಲಿಗೆ ಸಾಂತ್ವನದ ರೂಪದಲ್ಲೋ ಅಥವಾ ಈ ವಾದದ ವಿರೋಧವಾಗಿ ಗಟ್ಟಿಯಾದ ಧ್ವನಿಯೊಂದು ಪ್ರಾಚೀನ ಸ್ತ್ರೀ ವಿದ್ವಾಂಸರ ಹೆಸರುಗಳನ್ನು ದುತ್ತೆಂದು ನಮ್ಮೆದುರು ಉತ್ತರವಾಗಿ ನಿಲ್ಲಿಸುತ್ತದೆ. ಆ ಉತ್ತರ ರೂಪದಲ್ಲಿ ಬರುವ ಮಹಿಳೆಯರೇ ಗಾರ್ಗಿ, ಮೈತ್ರೇಯಿ, ಅರುಂಧತಿ. ಹೀಗೆ ಕೆಲವೇ ಮಹಿಳೆಯರ ಹೆಸರುಗಳು. ಇವರು ಪ್ರಾಚೀನ ವಿದ್ಯಾವಂತ ಮಹಿಳೆಯರೆಂದು ಸಾರ್ವತ್ರಿಕವಾಗಿ ಎಲ್ಲರಿಗೂ ಚಿರಪರಿಚಿತ. ಸರ್ವಕಾಲಕ್ಕೂ ಸ್ತ್ರೀ ಶಿಕ್ಷಣ ಅಥವಾ ವಿದ್ಯಾಭ್ಯಾಸಕ್ಕೆ ಉತ್ತರವಾಗಿ ನಿಲ್ಲುವವರು ಇವರೇ. ಸ್ತ್ರೀಯರು ಎಂದರೆ ಅಥವಾ ಪ್ರಾಚೀನ ಕಾಲದ ಸ್ತ್ರೀ ಶಿಕ್ಷಣವೆಂದರೆ ಇವರಷ್ಟೆ? ವೇದಗಳಲ್ಲಿ ಹೆಸರಿಸಿರುವ ಶಿಕ್ಷಿತ ಸ್ತ್ರೀಯರೆಲ್ಲರೂ ಪ್ರಯಾಸವಿಲ್ಲದೆ ನಿರಾತಂಕವಾಗಿ ಶಿಕ್ಷಣ ದೊರೆಯಬಹುದಾದಂಥ ಶಿಕ್ಷಿತ ಕೌಟುಂಬಿಕ ಹಿನ್ನೆಲೆಯಿಂದ ಬಂದಂಥವರೇ. ಅರಮನೆಯಲ್ಲಿ ರಾಜಕುಮಾರಿಯರಿಗೆ ಶಿಕ್ಷಣ ದೊರೆಯುವಂತೆ ವೇದಕಾಲದ ಸ್ತ್ರೀಯರಿಗೂ ದೊರೆತಿದೆ. ಅವರೆಲ್ಲರೂ ಶಿಕ್ಷಣ ತಾನಾಗಿಯೇ ದೊರೆಯುವಂತಹ ಕೌಟುಂಬಿಕ ಹಿನ್ನೆಲೆ ಇರುವಂಥವರು. ಇವರಾರೂ ಸಾಮಾನ್ಯವರ್ಗದ ಮಹಿಳೆಯರಲ್ಲ. ಇವರು ಋಷಿ ಪುತ್ರಿಯರು, ಋಷಿ ಪತ್ನಿಯರೇ ಆಗಿರುವರು. ಹಾಗಾದರೆ ಇಡೀ ಸ್ತ್ರೀ ಸಮುದಾಯದ ಶಿಕ್ಷಣ ಎಲ್ಲಿ ಹೋಯಿತು? ಇದಕ್ಕೆ ಉತ್ತರವಿಲ್ಲವೆಂದಲ್ಲ, ಸಾಮಾನ್ಯ ಮಹಿಳೆಯರಿಗೆ ಶಿಕ್ಷಣವಿಲ್ಲವೆಂಬುದೇ ಇದಕ್ಕೆ ಉತ್ತರ.

ಸ್ಥಾಪಿತ ಧರ್ಮಗಳು ವರ್ಗರಹಿತ ಸಮಾಜಕ್ಕಾಗಿ ತತ್ವಬೋಧನೆಗಳನ್ನು ಮಾಡಿದರು. ಆದರೆ ಲಿಂಗಬೇಧಕ್ಕಾಗಿ ಹೋರಾಟ ಮಾಡಲಿಲ್ಲ. ಸಮಾನತೆ, ಅಹಿಂಸೆ ಬೋಧನೆ ಮಾಡಿದ ಧರ್ಮಗಳು ಹೆಣ್ಣಿನ ಬಗ್ಗೆ ತಾಳಬೇಕಿದ್ದ ಮಾನವೀಯತೆಯನ್ನು ಒತ್ತಿ ಹೇಳಲಿಲ್ಲ. ಸ್ಥಾಪಿತ ಧರ್ಮಗಳ ದೃಷ್ಟಿಕೋನದಲ್ಲೂ ಹೆಣ್ಣೆಂದರೆ ಮಾಯೆ, ದೌರ್ಬಲ್ಯದ ಸಂಕೇತ, ಅವಳೊಂದಿಗಿನ ಒಡನಾಟ ದುರ್ಗತಿ ಪ್ರಾಪ್ತಿ ಎಂಬಂತೆ ವೈದಿಕರ ತಪ್ಪುಕಲ್ಪನೆಯನ್ನು ತಾವು ನಂಬಿದ್ದಾರೆ. ಸ್ಥಾಪಿತ ಧರ್ಮಗಳೆಲ್ಲವೂ ವೈದಿಕ ಪರಿಸರದಲ್ಲಿ ಜ್ಞಾನೋದಯ ಪಡೆದವುಗಳು ವೈದಿಕ ಧರ್ಮದ ಪ್ರಭಾವದಿಂದ ದೂರ ಉಳಿದು ತಮ್ಮ ಅಸ್ತಿತ್ವ ಕಂಡುಕೊಳ್ಳಲು ಸಾಧ್ಯವಿಲ್ಲವೆಂದಾದ ಮೇಲೆ ಬದಲಾವಣೆಯೂ ಸಾಧ್ಯವಿಲ್ಲ. ಪ್ರತಿ ವ್ಯವಸ್ಥೆಯಲ್ಲೂ ಹಾಗೆಯೇ ಮುಂದುವರಿದಿದೆ.

ಜೈನ ಮತ್ತು ಬೌದ್ಧಧರ್ಮಗಳೆರಡೂ ಅಹಿಂಸೆಗೆ ಒತ್ತು ಕೊಟ್ಟು ವರ್ಗಭೇಧ, ಲಿಂಗಭೇದವಿಲ್ಲದ ಧರ್ಮ ಎನಿಸಿಕೊಂಡಿದ್ದರೂ ಅಲ್ಲೂ ಕೂಡ ಶಿಕ್ಷಣ ಪಡೆದ ಸ್ತ್ರೀಯರು ತೀರ ವಿರಳ. ಹರಿಭದ್ರ ಸೂರಿ ತನ್ನನ್ನು "ಯಾಕಿನಿ ಮಹತ್ತರಾ ಸೂನು" ಎಂದು ಕರೆದುಕೊಂಡಿದ್ದಾನೆ. ಅಂದರೆ ಅವಳು ಮಹಾನ್ ಪಂಡಿತೆಯಾಗಿದ್ದಳು. ದಮ್ಮ ದಿನ್ನ ಎಂಬುವರು ಬುದ್ಧನ ಕಾಲದ ಬೋಧಕಿಯರಾಗಿದ್ದರು. ಸುಮನಾ ಮತ್ತು ಚಂಡಿ ಪಂಚಶೀಲಗಳ ಕುರಿತು ಬುದ್ಧನೊಡನೆ ಚರ್ಚಿಸುತ್ತಿದ್ದರು(ಜೋತ್ಸ್ನಾ ಕಾಮತ್; ಮಹಿಳೆ ಒಂದು ಅಧ್ಯಯನ, ಪುಟ ೩೪, ೩೫). ಇವರಲ್ಲಿ ಪ್ರಬಲ ಕೌಟುಂಬಿಕ ಹಿನ್ನೆಲೆ ಇಲ್ಲವೇ ಅವರ ಸನ್ಯಾಸಿನಿ ಜೀವನದಿಂದ ಅವರಿಗೆ ಲಭಿಸಿದ್ದಾಗಿರಬಹುದು. ಇಡೀ ಸ್ತ್ರೀ ಕುಲವೇ ಶಿಕ್ಷಣ ಪಡೆದಿದ್ದರೆನ್ನುವುದಕ್ಕೆ ಇವರೇ ಸಾಕ್ಷಿಗಳು. ಇವರೇ ಆ ಕಾಲದ ಸುಶಿಕ್ಷಿತ ಮಹಿಳೆಯರ ಪ್ರತಿನಿಧಿಗಳು ಎನ್ನುವುದಾದರೆ, ಇಂದು ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ಕೊಡಿ ಎಂದು ಭಾಷಣ ಕೇಳಬೇಕಾದ ಅವಶ್ಯಕತೆ ಇರಲಿಲ್ಲ. ಮೀಸಲಾತಿ ಬೇಕಾಗಿರಲಿಲ್ಲ. ಸ್ತ್ರೀ ಶಿಕ್ಷಣಕ್ಕೆ ಆಮಿಷಗಳನ್ನು ಒಡ್ಡಬೇಕಾಗಿರಲಿಲ್ಲ.

ನಾವಿಲ್ಲಿ ಅಧ್ಯಯನ ಮಾಡುವುದು ಒಂದೇ ವರ್ಗದ ಅದೂ ಉನ್ನತ ವರ್ಗದ ಮಹಿಳೆ ಶಿಕ್ಷಣವನ್ನೇ ಹೊರತು ಸಾಮಾನ್ಯ ಸ್ತ್ರೀಯರ ಕುರಿತದ್ದಾಗಿಲ್ಲ. ಸಹಜವಾಗಿಯೇ ಶಿಕ್ಷಣ ದೊರೆಯುವಂತಹ ಹಿನ್ನೆಲೆ ಇರುವವರ ಬಗ್ಗೆ. ಕ್ರಿ.ಶ. ೮–೯ನೇ ಶತಮಾನದ ಮಹಿಳಾ ಕುಲದ ಹೆಮ್ಮೆಯ ಕವಯಿತ್ರಿ ವಿಜಯಾಂಬಿಕೆ(ವಿಜ್ಜಿಕೆ). ಈಕೆಯ ಕೃತಿ ಕೌಮುದಿ ಮಹೋತ್ಸವ. ರಾಜಶೇಖರ ತನ್ನ ಕಾವ್ಯಮೀಮಾಂಸೆಯಲ್ಲಿ ಆಕೆಯ ಸಾಹಿತ್ಯಾಸಕ್ತಿಯನ್ನು ಹೀಗೆ ವರ್ಣಿಸಿದ್ದಾನೆ.

ಸರಸ್ವತೀ ಕರ್ಣಾಟೀ ವಿಜಯಂಕಾ ಜಯತ್ಯಸೌ
ಯಾ ವೈದರ್ಭಗಿರಾಂ ವಾಸಃ ಕಾಳಿದಾಸಾದನಂತರಂ

(ಕಮಲಾ ಹಂಪನಾ; ಬೊಗಸೆ; ಮಹಿಳೆ ಸುತ್ತ ಮುತ್ತ, ಪುಟ ೫). ರಾಜಶೇಖರನಂತಹ ಶ್ರೇಷ್ಠ ಲಾಕ್ಷಣಿಕ ಹೀಗೆ ವರ್ಣಿಸಿದ್ದಾನೆಂದರೆ ಆಕೆಯ ಕಾವ್ಯ ಪ್ರೌಢಿಮೆ ಹಿರಿದು. ಕಾಳಿದಾಸನ ನಂತರ ವೈದರ್ಭಿ ರೀತಿಯ(ಶೈಲಿ) ರಚನೆಗೆ ಈಕೆಯೇ ತವರು ಮನೆ ಎಂದು ಹೊಗಳಿದ್ದಾನೆ. ಈಕೆ ಸಾಹಿತ್ಯ ರಚನೆಯ ರೀತಿ ನೀತಿಗಳನ್ನು ಅರಿತಿರಬೇಕು. ಮತ್ತೊಬ್ಬ ಲಾಕ್ಷಣಿಕ ದಂಡಿ ಈಕೆಯನ್ನು 'ಸರ್ವಶುಕ್ಲಾ ಸರಸ್ವತಿ' ಎಂದು ವಿದ್ಯಾಧಿದೇವತೆ ಸರಸ್ವತಿಗೆ ಹೋಲಿಕೆ ಮಾಡಿ ಹೊಗಳಿದ್ದಾನೆ. ವಿಜಯಾಂಬಿಕೆ ಇಲ್ಲಿ ವರ್ಣಿಸಿರುವುದು ಆಕೆಯ ಬಣ್ಣವನ್ನಲ್ಲ. ಆಕೆ ವಿದ್ಯಾಧಿದೇವತೆ ಎಂಬ ಧ್ವನ್ಯರ್ಥದಲ್ಲಿ ವಿಜಯಾಂಬಿಕೆ ಇಮ್ಮಡಿ ಪುಲಿಕೇಶಿಯ ಸೊಸೆ, ಚಂದ್ರಾದಿತ್ಯನ ರಾಣಿ. ರಾಜವಂಶಕ್ಕೆ ಸೇರಿದ ಈಕೆ ತನ್ನ ಕಾವ್ಯ ಶ್ರೇಷ್ಠತೆಯನ್ನು ಕುರಿತು ಹೀಗೆ ಹೊಗಳಿಕೊಂಡಿದ್ದಾಳೆ.

ಏಕೋ ಭೂತ್ ನಲಿನಾತ್ ತತಶ್ಚ ಪುಲಿನಾತ್ ವಲ್ಮೀಕತಶ್ಚಪರಃ
ತೇ ಸರ್ವೇ ಕವಯೋ ಭವಂತಿ ಗುರುವಃ ತೇಭ್ಯೋನಮಸ್ಕುರ್ಮಹೇ
ಅರ್ವಾಚ್ಯೋಯದಿ ಗದ್ಯಪದ್ಯ ರಚನ್ಯ; ಚೇತಶ್ಚಮತ್ಕುರ್ವತೇ
ತೇಷಾಂ ಮೂರ್ಧ್ನಿದದಾಮಿ ವಾಮಚರಣಂ ಕರ್ಣಾಟ ರಾಜಪ್ರಯಾ

ಒಬ್ಬನು ತಾವರೆಯಲ್ಲಿ ಹುಟ್ಟಿದವನು(ಆದಿಬ್ರಹ್ಮ), ಇನ್ನೊಬ್ಬನು ಮರಳಲ್ಲಿ ಹುಟ್ಟಿದವನು(ವ್ಯಾಸಕವಿ), ಮತ್ತೊಬ್ಬನು ಹುತ್ತದಲ್ಲಿ ಹುಟ್ಟಿದವನು(ಆದಿಕವಿ ವಾಲ್ಮೀಕಿ) ಇವರೆಲ್ಲರೂ ಮಿಗಿಲಾದ ಕವಿಶ್ರೇಷ್ಠರೇ ಸರಿ. ಇವರಿಗೆ ನಾನು ನಮಸ್ಕರಿಸುತ್ತೇನೆ. ಅರ್ವಾಚೀನರು (ಇತ್ತೀಚಿನವರು) ಯಾರಾದರೂ ಗದ್ಯ ಪದ್ಯಗಳನ್ನು ಹೊಸೆಯುತ್ತಾ ಮನಸ್ಸನ್ನು ಚೇತನಗೊಳಿಸುವವರು ಇರುವುದಾದರೆ ಅಂತಹವರ ತಲೆಗಳ ಮೇಲೆ ಕರ್ಣಾಟ ರಾಜನ ಪ್ರಿಯೆಯಾದ ನನ್ನ ಎಡಗಾಲನ್ನು ಇಡುವೆನು(ಕಮಲಾ ಹಂಪನಾ; ಬೊಗಸೆ ಮಹಿಳೆ ಸುತ್ತ ಮುತ್ತ, ಪುಟ ೫). ಈ ರೀತಿ ಹೇಳಿರುವುದು ಅಹಂಕಾರವೆಂದು ಭಾವಿಸಿದರೂ ರಾಜಮಾರ್ಗ ಹೊಂದಿದ್ದ ಕವಿಗಳ ಮಧ್ಯದಲ್ಲಿ ಈ ರೀತಿ ತನ್ನ ಬಗ್ಗೆ ಹೇಳಿಕೊಂಡಿರುವಳೆಂದರೆ ಆಕೆಯು ಕಾವ್ಯ ರಚನೆಯ ಪಾಂಡಿತ್ಯ ಹೊಂದಿರುವುದು ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೧ನೇ ಶತಮಾನದಲ್ಲಿದ್ದಳೆನ್ನಲಾದ ಮತ್ತೊಬ್ಬ ಕವಯಿತ್ರಿ ಕಂತಿ. ಕಂತಿ ಬರಿ ಕವಯಿತ್ರಿಯಲ್ಲ, ಆಶುಕವಯಿತ್ರಿಯಾಗಿದ್ದಳು. ಕಂತಿಯ ಇರುವಿಕೆಯ ಬಗ್ಗೆ ಊಹಾಪೋಹಗಳಿವೆ. ಹೊಯ್ಸಳ ಅರಸ ಬಲ್ಲಾಳನ ಕಾಲಾವಧಿಯಲ್ಲಿ ಜೀವಿಸಿದ್ದಳೆಂದು ಹೇಳಲಾಗುವ ಕಂತಿಯ ಬಗ್ಗೆ ಅನಂತರ ಬಂದ ಕವಿಗಳು ಉಲ್ಲೇಖಿಸಿದ್ದಾರೆ. ನಾಗಚಂದ್ರ ಮತ್ತು ಕಂತಿ ಸಮಕಾಲೀನರು. ಕಂತಿ ಹಂಪನ ಸಮಸ್ಯೆ ಎಂದೇ ಖ್ಯಾತಿ ಪಡೆದ ಅಭಿನವಪಂಪ ನಾಗಚಂದ್ರ 'ಉಸಿರೆಂದಾ ಗುಣಕಂತಿಕೆಗೆ ಅಸಮಸ್ಯೆ'ಯನ್ನೆ ಕೊಟ್ಟನು. ನಾಗಚಂದ್ರ ಒಡ್ಡಿದ ಸಮಸ್ಯೆಗಳನ್ನು ಈಕೆ ಬಿಡಿಸುವ ರೀತಿ ಕಂತಿಯ ಸಾಹಿತ್ಯ ಭಂಡಾರಕ್ಕೆ ನಿದರ್ಶನವಾಗಿದೆ. 'ಹರವಿ' ಎನ್ನುವ ಪದದ ಅಕ್ಷರಗಳನ್ನು ಅದಲು ಬದಲು ಮಾಡಿ, ಒಂದೇ ಪದದಿಂದ ಅನೇಕ ಪದಗಳನ್ನು ರಚನೆ ಮಾಡಿ ಕಂದ ಪದ್ಯ ರಚನೆ ಮಾಡಿ ತೋರಿಸುವ ಕಾವ್ಯಕೌಶಲ ಹಿರಿದು.

ಕಡೆದೊಡೆಯಲ್ ಹರನಾಮಂ
ನಡುದೊಡೆಯಲ್ ಹವಿಯ ನಾಮಾಧ್ಯಕ್ಷರಮಂ
ತೊಡೆಯಲ್ಕೆ ರವಿಯ ನಾಮಂ
ಕಡೆಯಿಂದೋದಲ್ಕೆ 'ವಿರಹ' ಕೇಳೆ ಪಂಪಾ

(ಕಮಲಾ ಹಂಪನಾ; ಬೊಗಸೆ, ಮಹಿಳೆ ಸುತ್ತಮುತ್ತ, ಪುಟ ೧೫೯). ಆದರೆ ಈಕೆ ಇರುವಿಕೆ ಬಗ್ಗೆ ಮತ್ತು ಸಾಹಿತ್ಯದ ಬಗ್ಗೆ ಸಾಕಷ್ಟು ಅನುಮಾನಗಳಿದ್ದವು. ಸ್ತ್ರೀಯರಿಗೆ ಇಷ್ಟೊಂದು ಕಾವ್ಯಪ್ರೌಢಿಮೆ ಎಲ್ಲಿಂದ ಬರಬೇಕು ಎಂಬ ಕಾರಣಕ್ಕೂ ಇರಬಹುದು. ಆಕೆಯ ನಂತರ ಬಂದ ಕವಿಗಳು ಬಾಹುಬಲ ಕವಿ ತನ್ನ 'ನಾಗಕುಮಾರ ಚರಿತೆ'ಯಲ್ಲಿ 'ಸಭೆಗೆ ಮಂಗಳ ಲಕ್ಷ್ಮಿಯೆನಿಪ ಶುಭ ಗುಣ ಚರಿತೆ ಕಂತಿಯರ ಸೈಗಟ್ಟೆನಾನಭಿನವ ವಾಗ್ದೇವಿಯರ' ಎಂದು ಹೊಗಳಿದ್ದಾನೆ(ಕಮಲಾ ಹಂಪನಾ; ಬೊಗಸೆ, ಮಹಿಳೆ ಸುತ್ತಮುತ್ತ, ಪುಟ ೧೫೭). ಇದರಿಂದ ನಮಗೆ ಕಂತಿಯ ಜೀವಿತದ ಬಗ್ಗೆ ಖಚಿತವಾಗುತ್ತದೆ.

ಕ್ರಿ.ಶ. ೯೦೦–೧೨೫೦ರ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲೂಕಿನ ಚಿಕ್ಕಮಾಗಡಿಯಲ್ಲಿ ಆಳ್ವಿಕೆ ಮಾಡುತ್ತಿದ್ದರೆನ್ನಲಾದ ಸಾಮಂತ ಮನೆತನಕ್ಕೆ ಸೇರಿದ ಶ್ರೀಮತಿ ಜಕ್ಕಲಾಂಬ ರಚಿಸಿದ ಕಾವ್ಯ 'ಗುಣಾಂಕಮಾಲೆ ಚರಿತೆ'(ಅನುಪಲಬ್ಧ ಗ್ರಂಥ). 'ಶ್ರೀಮತಿ' ಎಂಬ ಕಾವ್ಯನಾಮದಿಂದ ಕಾವ್ಯ ರಚಿಸಿದ ಈಕೆ ಕುರಿತ ಉಲ್ಲೇಖ ರಾಘವಾಂಕನ ಸೋಮನಾಥ ಚರಿತೆಯಲ್ಲಿ 'ಶ್ರೀಮತಿಗಳಂ ಪಿಡಿದು' ಎಂದಿದೆ. ಈ ಸಾಲು ಆ ಕಾಲದಲ್ಲಿ ಹಲವಾರು ಜೈನರ ಮೇಲೆ ಆದ ಹಿಂಸೆ ಉಪಟಳವನ್ನು ಪದ್ಯದಲ್ಲಿ ಬರೆದಿದ್ದಾನೆ. ಅದರಲ್ಲಿ ಶ್ರೀಮತಿ ಕಾವ್ಯನಾಮ ಹೊಂದಿದ್ದ ಜಕ್ಕಲಾಂಬೆಯನ್ನು ಹಿಡಿದು ಅಪಮಾನಿಸಿದ ಕುರಿತು ಮಾಹಿತಿ ಇದೆ. ಹದಿನೈದನೇ ಶತಮಾನದಲ್ಲಿ ನೇಮರಸ ಕವಿ ತನ್ನ ಪದ್ಯದಲ್ಲಿ 'ಶ್ರೀಮತಿಯನು ಹಂಪನಾಗಚಂದ್ರನ'(ಕಮಲಾ ಹಂಪನಾ; ಬೊಗಸೆ, ಮಹಿಳೆ ಸುತ್ತಮುತ್ತ, ಪುಟ ೯೨, ೯೩). ಈ ಎಲ್ಲ ದಾಖಲೆಗಳ ಆಧಾರದ ಮೇಲೆ ಈ ಕಾಲಾವಧಿಯಲ್ಲಿ ಜಕ್ಕಲಾಂಬೆ ಎಂಬ ಕವಯಿತ್ರಿ ಜೀವಿಸಿದ್ದಳೆಂದು ಹೇಳುವುದರಲ್ಲಿ ಯಾವುದೇ ಅನುಮಾನವಿಲ್ಲ.

'ಷೋಡಶ ಭಾವನೆ'ಯೆಂಬ ಚಂಪೂ ಕಾವ್ಯ ರಚಿಸಿದ್ದಳೆನ್ನಲಾದ ನಾಗಲಾದೇವಿಯ ಕಾಲಾವಧಿ ಕ್ರಿ.ಶ. ೧೪೩೧–೬೨. ವಿಜಯನಗರ ಸಾಮ್ರಾಜ್ಯದ ಸಾಮಂತ ಭೈರವೇಂದ್ರನ ಅರಸಿಯೇ ಈ ನಾಗಲಾದೇವಿ ಎಂದು ಹೇಳಲಾಗುತ್ತದೆ. ಈಕೆಯ ವ್ಯಕ್ತಿತ್ವ ಕುರಿತು ಸಾಳ್ವ ಕವಿ ಸಾಳ್ವಭಾರತದಲ್ಲಿ ಪ್ರಸ್ತಾಪಿಸಿದ್ದಾನೆ. ನಾಗಲಾದೇವಿ ಜೈನಳಾಗಿದ್ದಳು. ಸ್ತ್ರೀ ಸಮಾಜವನ್ನು ಉದ್ದೇಶಿಸಿ ರಚಿಸಿರುವ ಪ್ರಸ್ತುತ ಕೃತಿಯಲ್ಲಿ ಕಂಡುಬರುವ ಕಲಾನೈಪುಣ್ಯ, ಕಾವ್ಯಪ್ರೌಢಿಮೆ, ಸಂಸ್ಕೃತ ಕನ್ನಡ ಉಭಯ ಭಾಷಾಪ್ರಭುತ್ವ, ಗದ್ಯವಲ್ಲದೆ, ಕಂದವೃತ್ತ ಛಂದೋರೂಪಗಳ ಸಿದ್ಧಿ, ಸುಂದರ ನಿರೂಪಣ ಶೈಲಿ ಈ ಗುಣ ಸಮೃದ್ಧಿ ಕಾವ್ಯದುದ್ದಕ್ಕೂ ಪಾರದರ್ಶಕವಾಗಿದೆ. ಕಾವ್ಯವಸ್ತು ಧಾರ್ಮಿಕ ಸ್ವರೂಪದ್ದು.

ಶಾರದೆಯಂ ಸಕಲಕಲಾ
ವಾರಧಿಯಂ ನಮಿಸಿ ಭವವಿಲಾಸ ನಿಮಿತ್ತಂ
ಸಾರಮೆನಿಸಿರ್ಪ ಷೋಡಸ
ಕಾರಣಮಂ ಪುಣ್ಯ ನಿಲಯಂ ವಿರಚಿಸುವೆಂ

(ಕಮಲಾ ಹಂಪನಾ; ಬೊಗಸೆ, ಮಹಿಳೆ ಸುತ್ತ ಮುತ್ತ, ಪುಟ ೧೧೧). ಈ ಪದ್ಯವನ್ನು ನೋಡಿದರೆ ಮೇಲೆ ಹೇಳಿದ ಕಾವ್ಯ ಲಕ್ಷಣವೆಲ್ಲವನ್ನೂ ನಾಗಲಾದೇವಿ ಹೊಂದಿದ್ದಳೆನ್ನುವುದರಲ್ಲಿ ಸಂದೇಹವಿಲ್ಲ. ಆಕೆ ಒಬ್ಬ ಶ್ರೇಷ್ಠ ಕವಯಿತ್ರಿಯಾಗಿರುವ ಸಾಧ್ಯತೆ ಇದೆ.

ವಿಜಯನಗರ ಸಾಮ್ರಾಜ್ಯದ ಆರಂಭಿಕ ಕಾಲದ ಮತ್ತೊಬ್ಬ ಕವಯಿತ್ರಿ ಗಂಗಾದೇವಿ. ವೀರಬುಕ್ಕರಾಯನ ಮಗ ಕಂಪಣರಾಯನ ಹೆಂಡತಿ. ಗಂಗಾದೇವಿ ರಚಿಸಿದ 'ಮಧುರಾ ವಿಜಯಂ' ಸಂಸ್ಕೃತ ಕಾವ್ಯ. ಬುಕ್ಕನೊಂದಿಗೆ ಆರಂಭವಾಗಿ ಪತಿ ಕಂಪಣನ ಜನನ, ಶಿಕ್ಷಣ, ತುರುಷ್ಕರ ದಮನ ಮಾಡಿ ಧರ್ಮರಾಜ್ಯ ನಡೆಸಿದ ವಿಷಯವಿದೆ(ವಸಂತಲಕ್ಷ್ಮಿ ಕೆ. (ಸಂ);

ಭಾರತೀಯ ಸಂಸ್ಕೃತಿ ಮಹಿಳೆ, ಪುಟ ೫೩). ಒಂದು ಸಾಹಿತ್ಯ ಆ ಕಾಲದ ಸಮಾಜದ ಸ್ಥಿತಿಗತಿಯ ಕನ್ನಡಿ ಇದ್ದಂತೆ ಗಂಗಾದೇವಿ ಕಂಪಣನ ಯುದ್ಧ, ಸೈನ್ಯ ವ್ಯವಸ್ಥೆ, ವಿಜಯಯಾತ್ರೆ, ಚೋಳ, ಕೇರಳ, ಪಾಂಡ್ಯ ರಾಜರನ್ನು ಸೆದೆಬಡಿದು ಕಂಚಿಗೆದ್ದು ತನ್ನ ಆಡಳಿತ ವಿಭಾಗದ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನ್ನು ತನ್ನ ಕಾವ್ಯದಲ್ಲಿ ವಿಷಯ ವಸ್ತುವನ್ನಾಗಿಟ್ಟುಕೊಂಡಿರುವುದರಿಂದ ಆ ಕಾಲದ ಸೈನ್ಯವ್ಯವಸ್ಥೆ, ಯುದ್ಧನೀತಿ, ರಾಜ್ಯ ವಿಸ್ತರಣೆ ತಿಳಿಯಲು ಸಹಾಯಕವಾಗಿದೆ. ಆ ಕಾಲಕ್ಕಾಗಲೇ ಕನ್ನಡ ಭಾಷೆಯಲ್ಲಿ ಹಲವಾರು ಕೃತಿಗಳು ರಚನೆಯಾಗಿದ್ದು ಉತ್ತುಂಗದಲ್ಲಿತ್ತು. ಆದರೂ ಸಂಸ್ಕೃತದಲ್ಲಿ ಕಾವ್ಯ ರಚಿಸಿರುವುದು ಆಕೆಗೆ ಸಂಸ್ಕೃತ ಭಾಷೆಯ ಮೇಲಿದ್ದ ಹಿಡಿತ ಬಲವಾಗಿತ್ತೆನ್ನಬಹುದು.

ತಿರುಮಲಾಂಬ ಈ ಕಾಲದ ಮತ್ತೊಬ್ಬ ಕವಯಿತ್ರಿ. 'ವರದಾಂಬಿಕಾ ಪರಿಣಯ' ಎಂಬ ಚಂಪೂ ಕಾವ್ಯ ರಚಿಸಿದಳು. ಈಕೆ ರಾಜ ಅಚ್ಯುತರಾಯನ ಆಸ್ಥಾನ ವಿದುಷಿಯರಲ್ಲಿ ಪ್ರಮುಖಳಾಗಿದ್ದಳೆಂದು ತಿಳಿದುಬರುತ್ತದೆ.(ವಸಂತಲಕ್ಷ್ಮಿ ಕೆ. (ಸಂ); ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ಪುಟ ೫೪).

ಮಧ್ಯಯುಗದ ಸ್ತ್ರೀಯರ ಸಾಹಿತ್ಯವನ್ನು ನಾವು ಅಧ್ಯಯನ ಮಾಡುವಾಗ ೧೨ನೇ ಶತಮಾನ ಕನ್ನಡ ಸಾಹಿತ್ಯದಲ್ಲೇ ಒಂದು ಸುವರ್ಣ ಯುಗವೆನ್ನಬಹುದು. ಈ ಅವಧಿಯಲ್ಲಿ ರಚನೆಯಾದುದು ವಚನವೆಂಬ ವಿಶಿಷ್ಟ ಸಾಹಿತ್ಯ ಪ್ರಕಾರ. ಅದು ನವರಸಗಳ ಗೊಂದಲವಿಲ್ಲದೆ, ಅಷ್ಟಾದಶವರ್ಣನೆಗಳಿರಬೇಕೆಂಬ ನಿಯಮವಿಲ್ಲದೆ, ಸಂಸ್ಕೃತ ಭಾಷೆಯ ಪಾಂಡಿತ್ಯವಿರಬೇಕೆಂಬ ನಿರ್ಬಂಧವಿಲ್ಲದೆ, ಪ್ರಾಸವಿರಲೇಬೇಕೆಂಬ ತೊಂದರೆ ಇಲ್ಲದೆ, ಲಯ, ಲಾಲಿತ್ಯಗಳ ಗೊಡವೆಯಿಲ್ಲದೆ ಯಾವ ನಿಯಮ ನಿಬಂಧಗಳಿಲ್ಲದೆ ಸ್ವಚ್ಛಂದವಾಗಿ ಅಭಿವ್ಯಕ್ತಿಯಾಯಿತು. ಇದರಿಂದ ಅವಕಾಶ ಸಿಕ್ಕಿ ಜನ ಸಾಮಾನ್ಯರು ಸಾಹಿತ್ಯ ರಚನೆ ಮಾಡಲು ಸಾಧ್ಯವಾಯಿತು. ಅದರಲ್ಲೂ ಮಹಿಳೆಗೆ ಸಾಹಿತ್ಯ ಕ್ಷೇತ್ರ ಮುಕ್ತವಾಗಿ ಮೊಟ್ಟ ಮೊದಲು ತೆರೆದುಕೊಂಡಿತೆನ್ನಬಹುದು. ಅಂಥ ಅಪರೂಪದ ಅವಕಾಶ ಬಳಸಿಕೊಂಡ ೧೨ನೇ ಶತಮಾನದ ಮಹಿಳೆಯರು. ತಮ್ಮ ಅನುಭವದ ಮೂಸೆಯಲ್ಲಿ ಶತಶತಮಾನಗಳಿಂದ ಅನುಭವಿಸಿದ ಮಹಿಳೆಯರ ನೋವು, ಅವಮಾನ, ಅನ್ಯಾಯ, ಸಂಕಟಗಳನ್ನು ಹೊರಹಾಕಿದರು. ಅವರಾರೂ ಸಾಹಿತ್ಯ ರಚಿಸುವಷ್ಟು ಶಿಕ್ಷಣವನ್ನೇನೂ ಪಡೆದಿರಲಿಲ್ಲ. ಆದರೂ ಅವರ ಅಳಲು ಸಾಹಿತ್ಯದ ರೂಪದಲ್ಲಿ ವ್ಯಕ್ತವಾಯಿತು.

ವಚನಕಾರ್ತಿಯರು ಎಲ್ಲ ಕ್ಷೇತ್ರಕ್ಕೂ, ಎಲ್ಲ ವರ್ಗದವರಿಗೂ ಅನ್ವಯವಾಗುವಂತೆ ಸಾಹಿತ್ಯ ರಚಿಸಿದರು. ರಾಜಕೀಯ ವ್ಯವಸ್ಥೆಯ ಒಳಹುಗಳು, ಆರ್ಥಿಕ ಏರಿಳಿತಗಳು, ವೈದಿಕ ಧರ್ಮದ ಸತ್ಯಾಸತ್ಯತೆಯನ್ನು ಧೈರ್ಯವಾಗಿಯೇ ಸಮಾಜದ ಮುಂದಿಟ್ಟರು. ಧರ್ಮದ ಹೆಸರಲ್ಲಿ ಮಾಡುವ ಡಾಂಬಿಕತೆ, ಬೂಟಾಟಿಕೆಗಳು, ಸಮಾಜದಲ್ಲಿರುವ ನ್ಯೂನತೆಗಳನ್ನು, ಬೇಕು–ಬೇಡಗಳನ್ನು ಭಯರಹಿತವಾಗಿಯೇ ಅಭಿವ್ಯಕ್ತಪಡಿಸಿದರು. ಯಾವುದೇ ಪ್ರಭುವರ್ಗಕ್ಕಾಗಲಿ,

ಆರ್ಥಿಕ ಹಿತಾಸಕ್ತಿಗಾಗಲಿ ಹೆದರಲಿಲ್ಲವೆನ್ನಬಹುದು. ಸಂಸಾರದ ಹಂಗನ್ನೇ ತೊರೆದು, ಆಳುವ ವರ್ಗವನ್ನೇ ಎದುರಿಸಿ ಸಮಾಜಕ್ಕೆ ಉತ್ತರದ ರೀತಿಯಲ್ಲಿ ನಿಂತ ಅಕ್ಕಮಹಾದೇವಿ ನಿರ್ಭಿಡೆಯ ವಚನಕಾರ್ತಿಯಾಗಿದ್ದಾಳೆ. ಆಕೆಯನ್ನೇ ಅನುಸರಿಸಿದ ಅಮ್ಮುಗೆ ರಾಯಮ್ಮ, ಆಯ್ದಕ್ಕಿ ಲಕ್ಕಮ್ಮ, ನೀಲಮ್ಮ, ಪುಣ್ಯಸ್ತ್ರೀ ಕಾಳವ್ವೆ, ಸತ್ಯಕ್ಕ, ಮೋಳಿಗೆ ಮಹಾದೇವಿ, ಹಲವಾರು ವಚನಕಾರ್ತಿಯರು ತಮ್ಮ ವಚನಗಳ ಮೂಲಕ ಇಡೀ ಸಾಹಿತ್ಯಲೋಕಕ್ಕೆ ಒಂದು ಹೊಸ ಕ್ರಾಂತಿಯನ್ನು ತಂದರು. ಶತಮಾನಗಳಿಂದಲೂ ಸ್ತ್ರೀ–ಪುರುಷರೆಂಬ ಅಭೇದ್ಯ ಕೋಟೆಯನ್ನು ಅಭೇದ್ಯಗೊಳಿಸಿ ಸ್ತ್ರೀ ಜಗತ್ತಿನಲ್ಲೇ ವಿಚಾರಕ್ರಾಂತಿಯನ್ನೆಬ್ಬಿಸಿದರು ಎಂದು ಹೇಳಬಹುದು. ಅಂದು ಅವರು ಸ್ತ್ರೀಲೋಕಕ್ಕೆ ಕೊಟ್ಟ ಕೊಡುಗೆ ಇಂದು ಹೊಸ ಸಂಚಲನಕ್ಕೆ ದಾರಿಯಾಗಿದೆ.

ಶಿಕ್ಷಣ ಸಾಮಾನ್ಯ ಮಹಿಳೆಯರಿಗೆ ದೊರೆಯುತ್ತಿರಲಿಲ್ಲ. ಶಿಕ್ಷಣ ಪಡೆದ ಮೇಲ್ವರ್ಗದ ಮಹಿಳೆಯರು ತಮಗೆ ದೊರೆತ ಅವಕಾಶಗಳಲ್ಲಿ ಅಲ್ಪಮಟ್ಟಿಗೆ ಸಾಹಿತ್ಯ ಕ್ಷೇತ್ರದಲ್ಲೂ ಸಾಧನೆ ಮಾಡಿದ್ದಾರೆ. ಆದರೆ ಅವರು ರಚಿಸಿದ ಹೆಚ್ಚಿನ ಸಾಹಿತ್ಯ ಗ್ರಂಥಗಳು ಅನುಪಲಬ್ಧವಾಗಿವೆ. ಅವುಗಳನ್ನು ಒಂದು ಸಾಹಿತ್ಯಕ ದಾಖಲೆಯಾಗಿ ಉಳಿಸಿಕೊಂಡು ಬಂದಿಲ್ಲ. ಪಂಪ, ರನ್ನ, ನಾಗವರ್ಮ ಹೀಗೆ ಕವಿಗಳ ಮತ್ತು ಅವರ ಕೃತಿಗಳ ಸಾಲು ಬೆಳೆಯುತ್ತಾ ಹೋಗುತ್ತದೆ. ಅವರ ಕೃತಿಗಳೆಲ್ಲ ವಿಮರ್ಶಕರ ಬರವಣಿಗೆಯಲ್ಲಿ ಈಗಲೂ ಸದ್ದು ಮಾಡುತ್ತವೆ. ಅದೇ ಸ್ತ್ರೀ ಸಾಹಿತ್ಯದ ಬಗ್ಗೆ ಈ ರೀತಿ ಲಕ್ಷ್ಯವಿಲ್ಲ. ಈಗಲೂ ಪ್ರಸ್ತುತ ಮಹಿಳಾ ಸಾಹಿತ್ಯವನ್ನು ಅಡುಗೆ ಮನೆ ಸಾಹಿತ್ಯವೆಂದು ಅಲ್ಲಗಳೆಯುವವರಿದ್ದಾರೆ. ಅದನ್ನು ಓದುವುದೆಂದರೆ ಸಮಯ ವ್ಯರ್ಥವೆಂಬ ಭಾವನೆ ಇದೆ. ಅಡುಗೆ ಮನೆ ಸಾಹಿತ್ಯಕ್ಕೂ ಮನ್ನಣೆ ದೊರೆಯಬೇಕು. ಒಂದು ಸಮಾಜ ಆರಂಭವಾಗುವುದು ಅಡುಗೆ ಮನೆಯಿಂದಲೇ, ಅಡುಗೆ ಮಾಡುವವಳಿಂದಲೇ ಅದರಲ್ಲೂ ಮೌಲ್ಯಗಳಿವೆ, ಅನುಭಾವವಿದೆ. ಆದರೆ ಅದು ಪುರುಷ ಸಮಾಜಕ್ಕೆ ಬೇಕಿಲ್ಲ. ಇಲ್ಲವೆಂದರೆ ಇವತ್ತು ಮಹಿಳಾ ಸಾಹಿತಿಗಳು ತಮ್ಮ ಅಸ್ಮಿತೆಗಾಗಿ ಹೋರಾಟ ಮಾಡಿ ತಮ್ಮನ್ನು ಗುರುತಿಸಿಕೊಳ್ಳಬೇಕಾದ ಅವಶ್ಯಕತೆ ಇರಲಿಲ್ಲ.

### ೪. ೩. ೪. ಬಹುಪತ್ನಿತ್ವ

ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯರನ್ನು ನಿಯಂತ್ರಿಸುವ ಹಲವಾರು ತಂತ್ರಗಳಲ್ಲಿ ಬಹುಪತ್ನಿತ್ವ ಒಂದು. ಪುರುಷ ಒಬ್ಬಳಿಗಿಂತ ಹೆಚ್ಚು ಸ್ತ್ರೀಯರನ್ನು ಪತ್ನಿಯರನ್ನಾಗಿ ಹೊಂದುವ ವ್ಯವಸ್ಥೆಯಾಗಿದೆ. ಒಂದು ಗಂಡಿಗೆ ಒಂದು ಹೆಣ್ಣು, ಒಂದು ಹೆಣ್ಣಿಗೆ ಒಂದು ಗಂಡು ಇದು ನೈತಿಕವಾದದ್ದು ಮತ್ತು ಪ್ರಕೃತಿ ನಿಯಮ. ಆದರೆ ಸ್ವಹಿತಾಸಕ್ತಿಯಿಂದ ಪುರುಷರು ಹಲವಾರು ಕಾರಣಗಳನ್ನು ನೀಡಿ ಒಂದು ಗಂಡಿಗೆ ಹಲವು ಹೆಣ್ಣು ಮಾಡಿಕೊಂಡರು. ಇದಕ್ಕೆ ಅವರು ನೀಡಿದ ಕಾರಣಗಳು ಪತ್ನಿ ಅನಾರೋಗ್ಯ, ಅಕಾಲಿಕ ಮರಣ, ಸಂತಾನ, ಪುತ್ರ ಪ್ರಾಪ್ತಿ, ಹೀಗೆ ಹತ್ತು ಹಲವು. ಆದರೆ ಈ ಯಾವ ಕಾರಣವೂ ಸ್ತ್ರೀಯರಿಗೆ ಅನ್ವಯಿಸುವುದಿಲ್ಲ. ತಾವು

ಆರಾಧಿಸುವ ದೈವಗಳು ಹಲವಾರು ಕಾರಣಗಳಿಂದ ಸಾಂದರ್ಭಿಕವಾಗಿ ಬಹುಪತ್ನಿಯರನ್ನು ಹೊಂದಿರುವುದರಿಂದ ತಾವು ತಮ್ಮ ದೇವರಂತೆ ವಿವಾಹವಾಗುವುದರಲ್ಲಿ ತಪ್ಪೇನಿಲ್ಲ ಎನ್ನುವ ಸಮರ್ಥನೆ ಇದೆ.

ಮಾತೃಸಂಸ್ಕೃತಿಯ ಅವನತಿಯಿಂದ ಹಲವಾರು ಸ್ತ್ರೀವಿರೋಧಿ ನಿಯಮಗಳು ಜಾರಿಗೆ ಬಂದವು. ಮಾತೃನೆಲೆಯು ಹಿಂದೆ ಸರಿದಂತೆ ಅವರು ಆರಾಧಿಸುವ ದೈವಗಳು ಅಳಿಯುತ್ತ ಹೋದವು. ಅದರ ಮೇಲೆ ಪಿತೃಸಂಸ್ಕೃತಿ ಪ್ರಾಬಲ್ಯದಿಂದ ತನ್ನ ಪ್ರತಿನಿಧಿಯಾಗಿ ಗಂಡುದೈವಗಳು ಸೃಷ್ಟಿಯಾದವು. ತನ್ನ ಅನುಕೂಲತೆಗಳನ್ನು ಹೆಚ್ಚಿಸಿಕೊಳ್ಳುವುದಕ್ಕೋಸ್ಕರ ದೇವರ ಅನುಕೂಲತೆಗಳನ್ನು ಹೆಚ್ಚಿಸಿ ನಿದರ್ಶನಗಳನ್ನು ನೀಡುತ್ತಾ ಬಂದಿದೆ. ಪಿತೃಸಂಸ್ಕೃತಿ, ವೈದಿಕಸಂಸ್ಕೃತಿಯ ಆರಂಭದಿಂದಲೂ ಬಹುಪತ್ನಿತ್ವವನ್ನು ಕಾಣಬಹುದು. ವೈದಿಕ ಪುರುಷ ದೈವಾರಾಧಕರು ತಮ್ಮ ದೈವಗಳಿಗೆ ಬಹುಪತ್ನಿಯರ್ರು ಸೃಷ್ಟಿಸಿದರು. ಋಗ್ವೇದದಲ್ಲಿ ಇಂದ್ರ ಬಹುಪತ್ನಿಯರನ್ನು ಹೊಂದಿದ್ದಾಗ ಶಚಿ ಸವತಿ ಮತ್ಸರವನ್ನು ವ್ಯಕ್ತಪಡಿಸಿದ್ದಾಳೆ. ಅದಿತಿಗೂ ಸವತಿಯರಿದ್ದ ಬಗ್ಗೆ ಉಲ್ಲೇಖವಿದೆ. ಉತ್ತರವೇದಗಳ ಕಾಲದಲ್ಲಿ ಬಹುಪತ್ನಿತ್ವ ವ್ಯಾಪಕವಾಗಿ ಪ್ರಚಲಿತದಲ್ಲಿತ್ತೆಂದು ವಿದ್ವಾಂಸರ ಅಭಿಪ್ರಾಯ. ಉಪನಿಷತ್ ಕಾಲದಲ್ಲಿ ಬಹುಪತ್ನಿತ್ವ ಇತ್ತೆಂಬುದಕ್ಕೆ ನಮಗೆ ಆಧಾರಗಳು ದೊರೆತಿವೆ. ಋಷಿಗಳು ಬಹುಪತ್ನಿಯರನ್ನು ಹೊಂದಿದ್ದರು ಯಜ್ಞವಲ್ಕನಿಗೆ ಮೈತ್ರೇಯಿ, ಕಾತ್ಯಾಯಿನಿ ಎಂಬ ಇಬ್ಬರು ಪತ್ನಿಯರಿದ್ದರು.

ವೇದಗಳ ಕಾಲದ ಸಂಸ್ಕೃತಿ ಬಗ್ಗೆ ನಮಗೆ ರಾಮಾಯಣ ಮಹಾಭಾರತ ಮಹಾಕಾವ್ಯಗಳಿಂದ ಮಾಹಿತಿ ದೊರೆತಿರುವುದು. ಮಹಾಭಾರತದಲ್ಲಿ ಜರುಗಿರುವ ಹಲವಾರು ಸಂಗತಿಗಳಿಂದ ಅಲ್ಲಿ ಬರುವ ಮಾತೃಮೂಲ ಸಂಸ್ಕೃತಿಯ ಬಹುಪತಿತ್ವ, ನಿಯೋಗ ಪದ್ಧತಿಯಿಂದ ಜನಿಸಿದ ಧೃತರಾಷ್ಟ್ರ ಮತ್ತು ಪಾಂಡುರಾಜ, ಮಂತ್ರಗಳಿಗೆ ಜನಿಸಿದರೆನ್ನಲಾದ ಐದು ಜನ ಪಾಂಡವರ ತಂದೆಯರು ಬೇರೆ ಬೇರೆ ಎಂಬುದು, ಭೀಮನು ಹಿಡಂಬಿಯನ್ನು ವಿವಾಹವಾಗುವುದು, ಭೀಮನ ವ್ಯಕ್ತಿತ್ವ, ದ್ರೌಪದಿ ಐದು ಜನರನ್ನು ಪತಿಯರನ್ನಾಗಿ ಸ್ವೀಕರಿಸಿದುದುದು, ಸ್ತ್ರೀಯರಿಗೆ ಮಾತ್ರ ಸಂಬಂಧಿಸಿದ ಶೀಲ, ಚಾರಿತ್ರ್ಯ, ನೀತಿ ನಿಯಮಗಳು ಇದ್ದರೂ ಕಟ್ಟುನಿಟ್ಟಾಗಿ ಜಾರಿಗೆ ಬಂದಿಲ್ಲವೆನ್ನಬಹುದು.

ರಾಮಾಯಣದ ಕಾಲಕ್ಕಾಗಲೇ ಪೂರ್ಣ ಪಿತೃಸಂಸ್ಕೃತಿ ಆವರಿಸಿತ್ತು ಎಂದು ಹೇಳಲು ಸಮಾಜದ ನೀತಿ ನಿಯಮಗಳು ರಚನೆಯಾಗಿದ್ದವು. ರಾಮಾಯಣದ ಪೂರ್ವಭಾಗ ಸೀತೆಯ ಶೀಲ, ಪಾವಿತ್ರ್ಯದ ಪ್ರಾಧಾನ್ಯತೆಯ ಮೇಲೆ ಮುಂದುವರಿಯುತ್ತದೆ. ದಶರಥ ಪುತ್ರಪ್ರಾಪ್ತಿಯ ಉದ್ದೇಶದಿಂದ ಹೊಂದಿದ್ದ ಮೂರು ಜನ ಪತ್ನಿಯರು ಬಹುಪತ್ನಿತ್ವ ಜಾರಿಯಲ್ಲಿದ್ದುದರ ಪರಿಣಾಮವಾಗಿ ಎನ್ನಬಹುದು. ಹೀಗೆ ಬಹುಪತ್ನಿತ್ವ ವೈದಿಕ ಸಂಸ್ಕೃತಿಯು ಸ್ತ್ರೀ ಜನಾಂಗಕ್ಕೆ

ನೀಡಿದ ಮಾರಕ ಸಂಸ್ಕೃತಿಗಳಲ್ಲೊಂದು. ಅದು ತನ್ನಷ್ಟೇ ಬಲವಾಗಿ ಸಮಾಜದಲ್ಲಿ ಇಂದಿನವರೆಗೂ ಮುಂದುವರಿದುಕೊಂಡು ಬರುವಂತೆ ಮಾಡಿದೆ.

ಹತ್ತನೆಯ ಶತಮಾನದಷ್ಟೊತ್ತಿಗೆ ಬಹುಪತ್ನಿತ್ವ ಮೂಲ ಕಾರಣಕ್ಕೆ ಮತ್ತಷ್ಟು ಕಾರಣಗಳನ್ನು ಸೇರಿಸಿಕೊಂಡು ಸ್ತ್ರೀಯರ ಸ್ಥಾನವನ್ನು ಕಸಿದುಕೊಡಿತ್ತು. ರಾಜರಿಗೆ ಮೇಲ್ವರ್ಗದವರಿಗೆ ಪ್ರತಿಷ್ಠೆಯ ವಿಷಯವಾಗಿ ಕಾರಣವಿಲ್ಲದೆಯೇ ಹಲವು ಸ್ತ್ರೀಯರೊಂದಿಗೆ ವಿವಾಹ ಸಾಮಾನ್ಯವಾಗಿ ಹೊಯಿತು. ಸ್ತ್ರೀಯರನ್ನು ಭೋಗವಸ್ತುಗಳ ಸಾಲಿಗೆ ಸೇರಿಸಿದರು.

ಬಹುಪತ್ನಿತ್ವ ರಾಜರಲ್ಲಿ ಸಾಮಾನ್ಯವಾಗಿತ್ತು. ಇದರ ವಿಚಾರ ಕುರಿತು ಚರ್ಚಿಸುವುದು ಪುರುಷ ಸಮಾಜಕ್ಕೆ ವಿಶೇಷವೆನಿಸುವುದೇ ಇಲ್ಲ. ಪಟ್ಟದ ರಾಣಿ ರಾಜನೊಂದಿಗೆ ಶಾಸ್ತ್ರಬದ್ಧವಾಗಿ, ರಾಜನಿಯಮದಂತೆ ವಿವಾಹವಾದವಳು. ಆಕೆ ರಾಜನೊಂದಿಗೆ ಬಹಿರಂಗ ಸಭೆಗಳಲ್ಲಿ, ವಿವಿಧ ಕಾರ್ಯಕ್ರಮಗಳಲ್ಲಿ ಕಾಣಿಸಿಕೊಳ್ಳುತ್ತಾಳೆ. ಪಟ್ಟದ ರಾಣಿಯ ಸ್ಥಾನವು ಶಾಶ್ವತವಾಗಿರಲಿಲ್ಲ. ಆಗಾಗ ಬದಲಾಗುತಿತ್ತು. ಪಟ್ಟದ ರಾಣಿಯರು ಕೆಲವೊಂದು ಅಧಿಕಾರಗಳನ್ನು ಹೊಂದಿದ್ದರು. ಇವು ಕೇವಲ ಶಾಸ್ತ್ರಕ್ಕೆ ಮಾತ್ರ ಧವಳ ಶಂಖ, ಉದ್ದಂಡ, ಪುಂಡರೀಕ, ಕನಕದಂಡ, ಚಾಮರ, ಸ್ತೋಮ(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೪೬೪). ಇವು ಪಟ್ಟದ ರಾಣಿಯ ಚಿನ್ಹೆಗಳಾಗಿದ್ದವು. ಕ್ರಿ.ಶ. ೯೮೧ರ ಕಂಚುಗಾರ ಬೆಳಗಲ್ಲು ಶಾಸನದಲ್ಲಿ ಪಲ್ಲವ ಮನೆತನದ ವೀರನೊಳಂಬ ಪಲ್ಲವ ಪೆರ್ಮಾಡಿ ಮಹಾದೇವಿ ರೇವಲದೇವಿಯರೆಂದು ಇಬ್ಬರು ಪತ್ನಿಯರು ಕಾಳನೃಪದೇವರಿಗೆ ದಾನ ಬಿಡುವ ಸಂದರ್ಭದಲ್ಲಿ ಉಲ್ಲೇಖಿತವಾಗಿದೆ(SII. IX, (i), 74). ಶ್ರವಣನಹಳ್ಳಿ ಶಾಸನದಲ್ಲಿ ವಿಷ್ಣುವರ್ಧನನ ಪಿರಿಯರಸಿ ಚಂದಲಾದೇವಿ ಎಂದು ಉಲ್ಲೇಖವಿದೆ(E.C.VI, ಕೃಷ್ಣರಾಜಪೇಟೆ, ೨೧). ನಾಗಮಂಗಲ ಶಾಸನದಲ್ಲಿ ಪಲ್ಲವ ವಂಶದ ಗೋವಿಂದ ಮತ್ತು ಚಾವುಂಡರಸಿಯ ಮಗಳಾದ ಬಮ್ಮಲದೇವಿ ವಿಷ್ಣುವರ್ಧನನ ಪಟ್ಟದರಸಿಯೆಂದು ಉಲ್ಲೇಖವಿದೆ(E.C.VII, ನಾಗಮಂಗಲ, ೭). ಶಾಂತಲೆ ಕ್ರಿ.ಶ. ೧೧೩೩ರಲ್ಲಿ ಮರಣ ಹೊಂದಿದ ನಂತರ ಬಮ್ಮಲದೇವಿ ಪಟ್ಟದರಸಿ ಮಾಡಿಕೊಂಡಿರುವ ಸಾಧ್ಯತೆ ಇದೆ. ಬೇಲೂರು ಶಾಸನದಲ್ಲಿ ಶಾಂತಲೆ ವರ್ಣನೆ ಇದೆ ಮತ್ತು ಅದರಲ್ಲಿ 'ಸವತಿ ಗಂಧ ಹಸ್ತಿ' ಪದ ಪ್ರಯೋಗ ಮಾಡಲಾಗಿದೆ. ಪಿರಿಯರಸಿ ಪಟ್ಟ ಮಹಾದೇವಿ ಪದ ಬಳಕೆ ಆಗಿದೆ(E.C. IX, ಬೇಲೂರು, ೧೬). ಕ್ರಿ.ಶ. ೧೧೩೩ರ ಬೇಲೂರು ಶಾಸನದಲ್ಲಿ ಪಟ್ಟದ ರಾಣಿ ಲಕ್ಷ್ಮಾದೇವಿ ವಿಜಯನಾರಸಿಂಹನಿಗೆ ಜನ್ಮವಿತ್ತ ವಿಷಯ ಉಲ್ಲೇಖವಾಗಿದೆ(E.C. IX, ಬೇಲೂರು, ೩೮೯). ಈ ಮೇಲಿನ ಶಾಸನ ಉಲ್ಲೇಖವನ್ನು ಗಮನಿಸಿದರೆ ವಿಷ್ಣುವರ್ಧನನಿಗೆ ಶಾಂತಲೆ, ಬಮ್ಮಲೆ, ಲಕ್ಷ್ಮಾದೇವಿ ಎಂಬ ಮೂವರು ರಾಣಿಯರಿದ್ದರೆಂದು ತಿಳಿದುಬರುತ್ತದೆ.

ಪಿರಿಯರಸಿ ಪಟ್ಟದ ರಾಣಿ ಶಾಂತಲೆಯನ್ನು ವಿಷ್ಣುವರ್ಧನನ 'ಪ್ರಿಯಪತ್ನಿ' ಎಂದೂ ಕೂಡ ಹೇಳಲಾಗುತ್ತದೆ. ಆದರೆ ಅದೆಷ್ಟು ಕಾಲ ಆತನಿಗೆ ಪ್ರಿಯಳಾಗಿದ್ದಾಳು? ಬಹುಪತ್ನೀವಲ್ಲಭ

ಎಂದು ಕರೆಯಲಾಗುವ ವಿಷ್ಣುವರ್ಧನ ವಿವಾಹವಾಗುತ್ತ ಹೋದಂತೆ ರಾಣಿಯರ ಸ್ಥಾನ ಬದಲಾಯಿಸುತ್ತಾ ಹೊಗಿದ್ದಾನೆ. ಶಾಂತಲೆ ಇಡೀ ಭಾರತೀಯ ಚರಿತ್ರೆಯಲ್ಲೆ ಖ್ಯಾತಳಾದ ಸಕಲ ವಿದ್ಯಾವಲ್ಲಭೆ. ಆಕೆ ಇಂದಿಗೂ ಕಲೆಯಲ್ಲಿ ಜೀವಂತ. ಇಂತಹ ಘನ ವ್ಯಕಿತ್ವದ ರಾಣಿ ನಿರಾದಾರಕ್ಕೆ ಒಳಗಾಗಿದ್ದಾಳೆ. ವಿಷ್ಣುವರ್ಧನ ಪತ್ನಿ ಶಾಂತಲೆಗೆ ತೋರಿಸಿದ ಅಗೌರವದ ನೀತಿ ಒಮ್ಮೆ ಶಾಂತಲೆ ಪಟ್ಟದರಸಿ, ಒಮ್ಮೆ ಬಮ್ಮಲದೇವಿ ಪಟ್ಟದರಸಿ, ಒಮ್ಮೆ ಲಕ್ಷ್ಮಾದೇವಿ ಪಟ್ಟದ ರಾಣಿ, ಹಾಗೆಯೇ ಪಿರಿಯರಸಿ ಸ್ಥಾನಗಳ ಕೂಡ ಬದಲಾಗಿವೆ. ಮೂಲತಃ ಜೈನನಾಗಿದ್ದ ವಿಷ್ಣುವರ್ಧನ ರಾಮಾನುಜಾಚಾರ್ಯರ ಪ್ರಭಾವದಿಂದ ವೈಷ್ಣವನಾಗಿ ಲಕ್ಷ್ಮಿಯನ್ನು ವಿವಾಹವಾಗುತ್ತಾನೆ. ನಂತರ ಶಾಂತಲೆ ಮತ್ತು ಜೈನಧರ್ಮ ಎರಡನ್ನೂ ನಿರ್ಲಕ್ಷಿಸಿದ್ದಾನೆನ್ನಬಹುದು. ಸವತಿಯರಿಗೆ ಗಂಧಹಸ್ತಿಯಂತೆ ಗೌರವ ಗಾಂಭೀರ್ಯದಿಂದ ಇದ್ದ ಶಾಂತಲೆ ಅನ್ಯ ರಾಣಿಯರಂತೆ ಮದಭಂಜನೆ ಎಂದೆನಿಸಿಕೊಂಡಿಲ್ಲ. ಆದರೂ ಪತಿಯಿಂದ ಅನಾದರ, ನಿರ್ಲಕ್ಷ್ಯ ಆಕೆಯಲ್ಲಿ ಜಿಗುಪ್ಸೆಯನ್ನುಂಟು ಮಾಡಿರಬೇಕು ಆ ಕಾರಣಕ್ಕೆ ಶಾಂತಲೆ ಜೈನವಿಧಿಯಂತೆ ಮರಣಕ್ಕೆ ಶರಣಾಗಿರುವ ಸಾಧ್ಯತೆ ಇದೆ.

ಇತಿಹಾಸದಲ್ಲಿ ಮತ್ತೊಬ್ಬ ಬಹುಪತ್ನಿವಲ್ಲಭ ಆರನೇ ವಿಕ್ರಮಾದಿತ್ಯ ಹಲವು ಪತ್ನಿಯರನ್ನು ಹೊಂದಿದ್ದ ಪ್ರಖ್ಯಾತ ರಾಜ. ರಾಜರಿಗೆ ರಾಜ್ಯವಂಶ ಮುಂದುವರಿಯುವುದಕ್ಕಾಗಿ ಉತ್ತರಾಧಿಕಾರಿ ಬೇಕು. ಅದಕ್ಕಾಗಿ ಕ್ಷತ್ರಿಯ ಕುಲದ ರಾಜಮನೆತನಕ್ಕೆ ಸೇರಿದ ಕನ್ಯೆಯನ್ನು ತಂದು ಶಾಸ್ತ್ರೋಕ್ತವಾಗಿ ರಾಜವೈಭವದೊಂದಿಗೆ ವಿವಾಹವಾಗಿ ಅವರನ್ನೇ ಪಟ್ಟದ ರಾಣಯರನ್ನಾಗಿ ಮಾಡಿಕೊಳ್ಳುತ್ತಿದ್ದರು. ಪಟ್ಟದ ರಾಣಿಯ ಹೊರತಾಗಿಯೂ ರಾಜ ಹಲವು ರಾಣಿಯರನ್ನು ವಿವಾಹವಾಗಬಹುದಿತ್ತು. ಅದಕ್ಕೆ ಪಟ್ಟದ ರಾಣಿಯ ಅನುಮತಿಯೇನೂ ಬೇಕಿರಲಿಕ್ಕಿಲ್ಲ. ಅವಳ ಅನುಮತಿ ಇರಲಿ, ಇಲ್ಲದಿರಲಿ ಅದರ ಬಗ್ಗೆ ದೊರೆಗಳು ಯೋಚಿಸುತ್ತಿರಲಿಲ್ಲ. ಅನುಮತಿ ಪಡೆದೆ ವಿವಾಹವಾಗುವಂತಿದ್ದರೆ ಖಂಡಿತ ದೊರೆಗೆ ಬಹುಪತ್ನಿಯರು ಇರುತ್ತಿರಲಿಲ್ಲ. ರಾಜ ಮೆಚ್ಚಿ ಮದುವೆಯಾಗುವ ಕನ್ಯೆ ರಾಜವಂಶಕ್ಕೆ ಸೇರದ ಸಾಮಾನ್ಯಳು ಆಗಿರುತ್ತಿದ್ದಳು. ವಿಕ್ರಮಾದಿತ್ಯ ತನ್ನ ಯೌವನಾವಸ್ಥೆಯಲ್ಲಿ ವಿವಾಹವಾಗಿದ್ದ ಲಕ್ಷ್ಮೀದೇವಿ ಸಾಮಾನ್ಯ ವರ್ಗದ ಶಿಲ್ಪಕರ್ಮಿಯ ಮಗಳು(ಲೋಹ ಕರ್ಮನು). ತಂದೆ ಕಂಕೋಜ ಮತ್ತು ತಾಯಿ ಮಸಣಿಕವ್ವೆ ಆಕೆ ರೂಪ ಕಂಠ ಮಾಧುರ್ಯ ಹೊಗಳುವ ದೋಣಿ ಶಾಸನ

ಘನಜಘನವಿಂದು ಬಿಂಬಾ
ನನದ ಸರೋಜಾತನಯ ನದತಿ ನಿಬಿಡ ಘಟ
ಸ್ತನ ಪರಪುಷ್ಪ ನಿನದಿದ
ವನಿತಾಜನ ತಳಿಕ ಮಲ್ತೆ ಲಕ್ಷ್ಮೀಮಹಾದೇವಿ

(SII. XI (II), 140). ಕ್ರಿ.ಶ. ೧೦೯೭ರ ದೋಣಿ ಶಾಸನದಲ್ಲಿ ವಿಕ್ರಮಾದಿತ್ಯ ಲಕ್ಷ್ಮೀದೇವಿಯನ್ನು ವಿವಾಹವಾಗಿದ್ದರ ಕುರಿತು ಮತ್ತು ಲಕ್ಷ್ಮೀದೇವಿಯ ವರ್ಣನೆ, ಶೈವ

ಧರ್ಮದ ಬಗ್ಗೆ ಹೊಂದಿದ್ದ ಒಲವು ಉಲ್ಲೇಖಿತವಾಗಿದೆ. ವಿಕ್ರಮಾದಿತ್ಯ ಲಕ್ಷ್ಮೀದೇವಿಯ ರೂಪ, ಕಂಠಮಾಧುರ್ಯಕ್ಕೆ ಮೆಚ್ಚಿ ಮನಸೋತು ವಿವಾಹವಾಗಿದ್ದಂತೆ ತೋರುತ್ತದೆ. ಲಕ್ಷ್ಮೀದೇವಿಯ ತಂದೆ ಶಿಲ್ಪಕರ್ಮಿಯಾಗಿದ್ದರಿಂದ ನೃತ್ಯ ಸಂಗೀತದಲ್ಲಿ ಪರಣತಿಯನ್ನು ಹೊಂದಿರುವ ಸಾಧ್ಯತೆ ಇದೆ. ಇವಳ ನೃತ್ಯ ಸಂಗೀತಕ್ಕೆ ಮನಸೋತು ವಿವಾಹವಾಗಿರಬಹುದು. ಲಕ್ಷ್ಮೀದೇವಿ ಮುಂಡರಗಿ ತಾಲ್ಲೂಕಿನ ದೋಣಿಯಲ್ಲಿ ಆಳ್ವಿಕೆ ಮಾಡಿದ್ದಾಳೆ. ಕ್ರಿ. ಶ. ೧೦೮೪ರ ವರೆಗೆ ಕಲ್ಯಾಣದಲ್ಲಿ ದೊರೆ ಜೊತೆ ಇದ್ದು ಅನಂತರ ದೋಣಿಗೆ ಬಂದಿದ್ದಾಳೆ.

ಲಕ್ಷ್ಮೀದೇವಿಗಿಂತ ಮೊದಲು ಕ್ರಿ.ಶ. ೧೦೭೭ರಲ್ಲಿ ಕಳಚುರಿ ರಾಜಕುಮಾರಿ ಪದ್ಮಲ ದೇವಿಯನ್ನು ವಿವಾಹವಾಗಿದ್ದ ಈಕೆ ನರೇಗಲ್ ಅಗ್ರಹಾರ ಆಳ್ವಿಕೆ ಮಾಡುತ್ತಿದ್ದಳು(ನಾಗಯ್ಯ ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೩೩).

ಕ್ರಿ.ಶ. ೧೦೮೭ರ ಶಾಸನದಲ್ಲಿ ಶಿಲಾಹಾರ ರಾಜಕುಮಾರಿ ಕೊಲ್ಲಾಪುರದ ಶಿಲಾಹಾರ ರಾಜಮನೆತನಕ್ಕೆ ಸೇರಿದವಳು ಎಂದಿದೆ. ಚಂದಲಾದೇವಿಯನ್ನು ಸ್ವಯಂವರದಲ್ಲಿ ಗೆದ್ದು ವಿವಾಹವಾಗಿದ್ದನೆನ್ನಲಾಗುತ್ತದೆ. ಈಕೆ ನೃತ್ಯ ಪ್ರವೀಣೆಯಾಗಿದ್ದಳು. ಅಲ್ಲದೆ ಶಾಸನದಲ್ಲಿ ಸವತಿಮದಭಂಜನೆ ಎಂದಿದೆ(ನಾಗಯ್ಯ ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೩೬). ಅಲ್ಲದೆ ಅಲ್ಲಿಯವರೆಗೂ ದೊರೆಯೊಂದಿಗೆ ಕಲ್ಯಾಣದಲ್ಲೇ ಇದ್ದ ಲಕ್ಷ್ಮೀದೇವಿ ತಾನಾಗಿಯೇ ದೂರ ಉಳಿದು ಡಂಬಳದ ಆಡಳಿತ ವಹಿಸಿಕೊಂಡಿದ್ದಿರಬೇಕು, ಚಂದಲಾದೇವಿ ರಾಜಮನೆತನಕ್ಕೆ ಸೇರಿದವಳು. ಆಕೆಗಿದ್ದ 'ಸವತಿಮದಭಂಜನೆ', 'ಸವತಿಶಿರೋವಜ್ರಮುಷ್ಟಿ' ಎಂಬ ಬಿರುದುಗಳನ್ನು ನೋಡಿದರೆ ಆಕೆಗೂ ಲಕ್ಷ್ಮೀದೇವಿ ಮಧ್ಯೆ ಕಲಹ ಉಂಟಾಗಿರಬಹುದು. ಹಲವು ರಾಣಿಯರನ್ನು ವಿವಾಹವಾದ ಮೇಲೆ ಲಕ್ಷ್ಮೀದೇವಿ ಬಗ್ಗೆ ನಿರ್ಲಕ್ಷ್ಯ ಸಹಜವಾಗಿರುತ್ತದೆ. ಈ ಕಾರಣಗಳು ಆಕೆ ಕಲ್ಯಾಣ ಮತ್ತು ದೊರೆಯಿಂದ ದೂರ ಉಳಿದು ತಾನು ನಂಬಿದ ಶೈವಧರ್ಮಕ್ಕೆ ಸೇವೆ ಸಲ್ಲಿಸುತ್ತಾ ಆಡಳಿತ ಕಾರಣದಿಂದ ದೂರ ಉಳಿದಿರಬೇಕು.

ಆರನೇ ವಿಕ್ರಮಾದಿತ್ಯನು ಹಲವು ರಾಣಿಯರನ್ನು ಹೊಂದಿದ್ದ. ಚೋಳ ವೀರರಾಜೇಂದ್ರನ ಮಗಳನ್ನು ವಿವಾಹವಾಗಿದ್ದನೆನ್ನಲಾಗುತ್ತದೆ. ಹಿರಿಯ ಕೇತಲದೇವಿಯನ್ನು ಚಕ್ರವರ್ತಿಯ ಪ್ರಿಯಾಂಗನೆ ಎಂದು ಕರೆಯುತ್ತಿದ್ದರು. ಈಕೆಯ ಬಳ್ಳಾರಿ ಜಿಲ್ಲೆ ಭತ್ತಗ್ರಾಮ, ಸಿರುಗುಪ್ಪ, ಕೊಳನೂರು ಆಳ್ವಿಕೆ ಕ್ಷೇತ್ರಗಳು(ನಾಗಯ್ಯ ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೪೦). ಮತ್ತೊಬ್ಬ ರಾಣಿ ಜಾಕಲದೇವಿ ಜೈನಧರ್ಮ ಪಾಲಿಸುತ್ತಿದ್ದಳು. ಜಾಕಲದೇವಿಯ ಆಳ್ವಿಕೆ ಕ್ಷೇತ್ರ ಇಂಗಳಗಿ. ಈಕೆಗೆ ಅಭಿನವಸರಸ್ವತಿ, ವಿದ್ಯಾಧರಿ ಎಂಬ ಬಿರುದು ಇದ್ದವು. ಈಕೆ (ಕದಂಬ ಚೂಡಾಮಣಿ) ತಿಕ್ಕನ ಪುತ್ರಿಯಾಗಿದ್ದಳು. ಈಕೆ ದೊರೆಯೊಂದಿಗೆ ಯುದ್ಧಕ್ಕೆ ಹೋಗುತ್ತಿದ್ದಳೆಂದು ಹೇಳಲಾಗುತ್ತಿದೆ. ವಿಕ್ರಮಾದಿತ್ಯನ ಒಪ್ಪಿಗೆಯ ಮೇರೆಗೆ ತನ್ನಿಷ್ಟದ ಜೈನ ತೀರ್ಥಂಕರರ ಬಹುಮಾಣಿಕ್ಯ ವಿಗ್ರಹವನ್ನು ತನ್ನ ಕ್ಷೇತ್ರದಲ್ಲೇ ಪ್ರತಿಷ್ಠಾಪಿಸುತ್ತಾಳೆ( ನಾಗಯ್ಯ

ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೪೧). ಕನೋಳಿ ಶಾಸನದಲ್ಲಿ ಮೈಳಲಮಹಾದೇವಿಯನ್ನು ಪಿರಿಯರಿಸಿ ಪಟ್ಟ ಮಹಾದೇವಿ, ಕಲಿಕಾಲ ಸರಸ್ವತಿ ಎಂದು ಕರೆಯಲಾಗಿದೆ. ಶ್ರೀಯಾದೇವಿಯದು ಬಗದಾಳ ಆಳ್ವಿಕೆ ಕ್ಷೇತ್ರವಾಗಿದ್ದರೆ, ಮನ್ನಾದೇವಿ ಆಳಂಪುರದಲ್ಲಿ, ಮಲಯಮತಿದೇವಿಯನ್ನು ದಿಗ್ಗಾವ ಶಾಸನದಲ್ಲಿ ಪಿರಿಯರಸಿ ಪಟ್ಟ ಮಹಾದೇವಿ ಎಂದು ಕರೆಯಲಾಗಿದೆ. ಚಿನ್ನತುಂಬಳಮ್ ಶಾಸನದ ಪ್ರಕಾರ ಸಿಂಧವಾಡಿ ನಾಡಿನ ಅಗ್ರಹಾರ ತುಂಬಳದಲ್ಲಿ ಆಳ್ವಿಕೆ ಮಾಡುತ್ತಿದ್ದಳು(ನಾಗಯ್ಯ ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೪೨). ಮಲ್ಲಣಿದೇವಿ ಬಿಮ್ರಾ ಶಾಸನದಲ್ಲಿ ವಿಕ್ರಮಾದಿತ್ಯನ ಪಟ್ಟಮಹಾದೇವಿ ಎನ್ನಲಾಗಿದೆ. ಕ್ರಿ.ಶ. ೧೧೨೨ರಷ್ಟೊತ್ತಿಗೆ ಪಟ್ಟದ ರಾಣಿಯಾಗಿರಬಹುದು. ಈಕೆಯ ಮನೆಯಲ್ಲಿ ನಾಗವರ್ಮನು ಶುಚಿದಕ್ಷನಾಗಿ 'ಮಾಣಿಕ ಭಂಡಾರ ನಿಯೋಗಮಂ ಹೊಂದಿದ್ದನು.' ಈ ಮೇಲೆ ಉಲ್ಲೇಖಿಸಲಾದ ರಾಣಿಯರಲ್ಲದೆ ಉಳಿದಂತೆ ಸುಗ್ಗಲಾದೇವಿ, ಭಾಗಲಾ ಮಹಾದೇವಿ, ಅಬ್ಬಲದೇವಿ, ಜಾಕಲ ಮಹಾದೇವಿ, ತೇಲ್ಸಂಗ ಮತ್ತು ಆಳಂಪುರ ಶಾಸನದಲ್ಲಿ ವಿಕ್ರಮಾದಿತ್ಯನ ರಾಣಿಯರೇ ಆಗಿರಬಹುದೆನ್ನಲಾಗುವ ಹೆಸರು ಉಲ್ಲೇಖವಿಲ್ಲದ ರಾಣಿಯರ ಬಗ್ಗೆ ಮಾಹಿತಿ ಇವೆ(ನಾಗಯ್ಯ ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೪೪, ೪೫).

ವಿಕ್ರಮಾದಿತ್ಯನ ರಾಣಿಯರು ಒಬ್ಬೊಬ್ಬರು ಒಂದೊಂದು ಅಗ್ರಹಾರದಲ್ಲಿ ನೆಲೆಸಿದ್ದಾರೆ. ಆಯಾ ಪ್ರದೇಶದಲ್ಲಿ ಶಾಸನಗಳನ್ನು ಹೊರಡಿಸಿದ್ದಾರೆ. ದೊರೆ ಬಹುಮಂದಿ ಪತ್ನಿಯರನ್ನು ವಿವಾಹವಾಗುವುದನ್ನು ಪ್ರತಿಭಟಿಸಲು ಸಾಧ್ಯವಿಲ್ಲದಿದ್ದಾಗ ರಾಜನಿಂದ ದೂರ ಉಳಿದು ದೂರದ ಅಗ್ರಹಾರ ಪ್ರಾಂತದ ಆಡಳಿತದ ಕಾರಣಕ್ಕೆ ಪ್ರತ್ಯೇಕವಾಗಿ ನೆಲೆಸಿದರು.

ದೊರೆಗಳು ವಿವಾಹವಾಗುತ್ತಿದ್ದ ರಾಣಿಯರು ಒಪ್ಪಿಗೆಯಿದ್ದೇ ವಿವಾಹವಾಗುತ್ತಿದ್ದರೆಂದು ಹೇಳಲಾಗದು. ರಾಜ ಅನ್ಯಸಾಮ್ರಾಜ್ಯದ ಮೇಲೆ ಆಕ್ರಮಣ ಮಾಡಿದಾಗ ಆತನಿಂದ ಸೋತ ರಾಜರು ಅವರಿಗೆ ಸಂಪತ್ತು, ಪ್ರದೇಶಗಳನ್ನು, ಕಾಣೀಕೆ ನೀಡಿ ತಮ್ಮ ಮಕ್ಕಳನ್ನು ವಿವಾಹ ಮಾಡಿಕೊಡುತ್ತಿದ್ದರು. ಶತ್ರುವಿನೊಂದಿಗೆ ವೈವಾಹಿಕ ಸಂಬಂಧ ಏರ್ಪಡಿಸುವುದು ಅನಿವಾರ್ಯವಾಗಿರುತ್ತದೆ. ಹಾಗೆಯೇ ಈಗಾಗಲೇ ಹಲವಾರು ರಾಣಿಯರನ್ನು ವಿವಾಹವಾಗಿದ್ದ ರಾಜನನ್ನು ಮತ್ತೆ ತಾವು ವಿವಾಹವಾಗುವುದು ರಾಜಕುಮಾರಿಯರಿಗೆ ಸಮ್ಮತಿ ಇಲ್ಲದೇ ಹೋದರೂ ಅನಿವಾರ್ಯವಿರುತ್ತದೆ. ಯುದ್ಧ ನಿಲುಗಡೆ ಪ್ರಶ್ನೆ ಇರುತ್ತದೆ. ಕದಂಬ ಒಂದನೇ ಜಯಕೇಶಿ ತನ್ನ ಮಗಳನ್ನು ವಿಕ್ರಮಾದಿತ್ಯನಿಗೆ ಧಾರೆ ಎರೆದುಕೊಟ್ಟ ಸಂದರ್ಭವನ್ನು ಹೇಳುವ ಶಾಸನ.

ಮುದದಿಂ ತನ್ನಯ ದೇಶದತ್ತಲಾಧಿಪಂ ಪೆರ್ಮಾಡಿದೇವಂ ಬರ
ಲ್ಕದಿರ್ವನ್ನಾದಗಡೆ ಕೂರ್ಪ ತನ್ನ ಮಗಳಂ ಧಾರಾನ್ವಿತಂ ಕೊಟ್ಟು ಪೆ
ರ್ಚಿದಲಂಪಂ ಪಲ(ವಾನೆ)ಯಂ ಕುದುರೆಯಂ, ಭಂಣ್ಡಾರಮಂ ಲೆಕ್ಕವಿ
ಲ್ಲದೇ ತೆಲ್ಲಂಟಿಯನಾರ್ತು ಕೊಟ್ಟು ನೆಗಳ್ದಂ ಲೋಕೈಕ ಕಲ್ಪ ದ್ರುಮಂ.

(ನಾಗಯ್ಯ ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ಪುಟ ೩೧). ಕೃಷ್ಣದೇವರಾಯ ಬಹುಪತ್ನಿಯರನ್ನು ಹೊಂದಿದ್ದ ಮತ್ತೊಬ್ಬ ಪ್ರಖ್ಯಾತ ದೊರೆ. ಚಿನ್ನಾದೇವಿ, ತಿರುಮಲಾದೇವಿ(ಕ.ವಿ.ಶಾ. ಸಂಪುಟ-೭ ಮಾನ್ವಿ, ೧೯). ಚಿನ್ನಾದೇವಿ ಕೃಷ್ಣದೇವರಾಯನ ಪ್ರಿಯಾಂಗನೆಯಾಗಿದ್ದು ನೃತ್ಯ ಪ್ರವೀಣೆಯಾಗಿದ್ದಳು. ವೇಶ್ಯೆಯರ ಕುಟುಂಬಕ್ಕೆ ಸೇರಿದ್ದ ಚಿನ್ನಾದೇವಿಯನ್ನು ಪ್ರೀತಿಸಿ ಮದುವೆಯಾಗಿದ್ದನೆಂದು ಪ್ರವಾಸ ಸಾಹಿತ್ಯದಲ್ಲಿ ಉಲ್ಲೇಖಿಸಲಾಗಿದೆ (ನಾಗೇಗೌಡ ಹೆಚ್.ಎಲ್.; ಪ್ರವಾಸಿ ಕಂಡ ಇಂಡಿಯಾ ಪುಟ ೩೮೦). ದೊರೆಗೆ ಚಿನ್ನಾದೇವಿಯ ಮೇಲೆ ಅತಿಯಾದ ಮೋಹವಿದ್ದಂತೆ ತೋರುತ್ತದೆ. ರಾಜಧರ್ಮದಂತೆ ರಾಜ ವೇಶ್ಯೆಯನ್ನು ವಿವಾಹವಾಗುವುದು ತಪ್ಪು. ಅದು ಪಟ್ಟದ ರಾಣಿಯನ್ನಾಗಿ ಮಾಡಿಕೊಳ್ಳುವುದು ರಾಜಧರ್ಮಕ್ಕೆ ವಿರೋಧ ಎಂದು ಅದಕ್ಕಾಗಿ ನ್ಯೂನಿಜ್ ಹೇಳುವ ಪ್ರಕಾರ ಪಟ್ಟದ ರಾಣಿಯನ್ನಾಗಿ ನರಸಿಂಗರಾಜದ ಸುಂದರಿಯನ್ನು ವಿವಾಹವಾಗಿದ್ದನು. ಆದರೂ ಕೃಷ್ಣದೇವರಾಯ ತನ್ನ ದಿಗ್ವಿಜಯದ ಸಂದರ್ಭದಲ್ಲಿ ಚಿನ್ನಾದೇವಿಯನ್ನು ಜೊತೆಯಲ್ಲಿಯೇ ಕರೆದೊಯ್ಯುತ್ತಿದ್ದನು. ಕೃಷ್ಣದೇವರಾಯ ಒರಿಸ್ಸಾ ದಾಳಿಯಿಂದ ರಾಜನೊಂದಿಗೆ ಹಿಂತಿರುಗುವಾಗ ಚಿನ್ನಾದೇವಿ ತಿರುವಿಂಗಳನಾಥ ದೇವರಿಗೆ ಆಭರಣ ಧಾನ ಮಾಡಿದ್ದಾಳೆ. ಇದನ್ನು ತಿರುಮಲೆ ಶಾಸನದಲ್ಲಿ ಉಲ್ಲೇಖಿಸಲಾಗಿದೆ(ಕ.ವಿ.ಶಾ. ಸಂಪುಟ-೫, ಭಾಗ-೨, ಚಂದ್ರಗಿರಿ ೨೭೦). ರಾಯಚೂರ ಮುತ್ತಿಗೆಯಿಂದ ಹಿಂತಿರುಗುವಾಗ ಚಿನ್ನಾದೇವಿ ಮತ್ತು ತಿರುಮಲಾದೇವಿಯರ ಕೈಯಿಂದ ಗೋದಾನ, ಕನಕದಾನ ಮಾಡಿಸಿದ್ದಾನೆ(ಕ.ವಿ.ಶಾ. ಸಂಪುಟ-೭, ಮಾನ್ವಿ ೧೯). ರಾಜರು ಯುದ್ಧದಲ್ಲಿ ಗೆದ್ದು ಶತ್ರುರಾಜರು ರಾಣಿಯರನ್ನು, ರಾಜಕುಮಾರಿಯರನ್ನು ಬರುವಾಗ ಹೊತ್ತು ತರುತ್ತಿದ್ದರು. ಕೆಲವೊಮ್ಮೆ ಶರತ್ತಿನಂತೆ ವಿವಾಹವಾಗುತ್ತಿದ್ದರು. ಕೃಷದೇವರಾಯ ಒರಿಸ್ಸಾದ ರಾಜಕುಮಾರಿಯನ್ನು ವಿವಾಹವಾಗಿದ್ದು ಹೀಗೆಯೇ "ಒರಿಸ್ಸಾದ ದೊರೆ ಗಜಪತಿಪ್ರತಾಪರುದ್ರನ ಹೆಂಡತಿ, ಮಗನನ್ನು ಯುದ್ಧದಲ್ಲಿ ಒತ್ತೆಯಾಳಾಗಿ ತಂದು ಇರಿಸಿಕೊಂಡಿದ್ದನು ಪ್ರತಾಪ ರುದ್ರನು ತನ್ನ ಮಗಳನ್ನು ಕೃಷ್ಣದೇವರಾಯನಿಗೆ ವಿವಾಹ ಮಾಡಿ ಕೊಟ್ಟ ಮೇಲೆ ಸೆರೆಯಲ್ಲಿದ್ದ ಪತ್ನಿಯನ್ನು ಬಿಟ್ಟನು" (ನಾಗೇಗೌಡ ಹೆಚ್.ಎಲ್.; ಪ್ರವಾಸಿ ಕಂಡ ಇಂಡಿಯಾ, ಪುಟ ೩೭೪, ೩೭೫). ಇಲ್ಲಿ ವಿವಾಹ ಶರತ್ತಿನ ಮೇಲೆ ನಡೆಯುತ್ತದೆ. ಮಗಳನ್ನು ಕೊಟ್ಟರೆ ಪತ್ನಿಯನ್ನು ಬಿಡುವ, ಯುದ್ಧದಲ್ಲಿ ಸಂಪತ್ತು ಕೊಳ್ಳೆ ಹೊಡೆದಂತೆ ಸ್ತ್ರೀಯರನ್ನು ಕೊಳ್ಳೆ ಹೊಡೆಯುತ್ತಿದ್ದರು. ಭೂಮಿ ಅಥವಾ ಪ್ರದೇಶವನ್ನು ಗೆದ್ದು ತಮ್ಮ ವಶ ಮಾಡಿಕೊಂಡಂತೆ, ರಾಜಕುಮಾರಿಯರನ್ನು ವಿವಾಹವೆಂಬ ಬಂಧನ ಏರ್ಪಡಿಸಿಕೊಂಡು ತಮ್ಮ ವಶ ಮಾಡಿಕೊಳ್ಳುತ್ತಿದ್ದರು. ಯುದ್ಧದಲ್ಲಿ ಪ್ರದೇಶಗಳನ್ನು ಗೆಲ್ಲುವುದು ಹೇಗೆ ಪೌರುಷದ ಸಂಕೇತವಾಗಿತ್ತೋ ಅದೇ ರೀತಿ ರಾಣಿಯರನ್ನು ವಿವಾಹವಾಗುವುದೂ ಕೂಡ ಪೌರುಷದ ಸಂಕೇತವಾಗಿತ್ತು. ಹೀಗೆ ರಾಜರಲ್ಲಿ ಪತ್ನಿಯರ ಸಂಖ್ಯೆ ಹೆಚ್ಚುತ್ತಾ ಹೋಗುತ್ತಿದ್ದಂತೆ ರಾಣಿಯರಲ್ಲಿ ಭಿನ್ನಾಭಿಪ್ರಾಯ ಬರುವುದು ಸಹಜವೇ ಆಗಿತ್ತು. ಇಲ್ಲಿ ವಿವಾಹವಾದ ಒರಿಸ್ಸಾದ ರಾಜಕುಮಾರಿ

ಜಗನ್ಮೋಹಿನಿಗೆ ವಿವಾಹವಾಗುವ ಯಾವುದೇ ಉದ್ದೇಶವಾಗಲೀ, ಒಪ್ಪಿಗೆಯಾಗಲೀ ಇಲ್ಲವೆಂದೇ ಹೇಳಬಹುದು. ತಾಯಿ ಮತ್ತು ಸಹೋದರರ ಬಿಡುಗಡೆಗೆ ವಿವಾಹ ಅನಿವಾರ್ಯವಾಗಿತ್ತೆನ್ನಬಹುದು.

ದೊರೆಗಳು ಅನ್ಯದೊರೆಗಳ ಆಕ್ರಮಣದಿಂದ ತಪ್ಪಿಸಿಕೊಳ್ಳಲು ಮತ್ತು ಅವರೊಂದಿಗೆ ಇರುವ ಕಡುವೈರತ್ವವನ್ನು ಶಾಶ್ವತವಾಗಿ ಕಡೆಗಣಿಸಿ ಯುದ್ಧದಿಂದ ನಿಲುಗಡೆ ಪಡೆಯಲು ಇಂತಹ ವೈವಾಹಿಕ ಬಾಂಧವ್ಯಗಳು ಯುದ್ಧಭೂಮಿಯಲ್ಲಿ ಏರ್ಪಡುತ್ತಿದ್ದವು. ತಮ್ಮ ಸ್ವಾರ್ಥಕ್ಕಾಗಿ ಈ ಶಾಂತಿಸಂಧಾನಕ್ಕೆ ಸ್ತ್ರೀಯರು ದಾಳವಾಗುತ್ತಿದ್ದರು. ಇಲ್ಲಿ ಸ್ತ್ರೀಯರನ್ನು(ರಾಣಿಯರನ್ನು) ವ್ಯಾವಹಾರಿಕ ದೃಷ್ಟಿಯಿಂದ ನೋಡಿರುವರು. ವೈಂಗಿ ವಿಷ್ಣುವರ್ಧನ ರಾಷ್ಟ್ರಕೂಟರನ್ನು ರಣರಂಗದಲ್ಲಿ ಎದುರಿಸುವುದನ್ನು ತಪ್ಪಿಸಲು ಧ್ರುವನಿಗೆ ತನ್ನ ಮಗಳು ಶೀಲಭಟ್ಟಾರಿಕೆಯನ್ನು ಕೊಟ್ಟು ವಿವಾಹಬಾಂಧವ್ಯವನ್ನು ಏರ್ಪಡಿಸಿದ್ದ. ಯುದ್ಧ ತಪ್ಪಿಸಲು ಅಮೋಘವರ್ಷ ತನ್ನ ಮಗಳು ಚಂದ್ರಲಬ್ಬೆಯನ್ನು ಗಂಗ ದೊರೆ ಭೂತುಗನಿಗೆ ಕೊಟ್ಟು ವಿವಾಹಗೈದಿದ್ದನು. ಹೀಗೆ ದೊರೆಗಳು ವಿವಾಹವಾಗುವುದರಿಂದ ಬಹುಪತ್ನಿತ್ವ ವ್ಯಾಪಕವಾಯಿತು.

ಎರಡನೇ ಜಯಸಿಂಹನ ರಾಣಿ ಮಹಾದೇವಿ(ಕ.ವಿ.ಶಾ. ಸಂಪುಟ-೭, ಮಾನ್ವಿ, ೯೦). ಮತ್ತೊಬ್ಬ ರಾಣಿ ಸೋಮಲಾದೇವಿ(ಕ.ವಿ.ಶಾ. ಸಂಪುಟ-೭, ಮಾನ್ವಿ, ೯೧). ಚಾಲುಕ್ಯ ಜಗದೇಕಮಲ್ಲನ ಪತ್ನಿ ಸೋಮಲಾದೇವಿ(ಕ.ವಿ.ಶಾ. ಸಂಪುಟ-೭, ಮಾನ್ವಿ, ೮೧). ಜಗದೇಕಮಲ್ಲನ ಮತ್ತೊಬ್ಬ ರಾಣಿ ಬಿಜ್ಜಲದೇವಿ(ಕ.ವಿ.ಶಾ. ಸಂಪುಟ-೭, ಮಾನ್ವಿ, ೧೬). ಇಮ್ಮಡಿ ಬಲ್ಲಾಳನ ಪತ್ನಿ ಪೆರಿಯರಸಿ ಕೇತಲಾದೇವಿಗೆ ಸವತಿ ಗಂಧವಾರಣೆ ಎಂಬ ಬಿರುದಿತ್ತು(E.C. VIII, ಹಾಸನ ೧೧೭). ದೊರೆಗಳಂತೆ ಮಾಡಲೀಕರು ಮತ್ತು ಮೇಲ್ವರ್ಗದವರು ಇದಕ್ಕೆ ಹೊರತಾಗಿರಲಿಲ್ಲ. ಅವರೂ ಕೂಡ ಹಲವು ಜನ ಪತ್ನಿಯರನ್ನು ಹೊಂದಿದ್ದರು. ಅತ್ತಿಮಬ್ಬೆ ಗುಂಡಮಬ್ಬೆಯರನ್ನು ಏಕಕಾಲಕ್ಕೆ ವಿವಾಹವಾಗಿದ್ದನೆಂದು ಹೇಳಲಾಗುತ್ತದೆ(ರನ್ನ; ಅಜಿತ ತೀರ್ಥಂಕರ ಪುರಾಣ ಚರಿತ, ಹಂಪ ನಾಗರಾಜಯ್ಯ(ಸಂ); ರನ್ನ ಸಂಪುಟ, ಪುಟ ೨೯೭). ಹೊಯ್ಸಳ ಮೊದಲನೇ ನರಸಿಂಹನ ಮನೆವೆರ್ಗಡೆ ಎರೆಯಮ್ಮನು ಬಾಚಲೆ, ಮಾಚಲೆಯರನ್ನು ವಿವಾಹವಾಗಿದ್ದ(E.C. VIII, ಹಾಸನ ೧೪೨). ನರೇಗಲ್ ಶಾಸನದಲ್ಲಿ ಗಂಗ ದೊರೆ ಭೂತುಗನಿಗೆ ರಾಷ್ಟ್ರಕೂಟರ ರಾಣಿ ರೇವಕ ನಿರ್ಮಡಿಯಲ್ಲದೆ ಪದ್ಮಂಬರಸಿ ಎಂಬ ರಾಣಿ ಇದ್ದಳೆಂದು ಶಾಸನ ಮಾಹಿತಿ ಇದೆ(SII. XI, 38).

ಮೊದಲನೇ ನರಸಿಂಗನಿಗೆ ಕುರಿಯನಾಯಕ ಗರುಡ ಹೋದಾಗ ಆತನ ಹೆಂಡತಿಯರು ಮಾರವ್ವೆ ಮತ್ತು ಚಿಕ್ಕ ಮಾದವ್ವೆ ಪತಿಯನ್ನು ಅನುಸರಿಸಿದರು(E.C. VI, ಕೃಷ್ಣರಾಜಪೇಟೆ ೮೪). ಕನ್ನೆಯ ನಾಯಕನ ಪತ್ನಿಯರು ವುಮ್ಮವ್ವೆ ಮತ್ತು ಕಲ್ಲವ್ವೆ (E.C. VI, ಕೃಷ್ಣರಾಜಪೇಟೆ ೮೨). ರಂಗಯ್ಯ ನಾಯಕನ ಪತ್ನಿಯರು ಕೇತವ್ವೆ ನಾಯಕಿತಿ, ಹೊನ್ನವ್ವೆ ನಾಯಕಿತಿ,

ಮಂಚವ್ವೆ ನಾಯಕಿತಿ ಮೂವರು. ಸಾಮಾನ್ಯರಲ್ಲೂ ಹಲವು ಪತ್ನಿಯರನ್ನು ಹೊಂದಿದ್ದರೆನ್ನುವುದು ನಮಗೆ ಸತಿ ಸ್ಮಾರಕಗಳಿಂದ ಗೊತ್ತಾಗುತ್ತದೆ. ಹಾಡ್ಗೆಯಪುರದ ಮಾರಭಕ್ತನ ಮಗ ಭ(ಶ್ವ) ಭಕ್ತನು ಸ್ವರ್ಗಸ್ಥನಾದಾಗ ಆತನ ಹೆಂಡತಿಯರು ಮೂವರು ತೊಳುಕಯಿ ಕೂಟಕಂಬ(E.C. VII, ಮಂಡ್ಯ, ೭೩ ). ಇಲ್ಲಿ ಕೊಟ್ಟಿರುವ ಶಾಸನೋಲ್ಲೇಖಗಳು ರಾಜರಿಂದ ಸಾಮಾನ್ಯರವರೆಗೆ ಎಲ್ಲ ವರ್ಗದ ಪುರುಷರು ಬಹುಪತ್ನಿಯರನ್ನು ಹೊಂದಿದ್ದರು. ಧರ್ಮ ಮತ್ತು ಸಮಾಜ ಎರಡೂ ಬಹುಪತ್ನಿತ್ವಕ್ಕೆ ಸಮ್ಮತಿಯನ್ನು ಕೊಟ್ಟಿದ್ದರಿಂದ ಪುರುಷರು ಇದೊಂದು ಅಪರಾಧವೆಂದು ಭಾವಿಸಲಿಲ್ಲ. ವೈದಿಕ ಕಾಲದಲ್ಲೇ ಬಹುಪತ್ನಿತ್ವ ಜಾರಿ ಇದ್ದ ಬಗ್ಗೆ ಈ ಹಿಂದೆ ಉಲ್ಲೇಖಿಸಲಾಗಿದೆ. ಸಮಾಜದಲ್ಲಿ ಇದು ಹಾಗೆಯೇ ಮುಂದುವರಿದುಕೊಂಡು ಬಂದಿದ್ದು ಪ್ರಸ್ತುತ ಕಠಿಣ ಕಾನೂನುಗಳನ್ನು ಮಾಡಿದರೂ ಕಾನೂನಿಗೆ ಮರೆಮಾಚಿ ಇಬ್ಬರು, ಮೂವರು ಸ್ತ್ರೀಯರನ್ನು ವಿವಾಹವಾಗುವುದನ್ನು ನಾವು ನೋಡುತ್ತೇವೆ. ಬಹು ಪ್ರಾಚೀನ ಕಾಲದಲ್ಲೇ ಪ್ರಮಾಣೀಕೃತಗೊಂಡಿರುವುದರಿಂದ ಇಂಥ ಪದ್ಧತಿಗಳನ್ನು ಸುಲಭವಾಗಿ ನಿರ್ಮೂಲನೆ ಮಾಡಲು ಸಾಧ್ಯವಿಲ್ಲ. ಅವು ಪುರುಷರಿಂದ ನಿರ್ಮೂಲನೆ ಆಗಬೇಕಾಗಿದೆ. ಅವರೇ ಇಂಥ ಕಾನೂನುಬಾಹಿರ ವಿವಾಹಗಳನ್ನು ತಡೆಗಟ್ಟಬೇಕಾದವರು.

**೪. ೩. ೫. ಪೆಣ್ಬುಯ್ಯಲ್**

ಯುದ್ಧಗಳು ಮನುಷ್ಯನ ಮಹತ್ವಾಕಾಂಕ್ಷೆಯ ಪ್ರತೀಕಗಳು. ಇತಿಹಾಸದಲ್ಲಿ ಯುದ್ಧಗಳು ಸಂಭವಿಸುವುದಕ್ಕೆ ಸಾಮ್ರಾಜ್ಯ ವಿಸ್ತರಣೆ ಒಂದೇ ಪ್ರಮುಖ ಉದ್ದೇಶವಾಗಿದ್ದರೂ ಜೊತೆಗೆ ಶತ್ರುರಾಜ್ಯದ ಸಂಪತ್ತು ಕೊಳ್ಳೆ ಹೊಡೆಯುವುದು, ತಮ್ಮ ಶಕ್ತಿ ಸಾಮರ್ಥ್ಯ ಪ್ರದರ್ಶನದಿಂದ ರಾಜರನ್ನು ತಮ್ಮ ಅಧೀನದಲ್ಲಿರುವಂತೆ ಮಾಡಿಕೊಳ್ಳುವುದು, ಹೀಗೆ ಹಲವು ಉದ್ದೇಶಗಳನ್ನು ಈಡೇರಿಸಿಕೊಳ್ಳುವುದಾಗಿದೆ. ಆ ಮೂಲಕ ಯುದ್ಧದಲ್ಲಿ ವಿಜಯ ಗಳಿಸಿದ ಬಗ್ಗೆ ಏನೋ ಸಾಧಿಸಿ, ಹೆಮ್ಮೆಯಿತ್ತಾದರೂ ಅದರಿಂದ ಸಂಭವಿಸುತ್ತಿದ್ದ ಪರಿಣಾಮ ಬೇಕಿರಲಿಲ್ಲ.

ಯುದ್ಧದಲ್ಲಿ ಸಂಪತ್ತನ್ನು ಕೊಳ್ಳೆ ಹೊಡೆಯುವುದು, ಕಾಣಿಕೆಯ ರೂಪದಲ್ಲಿ ಪಡೆದುಕೊಳ್ಳವುದು, ಸಾಮ್ರಾಜ್ಯ ವಿಸ್ತರಿಸುವುದು, ಇವೆಲ್ಲ ಸಾಮಾನ್ಯವಾಗಿದ್ದವು. ಆದರೆ ಸ್ತ್ರೀಯರನ್ನು ಹೊತ್ತೊಯ್ಯುವುದು ಸಾಮಾನ್ಯವಾಗಿತ್ತು. ವೇದಗಳ ಕಾಲದಲ್ಲಿಯೇ ಆರ್ಯರು ತಮ್ಮ ದಾಳಿಯಲ್ಲಿ ದಸ್ಯು ಶತ್ರುಗಳಿಂದ ದಾಸಿಯರನ್ನು ಹೊತ್ತು ತರುತ್ತಿದ್ದರು(ಭಗವತ್ ಶರಣ ಉಪಾಧ್ಯಾಯ, ಪ್ರಧಾನ್ ಗುರುದತ್ತ (ಅನು); ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ಪುಟ ೧೯೬). ಈ ರೀತಿ ಸ್ತ್ರೀಯರನ್ನು ಸಂಪತ್ತಿನ ರೂಪದಲ್ಲಿ ವಶಪಡಿಸಿಕೊಳ್ಳುವುದು, ಅವರ ಅಧೋಗತಿಯನ್ನು ಸೂಚಿಸುವುದಾಗಿದೆ. ಅವಳನ್ನು ಸಂಪತ್ತೆಂದು ಒಂದು ಕಡೆ ಬಂಧಿಸಿಡುವುದಾದರೆ ಮತ್ತೊಂದೆಡೆ ಸೇವೆ ಪಡೆಯುವುದಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು. ಇವೆರಡು ಮೇಲ್ನೋಟಕ್ಕೆ ವಿರುದ್ಧವೆನಿಸಿದರೂ ಅವೆರಡರ ಹಿಂದಿನ ಉದ್ದೇಶ ಹೆಣ್ಣಿನ

ಅಧಪತನವೇ ಆಗಿತ್ತು. ಯುದ್ಧ ಭೂಮಿಗೆ ತೀರದ ದಾಹ. ಊರನ್ನು ಕೊಳ್ಳೆ ಹೊಡೆಯುವ ದುರಾಸೆಯಿಂದ, ಊರಿಗೂ ಮುತ್ತಿಗೆ ಹಾಕುತ್ತಿದ್ದರು. ಊರಲ್ಲಿ ಸಂಪತ್ತನ್ನು ಸೂರೆಗೊಂಡು ಸ್ತ್ರೀಯರನ್ನು ಹೊತ್ತೊಯ್ಯುತ್ತಿದ್ದರು, ಹೀಗೆ ಹೊತ್ತೊಯ್ಯುವಾಗ ಸ್ತ್ರೀಯರು ಧರಿಸಿದ ವಸ್ತ್ರ ಮುಡಿಯನ್ನು ಎಳೆದು ಅವಮಾನಿಸುತ್ತಿದ್ದರು. ಸ್ತ್ರೀಯರು ತಮ್ಮನ್ನು ರಕ್ಷಿಸುವಂತೆ ಕೂಗಿಕೊಳ್ಳುತ್ತಿದ್ದರು ಅಂಥ ಸಂದರ್ಭದಲ್ಲಿ ಹೆಣ್ಣು ಮಕ್ಕಳ ರಕ್ಷಣೆ ಮಾಡುವುದು ತಮ್ಮ ಕರ್ತವ್ಯವೆಂದು ಪುರುಷರು ರಕ್ಷಣೆಗೆ ಮುಂದಾಗುತ್ತಿದ್ದರು. ಸ್ತ್ರೀ ತನ್ನನ್ನು ರಕ್ಷಿಸುವಂತೆ ಕೂಗುವುದೇ ಪೆಣ್ಬುಯ್ಯಲ್. ಹೀಗೆ ರಕ್ಷಿಸಿದ ವೀರರನ್ನು ಕುರಿತು ಹಾಕಿಸಿದ ಶಾಸನಗಳು ಪೆಣ್ಬುಯ್ಯಲ್ ಶಾಸನಗಳು.

ಸ್ತ್ರೀಯರನ್ನಷ್ಟೇ ಅಲ್ಲ, ಗೋವುಗಳನ್ನು ಸೆರೆಯಲ್ಲಿಟ್ಟುಕೊಳ್ಳುತ್ತಿದ್ದರು. ಇವೆರಡು ಸಂಪತ್ತೆಂದು ಭಾವಿಸಿದರೂ ಒಂದು ರೀತಿಯ ಅಮಾಯಕ ಮತ್ತು ಅಸಹಾಯಕತೆಯ, ಸಂಕೇತವೆಂದು ಸಮಾಜದಲ್ಲಿ ಅವರ ರಕ್ಷಣೆ ಹೊಣೆ ಗಂಡಿಗೆ ಸೇರಿತ್ತು. ಕ್ರಿ.ಶ. ೧೨೨೪ರ ಅಗ್ರಹಾರ ಬಾಚನಹಳ್ಳಿ ಶಾಸನದಲ್ಲಿ ಬಲಗೌಡನ ಮಗ ಕೇತಣ್ಣ ತುರುಗಳ್ಳರನ್ನು ಇರಿದು ಸೆರೆಯಲ್ಲಿದ್ದ ಹೆಣ್ಣು ಮಕ್ಕಳನ್ನು ಮತ್ತು ಗೋವುಗಳನ್ನು ಬಿಡಿಸಿದ(E.C. VI, ಕೃಷ್ಣರಾಜಪೇಟೆ, ೭೮). ಗೋವು ಮತ್ತು ಹೆಣ್ಣುಮಕ್ಕಳನ್ನು ಸೆರೆಯಲ್ಲಿಟ್ಟುಕೊಂಡು ಶತ್ರುವನ್ನು ಕೆಣಕುವುದು. ಇದೊಂದು ರೀತಿಯ ಸವಾಲಿನಂತೆ ತಮ್ಮ ಶಕ್ತಿ ಸಾಮರ್ಥ್ಯದ ಪ್ರದರ್ಶನಕ್ಕೆ ಬಲಿಯಾಗುತ್ತಿದ್ದುದು ಸ್ತ್ರೀಯರು. ತಮಿಳುನಾಡಿನ ಚಿನ್ನಕವುಂಡಮ್ ಪಟ್ಟಿವೂರಿನ ಶಾಸನದಲ್ಲಿ ಕ್ಷತ್ರಿಯ ವೀರ ಪುಲಿಯಮ್ಮನು ನಡಿಯೂರನ್ನು ಆಳುತ್ತಿದ್ದಾಗ, ಅವನ ಮಗ ಪ್ರಿತುವನು ಹೆಣ್ಣೊಂದರ ಮಾನರಕ್ಷಣೆಯ ಸಂದರ್ಭದಲ್ಲಿ ಹೋರಾಡಿ ಮಡಿದದ್ದನ್ನು ದಾಖಲಿಸುತ್ತದೆ(ಕ.ವಿ.ಶಾ. ಸಂಪುಟ–೪, ಹರೂರು, ೧೦೨). ಹೆಣ್ಣಿನ ಶೀಲ ರಕ್ಷಣೆ ಸಂದರ್ಭವನ್ನೇ ಮಾನ ರಕ್ಷಣೆ ಎಂದು ಶಾಸನಗಳಲ್ಲಿ ಹೇಳಲಾಗುತ್ತದೆ. ಕಟ್ಟೆ ಸೋಮನಹಳ್ಳಿ ಶಾಸನದಲ್ಲಿ ಮೇದರ ದುಟ್ಟೆ ನಾಯಕ ಹೆಣ್ಣುಡೆ ಉಚ್ಚುವಲ್ಲಿ ಕಾದು ಮೂವರನ್ನು ಕೊಂದು ಸುರಲೋಕ ಪ್ರಾಪ್ತನಾದ(E.C. VI, ಬೇಲೂರು, ೪೩೭). ಸೆರೆಯಲ್ಲಿರಿಸಿಕೊಂಡ ಸ್ತ್ರೀಯರನ್ನು ಗೌರವದಿಂದ ನಡೆಸಿಕೊಳ್ಳುತ್ತಿರಲಿಲ್ಲವೆನ್ನುವುದು ಈ ಶಾಸನದಿಂದ ತಿಳಿದುಬರುತ್ತದೆ. ಆಯುಧ ಸಮೇತರಾಗಿ ಬಂದು ಸ್ತ್ರೀಯರನ್ನು ಬಂಧಿಸಿ, ಅವರ ಬಟ್ಟೆ ಕಳಚುತ್ತಿದ್ದರು. ಇಂಥ ಸಂದರ್ಭದಲ್ಲಿ ಸ್ತ್ರೀಯರಷ್ಟೇ ಅಲ್ಲ, ಪುರುಷರಿದ್ದರೂ ಏನೂ ಮಾಡಲು ಸಾಧ್ಯವಿಲ್ಲ. ನಿರಾಯುಧರಾದ ಸಂದರ್ಭದಲ್ಲಿ ಆಯುಧವಿರುವವರ ಎದುರು ಹೋರಾಡಲು, ತಮ್ಮ ರಕ್ಷಣೆ ಮಾಡಿಕೊಳ್ಳಲು ಹೇಗೆ ಸಾಧ್ಯ. ಕ್ರಿ.ಶ. ೧೨೩೦ರ ಹಾಲ್ತೊರೆ ಶಾಸನ ಶತ್ರುಗಳು ಊರೆಲ್ಲವನ್ನು ಸೂರೆಗೊಂಡು ಉಡೆ ಉರ್ಚಿ ಹೆಣ್ಣು ಸೆರೆ ತುರುಸೆರೆಯಂ ಬಿಡಿಸಲು ಹೊರಾಡುವಾಗ ಮಾರಯಪರೆಯ ಮರಣ ಹೊಂದಿದ ವಿವರವನ್ನು ತಿಳಿಸುತ್ತದೆ(E.C. VI, ಬೇಲೂರು, ೫೦೫). ಕೋಗೋಡು ಶಾಸನದಲ್ಲಿ ಶತ್ರುಗಳು 'ತಾಯುಡೆ ಉರ್ಚುವಲ್ಲಿ ಊರಳಿವಿನ ತುರುಗೊಳಲು ರಕ್ಷಿಸುವಲ್ಲಿ ಸತ್ತ ಮಾಚಯನು'(E.C. VI, ಬೇಲೂರು,

೫೨೪). ತನ್ನ ತಾಯಿಯ ತಾಯುಡೆ ಉರ್ಚುವಾಗ ಹೋರಾಟ ಮಾಡಿದ್ದಾನೆ. ಸೆರೆ ಹಿಡಿಯುವಾಗ ವಯಸ್ಸಾದ ತಾಯಂದಿರೆಂಬುದು ಲೆಕ್ಕಕ್ಕಿರುತ್ತಿರಲಿಲ್ಲವೆನಿಸುತ್ತದೆ. ಅರಸಿನಗುಪ್ಪೆ ಶಾಸನ ಮಾರಯ ಗಂಗ ಎಂಬ ವೀರನೊಬ್ಬ ಹೆಂಡಿರುಡೆ ಉರ್ಚುವಲ್ಲಿ ಹಲವರನ್ನು ಕೊಂದ ಮಾಹಿತಿ ಇದೆ(E.C. XI, ಚಿಕ್ಕಮಗಳೂರು, ೫೧). ಕೇತಣ್ಣ ತುರುಗಳ್ಳರನ್ನು ಇರಿದು ಸೆರೆಯಲ್ಲಿದ್ದ ಹೆಣ್ಣುಮಕ್ಕಳನ್ನು ಮತ್ತು ಗೋವುಗಳನ್ನು ಸೆರೆಯಿಂದ ಬಿಡಿಸಿದ. ಶತ್ರುಗಳು ಸೆರೆ ಹಿಡಿಯುವಾಗ ವಯಸ್ಸಾದ ತಾಯಂದಿರಾಗಿರಲಿ, ಮದುವೆಯಾದ ಹೆಣ್ಣಾಗಿರಲಿ ಇದಾವುದನ್ನೂ ನೋಡುತ್ತಿರಲಿಲ್ಲ. ಮುಖ್ಯವಾದ ಒಂದು ಅಂಶವೆಂದರೆ ಮದುವೆಯಾಗಿ ಕೌಟುಂಬಿಕ ಚೌಕಟ್ಟಿನಲ್ಲಿರುವ ಹೆಣ್ಣಿಗೂ ಭದ್ರತೆ ಇರಲಿಲ್ಲ, ಗೌರವವೂ ಇರಲಿಲ್ಲ. ಇಲ್ಲಿ ಸೆರೆ ಹಿಡಿಯುವವರು ದರೋಡೆಕೋರರಲ್ಲ ದರೋಡೆ ಮಾಡುವವರ ಉದ್ದೇಶ ದವಸ, ಧಾನ್ಯ, ಸಂಪತ್ತು ಅಷ್ಟೇ. ಪೆಣ್ಬುಯ್ಯಲ್ ಶಾಸನಗಳಲ್ಲಿ ಸ್ತ್ರೀಯರನ್ನು ಸೆರೆ ಹಿಡಿಯುವವರು ಶತ್ರು ಸೈನಿಕರೇ ಆಗಿದ್ದರು. ಹೆಣ್ಣು ಮತ್ತು ಗೋವು ಸಂಪತ್ತೆಂದು ಪರಿಗಣಿಸಿದ್ದರಿಂದ ನಿಮ್ಮ ಸಂಪತ್ತು ನಮ್ಮ ವಶದಲ್ಲಿದೆ. ನೀವು ವೀರರಾಗಿದ್ದರೆ ನಿಮ್ಮ ಸಂಪತ್ತನ್ನು ಬಿಡಿಸಿಕೊಂಡು ಹೋಗಿ ಎಂದು ಸವಾಲು ಹಾಕುವುದು, ಇಲ್ಲಿ ನಡೆಯುವುದು ವೀರತ್ವದ ಪರೀಕ್ಷೆ. ಆದರೆ ಇದಕ್ಕೆ ಬಲಿಯಾಗುತ್ತಿದ್ದುದು ಹೆಣ್ಣು(E.C. VI, ಕೃಷ್ಣರಾಜಪೇಟೆ ೭೮).

ಮನೆ ಮನೆ ಶಾಸನದಲ್ಲಿ ಪೆಣರ್ಯ್ಯೆಯನು ಮನೆ ಮನೆಯನ್ನು ಮುತ್ತಿ ನಡೆಸಿದ ವಿಧ್ವಂಸಕ ಕೃತ್ಯದಲ್ಲಿ ಆಜ್ಜರ ಸಿಂಜ್ಗನು ಊರಳಿವಿನಲ್ಲಿ ಭಾಗವಹಿಸಿ ವೀರಾವೇಶದಿಂದ ಹೋರಾಡಿ ಹೆಂಗಸರ ಮಾನವನ್ನು ಕಾಪಾಡಿ ಹಲವರನ್ನು ಕೊಂದು ತಾನೂ ವೀರಸ್ವರ್ಗವನ್ನು ಹೊಂದುತ್ತಾನೆ (E.C. VIII (ರೈ), ಸೊರಬ, ೨೨). ಪೆಣ್ಬುಯ್ಯಲ್ ಶಾಸನ ಅಧ್ಯಯನದಲ್ಲಿ ಸ್ತ್ರೀಯರನ್ನು ಸೆರೆ ಹಿಡಿದಿರುವುದರ ಕುರಿತು ದಾಖಲಿಸುವುದು ಮುಖ್ಯವಾದ ವಿಷಯವಾಗಿರುವುದಿಲ್ಲ ಮತ್ತು ಸೆರೆ ಹಿಡಿದಿರುವ ಕುರಿತು ದಾಖಲಿಸುವುದು ಶಾಸನದ ಮುಖ್ಯ ಉದ್ದೇಶವೂ ಆಗಿರುವುದಿಲ್ಲ. ವೀರನೊಬ್ಬ 'ವೀರಾವೇಶದಿಂದ' ಹೋರಾಡಿ ಸ್ತ್ರೀಯರ 'ಮಾನವನ್ನು' ಕಾಪಾಡಿ 'ವೀರಸ್ವರ್ಗ ಹೊಂದಿದ'. ಇಲ್ಲಿ ಅವನ ವೀರತ್ವವನ್ನು ತಿಳಿಸುವುದು ಅಥವಾ ದಾಖಲಿಸುವುದು ಮಾತ್ರ ಶಾಸನದ ಉದ್ದೇಶವಾಗಿರುತ್ತದೆ. ಹೊಟ್ಟೂರು ಶಾಸನದಲ್ಲಿ ಚೋಳ ದೊರೆ ರಾಜರಾಜನು ಒಂಬತ್ತು ಲಕ್ಷ ಸೈನ್ಯ ಸಮೇತ ಆಗಮಿಸಿ ದಾನವೂರಿನಲ್ಲಿ ಬೀಡು ಬಿಟ್ಟು ದೇಶವೆಲ್ಲವನ್ನು ಸೂರೆಗೊಂಡು ಸ್ತ್ರೀವಧೆ, ಬಾಲವಧೆ ಮಾಡಿ ಅವರ ಹೆಣ್ಣು ಮಕ್ಕಳನ್ನು ಹಿಡಿದು ಜಾತಿನಾಶ ಮಾಡಿದ(E.I. XVI, p11). ಕಮ್ಮಾರ ಬಮ್ಮನು ಹೆಣ್ಣುಡೆ ಉರ್ಚುವಾಗ ಹೋರಾಡಿ ಮರಣ ಹೊಂದಿದ(E.C. VII, part I (ರೈ), ಶಿಕಾರಿಪುರ, ೩೦೭).

ಭಂಡಕ ಶಾಸನದಲ್ಲಿ ದಂತಿದುರ್ಗನ ತಂದೆ ಇಂದ್ರರಾಜ ಅಥವಾ ಎರಡನೇ ಇಂದ್ರ ಖೇಟಕ ಮಂಡಲದಿಂದ ಚಾಲುಕ್ಯ ರಾಜಕುಮಾರಿ ಭವನಾಗಾ ಅಥವಾ ಭವಗಣಾಳನ್ನು ಅಪಹರಿಸಿ ತಂದು ರಾಕ್ಷಸಪದ್ಧತಿಯಿಂದ ವಿವಾಹವಾಗಿದ್ದನೆಂದು ಭಂಡಕ ಶಾಸನ

ಉಲ್ಲೇಖಿಸುತ್ತದೆ. ಮಂಗಲರಾಜ ವಿನಯಾದಿತ್ಯನಾಗಿದ್ದು ಭವನಾಗ ಈತನ ತಂಗಿ ಅಥವಾ ಮಗಳಾಗಿದ್ದಿರಬೇಕೆಂದು ಊಹಿಸಲಾಗಿದೆ. ವಿನಯಾದಿತ್ಯ ಕೂಡ ಬಾದಾಮಿ ಚಾಲುಕ್ಯರ ಮಾಂಡಲಿಕನಾಗಿದ್ದಿರಬಹುದು(E.I. XIV, p121). ಎರಡನೆ ಇಂದ್ರ ಭವನಾಗಳನ್ನು ಅಪಹರಿಸಿ ತಂದಿದ್ದಲ್ಲದೆ ಆಕೆಗೆ ಒಪ್ಪಿಗೆ ಇಲ್ಲದಿದ್ದರೂ ಬಲವಂತವಾಗಿ ವಿವಾಹವಾಗಿದ್ದಾನೆ. ಈ ರೀತಿ ವಿವಾಹವಾಗುವುದಕ್ಕೆ ರಾಕ್ಷಸ ರೀತಿಯಲ್ಲಿ ವಿವಾಹವಾಗುವುದು ಎನ್ನಲಾಗುತ್ತದೆ. ಅನೇಕ ಪೆಣ್ಬುಯ್ಯಲ್ ಶಾಸನಗಳನ್ನು ನಾವು ಅಧ್ಯಯನ ಮಾಡಿದ್ದೇವೆ. ಅದರಲ್ಲಿ ಸಾಮಾನ್ಯ ಮಹಿಳೆಯರನ್ನು ಅಪಹರಿಸಿ ಸೆರೆಯಲ್ಲಿಟ್ಟುಕೊಂಡಿದ್ದರ ಕುರಿತು ಉಲ್ಲೇಖಿಸಲಾಗಿದೆ. ಆದರೆ ಭಂಡಕ ಶಾಸನದಿಂದ ನಮಗೆ ದೊರೆಗಳೂ ರಾಣಿಯರನ್ನು ಅಪಹರಿಸಿ ತರುತ್ತಿದ್ದರೆಂಬುದು ತಿಳಿದುಬರುತ್ತದೆ. ಪೆಣ್ಬುಯ್ಯಲ್ ಶಾಸನಗಳಿಂದ ನಮಗೆ ಮುಗ್ಧ ಜನರ ಮೇಲೆ ಆದ ಯುದ್ಧದ ಕ್ರೌರ್ಯ ಅರಿವಾಗುತ್ತದೆ. ರಾಜನಾದವನು ಯುದ್ಧದ ನೀತಿನಿಯಮಗಳ ಉಲ್ಲಂಘನೆ ಮಾಡುವುದು ಎಷ್ಟು ಸರಿ? ಯುದ್ಧ ಯುದ್ಧಭೂಮಿಗೆ ಸೀಮಿತವಾಗಿರದೆ ಊರು ಧ್ವಂಸ ಮಾಡುವ ಕೃತ್ಯ ಎಸಗುವುದು ಸರಿಯೆ? ರಾಜರು ತಮ್ಮ ಸೈನಿಕರ ಮೇಲೆ ಹಿಡಿತ ಹೊಂದಿರಲಿಲ್ಲ ಎಂಬುದು ಇದರಿಂದ ತಿಳಿಯುತ್ತದೆ. ತಮ್ಮ ರಾಜ್ಯದ ಪ್ರಜೆಗಳ ಮೇಲಾಗಲಿ, ಶತ್ರುರಾಜರ ಪ್ರಜೆಗಳ ಮೇಲಾಗಲಿ, ಎಲ್ಲರೂ ಒಂದೇ. ಯುದ್ಧಕ್ಕೂ ಪ್ರಜೆಗಳಿಗೂ ಯಾವುದೇ ಸಂಬಂಧವಿರುವುದಿಲ್ಲ. ಯುದ್ಧವೇನಿದ್ದರೂ ರಾಜ ಮತ್ತು ಸೈನಿಕರಿಗೆ ಮಾತ್ರ ಸಂಬಂಧಿಸಿರುತ್ತದೆ. ಊರಲ್ಲಿರುವ ಪ್ರಜೆಗಳು ಅದರಲ್ಲೂ ಸ್ತ್ರೀಯರು, ವಯಸ್ಸಾದ ತಂದೆ ತಾಯಂದಿರು, ಮಕ್ಕಳು ಈ ವಿಷಯದಲ್ಲಿ ಮುಗ್ಧರು. ಅಂಥವರ ಮೇಲೆ ತಮ್ಮ ಪರಾಕ್ರಮ ತೋರಿಸುವುದು ಯಾವ ಯುದ್ಧದ ನೀತಿ? ಇದು ಯಾವುದೇ ಕಳ್ಳಕಾಕರ ಗುಂಪಿನ ದರೋಡೆಯಲ್ಲ, ಚೋಳ ದೊರೆ ರಾಜನಂತಹ ಪರಾಕ್ರಮಿ ದೊರೆಗಳ ಸೈನಿಕರು ಇಂಥ ಕೃತ್ಯ ಎಸಗಿರುವರು. ಅವರು ದಾಳಿ ಮಾಡಿದ್ದು ಸತ್ಯಾಶ್ರಯ ಇರಿವ ಬೆಡಂಗನ ಆಳ್ವಿಕೆ ಕಾಲದಲ್ಲಿ. ನ್ಯಾಯ ನೀತಿ ಪಾಲಿಸಬೇಕಾದ ದೊರೆಗಳೇ ಇಂಥ ಅಮಾಯಕ ಕೃತ್ಯಕ್ಕೆ ಕಾರಣರಾಗುತ್ತಿದ್ದರು. ಸ್ತ್ರೀಯರ ಮೇಲೆ ದಾಳಿ ಮಾಡಿ ಅವರನ್ನು ದೈಹಿಕವಾಗಿ ವಿವಸ್ತ್ರರನ್ನಾಗಿ ಅವಮಾನಿಸುವುದರ ಮೂಲಕ ಸಂತೋಷ ಪಡುವುದು, ಅವರನ್ನು ಒತ್ತೆಯಾಗಿಟ್ಟುಕೊಳ್ಳುವುದು, ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯರ ಜೊತೆ ನಡೆದುಕೊಳ್ಳುವ ರೀತಿ ಇದಲ್ಲ.

ಸ್ತ್ರೀಯರಿಗೆ ಸಾಮಾಜಿಕ ಭದ್ರತೆ ಇರಲಿಲ್ಲ ಎಂಬುದು ಈ ಶಾಸನಗಳಿಂದ ತಿಳಿದು ಬರುತ್ತದೆ. ಬಲಿಷ್ಠ ರಾಜರ ಕಾಲದಲ್ಲೂ ಅಭದ್ರತೆ ಕಾಡಿದೆ. ಊರಿನ ಮೇಲೆ ವಿಧ್ವಂಸಕ ಕೃತ್ಯಗಳು ಎಸಗುವ ತುರುಗಳ್ಳರ ಗುಂಪುಗಳು ಇದ್ದವೆಂದು ಇದರಿಂದ ಹೇಳಬಹುದು. ಹೇಗೆಂದರೆ 'ಊರಳಿವು' 'ತುರುಗಳ್ಳರು' ಫಣೆರೈ ಊರಳಿವಿನಲ್ಲಿ ಭಾಗವಹಿಸಿ(E.C. VII, (ರೈ), ಸೊರಬ, ೨೨). ಈ ಪದ ಪೆರ್ಣಬುಯ್ಯಲ್ ಶಾಸನಗಲ್ಲಿ ಹೆಚ್ಚು ಬಳಕೆಯಾಗಿದೆ. ಇವರು ಸೈನ್ಯ ಸಮೇತ ಬಂದು ಗೋವುಗಳನ್ನು, ಸ್ತ್ರೀಯರನ್ನು ಸೆರೆಹಿಡಿದು ಒಯ್ಯುತ್ತಿದ್ದರು.

ಅವರನ್ನು ಬಿಡಿಸಿಕೊಂಡು ಹೋಗಲು ಸಂಬಂಧಿಸಿದವರಿಗೆ ಆಹ್ವಾನ ಕಳಿಸುತ್ತಿದ್ದರು ಅಥವಾ ವಿಷಯ ತಿಳಿದು ಬಿಡಿಸಿಕೊಂಡು ಬರಲು ತಾವೇ ಹೋಗುತ್ತಿದ್ದರು.ವೀರನಾದವನು ತುರುಗಳ್ಳರೊಂದಿಗೆ ಹೋರಾಡಿ ಬಿಡಿಸಿಕೊಂಡು ಬರುತ್ತಿದ್ದ. ಸೆರೆ ಹಿಡಿದವನು ವೀರನೇ ಆಗಿರುತ್ತಾನೆ. ಒಂದು ವೇಳೆ ಸೋಲದೆ ತುರುಗಳನ್ನು ಸ್ತ್ರೀಯರನ್ನು ಬಿಡದೆ ಹೋದರೆ ಗೋವುಗಳನ್ನು ಅವರೇ ಸಾಕುತ್ತಿದ್ದರು ಇಲ್ಲವೆ ಮಾರುತ್ತಿದ್ದರು. ಆದರೆ ಸ್ತ್ರೀಯರ ಗತಿಯೇನು? ಹಾಗೆ ಸೆರೆಯಲ್ಲೇ ಉಳಿದ ಮಹಿಳೆಯರ ಬಗ್ಗೆ ನಮ್ಮ ಶಾಸನಗಳು ಎಲ್ಲೂ ಉಲ್ಲೇಖಿಸಿಲ್ಲ. ಏಕೆಂದರೆ ಇಲ್ಲಿ ಹೋರಾಡಿದ ವೀರನ ಹೋರಾಟ ಮತ್ತು ಆತನ ವೀರ ಮರಣವನ್ನು ದಾಖಲಿಸುವುದು ಶಾಸನದ ಉದ್ದೇಶವಾಗಿರುವುದು. ಸ್ತ್ರೀಯರು ಸೆರೆಯಲ್ಲಿ ಎದುರಿಸಿದ ಪರಿಸ್ಥಿತಿ ಸೆರೆಯಿಂದ ಹೊರಬರದ ಮಹಿಳೆಯರ ಬಗ್ಗೆ ಮಾಹಿತಿ ನೀಡುವುದು ಉದ್ದೇಶವಾಗಿಲ್ಲ. ಸೆರೆಯಿಂದ ಹೊರಗೆ ಬರದ ಮಹಿಳೆಯರನ್ನು ತಮಗೆ ಬೇಕಾದಂತೆ ದಾಸಿಯರಾಗಿಯೋ ಆಳಾಗಿಯೋ ಕೊನೆಗೆ ತಮಗೆ ಬೇಡವೆನಿಸಿದ ಮೇಲೆ ವೇಶ್ಯೆಯರನ್ನಾಗಿಯೋ ಮಾಡಿರುವ ಸಾಧ್ಯತೆ ಇದೆ. ಇಲ್ಲವೆಂದು ಅಲ್ಲಗಳೆಯಲು ಕದ್ದೊಯ್ದವರು ದುರಾಚಾರಿಗಳೇ ಹೊರತು ಸುಸಂಸ್ಕೃತರಲ್ಲ. ಅಲ್ಲದೆ ಅವರನ್ನು ಹಾಗೆ ಬಿಡಲು ಅವರು ಕದ್ದೊಯ್ಯಬೇಕಾಗಿರಲಿಲ್ಲ.

ಸ್ತ್ರೀ ರಕ್ಷಣೀಯಳು, ಆದರೆ ರಕ್ಷಕಳಲ್ಲವೆಂದು ನಮ್ಮ ಸನಾತನ ಧರ್ಮ ಸಾರುತ್ತವೆ. ಅವಳು ಅಬಲೆ ತನ್ನನ್ನು ತಾನು ರಕ್ಷಣೆ ಮಾಡಿಕೊಳ್ಳಲು ಆಗದವಳು ಎಂದು ಹೇಳಲಾಗುತ್ತದೆ. ಪುರುಷನಿಗೆ ತನ್ನನ್ನು ತಾನು ರಕ್ಷಣೆ ಮಾಡಿಕೊಳ್ಳುವ ತರಬೇತಿ ನೀಡಲಾಗಿರುತ್ತದೆ. ಆದರೆ ಸ್ತ್ರೀಯರಿಗೆ ಇಂಥ ತರಬೇತಿ ನೀಡಿರುವುದಿಲ್ಲ. ಕಾರಣ ಅವಳನ್ನು ತಾನೇ ರಕ್ಷಣೆ ಮಾಡಿಕೊಳ್ಳಬೇಕೆಂಬ ಕಾರಣವಿರುವುದಿಲ್ಲ. ಅಷ್ಟಕ್ಕೂ ಅವಳಿಗೆ ರಕ್ಷಣೆ ಬೇಕಾಗಿರುವುದು ಯಾರಿಂದ? ದುಷ್ಟ ಕಾಡು ಪ್ರಾಣಿಗಳಿಂದಂತೂ ಅಲ್ಲ. ಅಂದ ಮೇಲೆ ಅವಳಿಗೆ ತೊಂದರೆ ತನ್ನಂತೆ ಮತ್ತೊಬ್ಬ ಪುರುಷನಿಂದಲೇ ಅಲ್ಲವೆ? ಸ್ತ್ರೀಯರಿಗೆ ಭದ್ರತೆ ಬೇಕಾಗಿದುದು ಪುರುಷನ ಭಯದ ಕಾರಣಕ್ಕೇ ಹೊರತು ಮತ್ತಾವ ಕಾರಣದಿಂದಲೂ ಅಲ್ಲ. ರಕ್ಷಿಸಬೇಕು ಎನ್ನುವವರು ಪುರುಷರೇ, ಆಪತ್ತುಂಟು ಮಾಡುವವರು ಅವರೇ.

ರಾಜರಾಜನ ಸೈನ್ಯ ದಾನವೂರಿನಲ್ಲಿ ಬೀಡುಬಿಟ್ಟು ದೇಶವೆಲ್ಲವನ್ನು ಸೂರೆಗೊಂಡು ಸ್ತ್ರೀ ವಧೆ ಮತ್ತು ಬಾಲವಧೆ ಮಾಡಿದ ಎಂದಿದೆ. ಅಂದರೆ ಸ್ತ್ರೀಯರನ್ನು, ಮಕ್ಕಳನ್ನು ಕೊಂದು, ಸ್ತ್ರೀಯರನ್ನು ಹಿಡಿದು ಜಾತಿ ನಾಶ ಮಾಡಿದ. ಅಂದರೆ ಮಾನಭಂಗ ಮಾಡಲಾಯಿತು ಸೆರೆಯಲ್ಲಿದ್ದ ಮಹಿಳೆಯರನ್ನು ಗೌರವಿಸದೆ ಮಾನಭಂಗದಂತಹ ಕೃತ್ಯ ಎಸಗುತ್ತಿದ್ದರು. ಹಾಗಾದರೆ ಅವರ ಮುಂದಿನ ಜೀವನದ ಸ್ಥಿತಿ ಪ್ರಶ್ನೆಯಾಗಿ ಉಳಿಯುತ್ತಿತ್ತು. ಒಂದು ವೇಳೆ ಸುರಕ್ಷಿತವಾಗಿ ತಮ್ಮ ಮಾನಕ್ಕೆ ಧಕ್ಕೆ ಆಗದಂತೆ ಮರಳಿ ಬಂದರೂ ಕುಟುಂಬ ಅವರನ್ನು ಸುಲಭವಾಗಿ ಸ್ವೀಕರಿಸುತ್ತಿತ್ತೆ? ಏಕೆಂದರೆ ಶೀಲ ಪಾವಿತ್ರ್ಯಕ್ಕೆ ಪರಮೋಚ್ಚ ಸ್ಥಾನ ಕೊಟ್ಟಿರುವ ನಮ್ಮ ಸಮಾಜ ಅವಳನ್ನು ಅನುಮಾನಕ್ಕೆ ಗುರಿಮಾಡುವುದು ಸಹಜ. ಇಂಥ ವ್ಯವಸ್ಥೆಯ ಮಧ್ಯೆ ಸ್ತ್ರೀಯರ

ಬದುಕು ಶೋಚನೀಯ. ಸಮಾಜ ಸ್ವೀಕರಿಸದೇ ಹೋದಾಗ ಬದುಕುವ ಅನಿವಾರ್ಯತೆಯಲ್ಲಿ ಅನುಸರಿಸಬೇಕಾದ ಮಾರ್ಗಗಳು ನೀತಿಭ್ರಷ್ಟತೆಯಿಂದ ಕೂಡಿರಲೂಬಹುದು. ಸಮಾಜದಲ್ಲಿ ಸ್ತ್ರೀಯರಿಗೆ ಆಪತ್ತು ಒದಗಿರುವುದು ಪುರುಷರಿಂದಲೇ ಮತ್ತು ಆ ಆಪತ್ತಿನಿಂದ ಅವರ ರಕ್ಷಣೆಯ ಕೊರತೆ ಸದಾ ಕಾಡಿದೆ.

ಪ್ರಸ್ತುತ ಜಗತ್ತಿನಲ್ಲಿ ಸ್ತ್ರಿಯರ ವಿಚಾರವಾಗಿ ಮೇಲೆ ಶಾಸನಗಳಲ್ಲಿ ಉಲ್ಲೇಖಿಸಿರುವುದಕ್ಕಿಂತ ಹೊರತಾಗಿ ನಡೆಯುವಂತಹದ್ದೇನಿಲ್ಲ.. ಸ್ತ್ರೀಯರನ್ನು ಸೆರೆಯಲ್ಲಿಟ್ಟುಕೊಂಡು ತಮ್ಮ ಅವಶ್ಯಕತೆಗೆ ತಕ್ಕಂತೆ ಹಣ ಅಥವಾ ಇನ್ನಾವುದಾದರೂ ಆಮಿಷ ಒಡ್ಡುವುದು, ಸರಿಯಾದ ಸಮಯಕ್ಕೆ ತಮ್ಮ ಬೇಡಿಕೆ ಈಡೇರದೇ ಇದ್ದಾಗ ಅವರನ್ನು ಮಾನಭಂಗ ಮಾಡಿ ನಂತರ ಸಾಯಿಸುವುದು, ಇಲ್ಲವೇ ಮಾನಭಂಗದ ಉದ್ದೇಶದಿಂದಲೂ ಸ್ತ್ರೀಯರನ್ನು ಅಪಹರಣ ಮಾಡುವುದನ್ನು ನಾವು ನೋಡುತ್ತಿದ್ದೇವೆ. ಮಾನಭಂಗ ಮಾಡುವ ಉದ್ದೇಶ ಅಂತಃಶಕ್ತಿಯನ್ನು ಕುಗ್ಗಿಸುವ ಕಾರಣ ಒಂದಾದರೆ ಮತ್ತೊಂದು ಕುಟುಂಬದ ಅಥವಾ ಊರಿನ ಹೆಣ್ಣು ಮಕ್ಕಳ ಶೀಲಹರಣ ಮಾಡುವುದರ ಮೂಲಕ ಅವರನ್ನು ಯಜಮಾನ ಅಥವಾ ಉರಿನ ನಾಯಕನು ಅಸಹಾಯಕರೆಂದು ಅವಮಾನಿಸುವುದಾಗಿದೆ. ಆ ಮೂಲಕ ತಮ್ಮ ಪುರುಷತ್ವವನ್ನು ಎತ್ತಿಹಿಡಿಯುವುದು, ಅಂದರೆ ಗಂಡಿನ ಮೇಲಿನ ದ್ವೇಷಕ್ಕೆ ಹೆಣ್ಣನ್ನು ಸಾಧನವಾಗಿ ಬಳಕೆ ಮಾಡಿಕೊಳ್ಳುತ್ತಾನೆ. ಬೈಗುಳಗಳಲ್ಲಿಯೂ ಇದು ಸಾಮಾನ್ಯ ಹೆಂಡತಿ, ತಾಯಿಯನ್ನೇ ಬಳಕೆ ಮಾಡುವುದನ್ನು ನೋಡಿದ್ದೇವೆ. ಮಾತೃಪ್ರಧಾನ ವ್ಯವಸ್ಥೆಯಲ್ಲಿ ಇದ್ದ ಪುರುಷನ ಮನೋರಚನೆಗಳು ಪಿತೃಪ್ರಧಾನ ವ್ಯವಸ್ಥೆಯಲ್ಲಿನ ಪುರುಷನ ಮನೋರಚನೆಗಳು ಎಷ್ಟೊಂದು ಭಿನ್ನವಾಗಿವೆ. ಇಂದಿನ ಪಿತೃಪ್ರಧಾನ ಸಮಾಜದಲ್ಲಿ ಗಂಡಿಗೆ ಹೆಣ್ಣಿನ ಬಗ್ಗೆ ಇರುವ ವಿಕೃತ ಭಾವನೆಗಳು, ನೋಡುವ ದೃಷ್ಟಿಕೋನ, ಶುದ್ಧ ಆಲೋಚನೆಗಳಿಲ್ಲದಿರುವುದು, ಇಂಥ ಕೃತ್ಯಗಳು ಹೆಚ್ಚಾಗಿ ಸಂಭವಿಸಲು ಕಾರಣವಾಗುತ್ತವೆ.

ಅಧ್ಯಾಯ ಐದು

## ಶಾಸನಗಳಲ್ಲಿ ಕಂಡು ಬರುವ ಸ್ತ್ರೀವಿರೋಧಿ ಆಚರಣೆಗಳು.

೫.೧ ಪಾತರದವರು
೫.೨ ಸೂಳೆಯರು/ವೇಶ್ಯೆಯರು
೫.೩ ಸತಿಪದ್ಧತಿ
ಅ) ಸತಿ ಪದ್ಧತಿಯ ಅರ್ಥ ಮತ್ತು ಬೆಳವಣಿಗೆ.
ಆ) ಸತಿ ಸ್ಮಾರಕಗಳು.
ಇ) ಸತಿ ಹೋಗುವ ಸಂದರ್ಭ.
ಈ) ಸತಿ ಹೋಗದ ಮಹಿಳೆಯರ ಜೀವನ.
ಉ) ಜನಪದರಲ್ಲಿ ಸತಿ ನಂಬಿಕೆ.
೫.೩.೧ ಆರ್ಥಿಕ ಕಾರಣಗಳು
೫.೩.೨ ಸಾಮಾಜಿಕ ಕಾರಣಗಳು
೫.೩.೩ ರಾಜಕೀಯ ಕಾರಣಗಳು
೫.೩.೪ ಧಾರ್ಮಿಕ ಕಾರಣಗಳು
೫.೪ ಕನ್ಯಾದಾನ, ತೊತ್ತುಪದ್ಧತಿ
೫.೫ ಆತ್ಮ ಬಲಿದಾನಗಳು

**ಸಮಾಜದಲ್ಲಿ ಆಚರಣೆಯಲ್ಲಿದ್ದ ಸ್ತ್ರೀವಿರೋಧಿ ಪದ್ಧತಿಗಳು**

ದೇವಾಲಯಗಳ ರಂಗವೇದಿಕೆಯಲ್ಲಿ ನೃತ್ಯ ಮಾಡುವ ಸ್ತ್ರೀಯರನ್ನು ಪಾತರದವರು ಎಂದು ಕರೆಯಲಾಗಿದೆ. ಹಾಗಾದರೆ ಈ ಪಾತರದವರೆಂದರೆ ಯಾರು, ಅವರ ಮೂಲ, ವೃತ್ತಿ, ಆರ್ಥಿಕ ಹೀಗೆ ಪಾತರದವರಿಗೆ ಸಂಬಂಧಿಸಿದ ಹಲವಾರು ವಿಚಾರಗಳನ್ನು ಕುರಿತು ಅಧ್ಯಯನ ಮಾಡುವುದರ ಮೂಲಕ ತಿಳಿದುಕೊಳ್ಳಬಹುದಾಗಿದೆ. ಪಾತರದವರಿಗಿಂತ ಹಿಂದೆ ಅಂದರೆ ಎಂಟನೆ ಶತಮಾನಕ್ಕಿಂತಲೂ ಪೂರ್ವದಲ್ಲಿ ದೇವಾಲಯಗಳಲ್ಲಿ ನೃತ್ಯ ಮಾಡುವವರು ಸೂಳೆಯರಾಗಿದ್ದರು. ದೇವಾಲಯಕ್ಕೂ ನೃತ್ಯ ಪರಂಪರೆಯವರ ನಡುವೆ ಇರುವ ಸಂಬಂಧ ಬಹು ಪ್ರಾಚೀನವಾದದ್ದು. ನನ್ನ ಅಧ್ಯಯನದ ಕಾಲಾವಧಿಯಲ್ಲಿ ನೃತ್ಯ ಮಾಡುವವರನ್ನು ಪಾತರ ಅಥವಾ ಪಾತ್ರದವರೆಂದು ಸಂಭೋಧಿಸಲಾಗುತ್ತಿದ್ದುದರಿಂದ ಇಲ್ಲಿ ಪಾತರದವರೆಂದೇ ಅಧ್ಯಯನ ಮಾಡಲಾಗುತ್ತದೆ.

**ಅರ್ಥ;**

ದೇವಾಲಯಗಳಲ್ಲಿ ನೃತ್ಯ ಮಾಡುವವರು ಒಂದು ಸಮೂದಯಕ್ಕೆ ಸೇರಿದವರೆ ಎಂಬುದನ್ನು ನಾವು ಖಚಿತಪಡಿಸಿಕೊಳ್ಳಬೇಕೆಂದರೆ ಮೊದಲು ದೇವಾಲಯಗಳಲ್ಲಿ ನೃತ್ಯಮಾಡುವವರನ್ನು ಬೇರೆ ಬೇರೆ ಕಾಲಘಟ್ಟಗಳಲ್ಲಿ ಭಿನ್ನ ಹೆಸರಿನಿಂದ ಹೇಗೆ ಕರೆಯಲಾಗುತ್ತಿತ್ತು ಎನ್ನುವುದನ್ನು ತಿಳಿದುಕೊಳ್ಳಬೇಕು.

ನಟುವರ್ ಎಂದು ಕರೆಯಲಾಗುತ್ತಿದ್ದ ಇವರು ನಾಟ್ಯ; ನಟರ ಕೆಲಸ (ವೃತ್ತಿ); ನೃತ್ಯ, ಗೀತ, ವಾದ್ಯಗಳು ಸೇರಿದುದು,

ನಾಟಕ ಎಂದರೆ ನಟಿಸಿ ತೋರಿಸತಕ್ಕ ಕಾವ್ಯ, ನೃತ್ಯ, ಶಾಲೆ=ನಾಟಕಗಳನ್ನು ತೋರಿಸುವ ಮನೆ; ರಂಗಭೂಮಿ,

ನಾಟರ ಎಂದರೆ ನಟನ ಮಗ, ಒಂದು ಕಾವ್ಯವನ್ನು ನೃತ್ಯದ ಮೂಲಕ ತೋರಿಸುವ ವೃತ್ತಿಯವರು. ನಾಟರ ಸ್ತ್ರೀ ನಾಟಿಕೆ(ನಾಟಿಕಾ) (ಶಿವರಾಮಕಾರಂತ; ಸಿರಿಗನ್ನಡ ಅರ್ಥಕೋಶ, ಪುಟ; ೨೮೪, ೨೮೫).

ಈ ಮೇಲೆ ಉಲ್ಲೇಖಿಸಿದಂತೆ ನಾಟ್ಯ ಎನ್ನುವುದು ಒಂದು ವೃತ್ತಿಯಾಗಿದ್ದು ಅದು ವಂಶಪಾರಂಪರ್ಯವಾಗಿ ಮುಂದುವರಿದುಕೊಂಡು ಬಂದಿದೆ. ನಾಟ್ಯ ಮಾಡುವ ವೃತ್ತಿಯವರನ್ನು ನಟುವರ್ ಎಂದು ಉಲ್ಲೇಖಿಸಲಾಗಿದ್ದು, ನಟುವರ್ ಒಂದು ಸಮುದಾಯಕ್ಕೆ ಸೇರಿದವರು ಎಂದು ಹೇಳಬಹುದು. ನಾಟ್ಯ, ನಾಟಕ, ನಾಟ, ಇವೆಲ್ಲ ಒಂದೇ ಅರ್ಥದ ಹಿನ್ನೆಲೆಯನ್ನು ಹೊಂದಿವೆ. ಗೀತೆ, ವಾದ್ಯ, ನೃತ್ಯ, ಗೀತೆಯನ್ನು ವಾದ್ಯಗಳೊಂದಿಗೆ ನೃತ್ಯದ ಮೂಲಕ ತೋರಿಸುವುದಾಗಿದೆ. ಒಂದು ಕಾವ್ಯವನ್ನು ನೃತ್ಯದ ಮೂಲಕ ತೋರಿಸುವುದಾಗಿದೆ. ನಾಟರ ಎಂದರೆ ನಾಟರ ಜನಾಂಗಕ್ಕೆ ಸೇರಿದವನು, ನಾಟರ ಮಗ ಎಂದು ಉಲ್ಲೇಖಿಸಲಾಗಿದೆ.

ನಾಟರಿಗೆ ಮಗನಿದ್ದಂತೆ ಮಗಳೂ ಇರುತ್ತಾಳೆ. ನಾಟರು ಒಂದು ಕಾವ್ಯವನ್ನು ನೃತ್ಯದ ಮೂಲಕ ತೋರಿಸುವ ವೃತ್ತಿಯವರು.

ನಮಗೆ ಶಾಸನಗಳಲ್ಲಿ ನಾಟಕಶಾಲೆಗಳ ಉಲ್ಲೇಖವಿದೆ. ನಾಟ್ಯಶಾಲೆಗಳೆಂದು ಉಲ್ಲೇಖಿಸಲಾಗಿದೆ. ನಟುವರ್ ನೃತ್ಯದ ಅಭ್ಯಾಸ ಮಾಡುವ ಸ್ಥಳವೇ ನಾಟ್ಯ ಶಾಲೆಗಳಾಗಿರಬಹುದು. ಸಾಲೊಟಗಿ ಶಾಸನದಲ್ಲಿ ನಾಟಕಶಾಲೆಯ ಪ್ರಸ್ತಾಪ ಬಂದಿದೆ. 'ಘನಭುಜ.........ಪ ನಾಟ್ಯಶಾಲೆ' ಎಂದಿದೆ. ರಂಗಾದಿಭೋಗಕ್ಕೆ ದಾನ ನೀಡಿದ ಮಾಹಿತಿ ಇದೆ. ಅದೇ ಶಾಸನದ ಮುಂದಿನ ಸಾಲಿನಲ್ಲಿ ಅಳಕಪುರದ ವರ್ಣನೆ ಹೀಗಿದೆ. 'ಪಿರಿದು ರಾಜ್ಯಮ ಮಾಡುವ ಪುರವೇ ಪಾರಣೆಯ ಚೆಲುವಿನೊಲವಿಂ ಪೊಗಳ್ವೆಂ ಅಳಕಪುರವಮರಾವತಿ ವಿಳಸದ್ಭೋಗವತಿಪುರಂ ಸಮನಲ್ಲೆಂದಿಳೆಯಲ್ಲಂ'(SII. XX, 179). ಮುಗದ ಶಾಸನದಲ್ಲಿ ಶ್ರೀಮನ್ ಮಹಾಸಾಮಂತ ಮೂರ್ತಿಣ್ಣಯ್ಯನ ತಮ್ಮ ಮುತ್ತಯ್ಯ ಬಸದಿ ಮತ್ತು ನಾಟಕ ಶಾಲೆಯನ್ನು ಮಾಡಿಸಿದ ಎಂಬ ಮಾಹಿತಿ ಇದೆ(SII. XI part I&II, 78). ಕ್ರಿ.ಶ. ೧೫೨೧ರಲ್ಲಿ ಯಲಹಂಕ ನಾಡಪ್ರಭುಗಳ ಇಮ್ಮಡಿ ಕೆಂಪೇಗೌಡನ 'ಪಟ್ಟದ ನಾಟಕಶಾಲೆ'ಯ ಶೃಂಗಾರಮ್ಮ ಎಂದಿದೆ. ಶೃಂಗಾರಮ್ಮ ನೃತ್ಯಶಾಲೆಯನ್ನು ನಡೆಸಿಕೊಂಡು ಹೋಗುವವಳಿರಬೇಕು. ಈ ನಾಟಕಶಾಲೆಗಳಲ್ಲಿ ನೃತ್ಯ ಮಾಡುವವರೇ ನಟುವರ್ ಅಥವಾ ನಟುವ ಜನಾಂಗದವರು.

ನಾಟಕಶಾಲೆಗಳಂತೆ ನೃತ್ಯ ತರಬೇತಿ ನೀಡುತ್ತಿದ್ದ ಮತ್ತೊಂದು ಸ್ಥಳದ ಉಲ್ಲೇಖ ಬರುತ್ತದೆ, 'ನಾಗಾವಾಸ'ಎಂದು, ಶೆಟ್ಟರ್ ಅವರು ತಮ್ಮ ಸೋಮನಾಥಪುರ ಎಂಬ ಕೃತಿಯಲ್ಲಿ ನಾಗಾವಾಸದ ಬಗ್ಗೆ ವಿವರಣೆ ಕೊಟ್ಟಿದ್ದಾರೆ. ನಾಗಾವಾಸ ಪಾತರದವರಿಗೆ ಸಂಬಂಧಿಸಿದ ಮತ್ತೊಂದು ಪದ. ಭಕ್ತಿಪೂರ್ವಕವಾಗಿ ನಾಟ್ಯ ಮುಂತಾದ ಮನರಂಜನಾ ಕಾರ್ಯವನ್ನು ಪೂರೈಸಿ ಕೊಡುತ್ತಿದ್ದ ನಾಗಾವಾಸದವರಿಗೆ ರಂಗಭೋಗದ ಆಚರಣೆಗಳಲ್ಲಿ ವಿಶಿಷ್ಟ ಸ್ಥಾನವಿತ್ತು. ಕೇಶವ ಮತ್ತು ಪಂಚಿಕೇಶ್ವರ ದೇವಾಲಯಗಳಲ್ಲಿ ಪ್ರತ್ಯೇಕ ನಾಗಾವಾಸದ ಬಳಗಗಳಿದ್ದವು. ಅವರಿಗೆ ಪ್ರತಿ ೩೦೦ ಗದ್ಯಾಣ ವಾರ್ಷಿಕ ವರಮಾನವಿತ್ತು(ಶೆಟ್ಟರ್ ಷ.; ಸೋಮನಾಥಪುರ, ಪುಟ ೧೪೭, ೧೪೮). ನಾಟ್ಯ ಅಥವಾ ನಾಟಕಶಾಲೆಗಳಿಗೆ ಬಳಸಲಾದ ಪರ್ಯಾಯ ಪದ ನಾಟಕಶಾಲೆಯಲ್ಲಿ ನಡೆಯುತ್ತಿದಂತೆ ನೃತ್ಯ ಸಂಗೀತದ ತರಬೇತಿ ಇಲ್ಲಿ ನೀಡಲಾಗುತ್ತಿತ್ತು. ನಾಗಾವಾಸದ ಬಗ್ಗೆ ಹೆಚ್ಚಿನ ವಿವರಣೆ ನೀಡಿದ್ದಾರೆ.

'ನಾಗಾವಾಸ'ದಲ್ಲಿ ನೃತ್ಯ ಮತ್ತು ಇನ್ನಿತರ ಸೇವೆಯಲ್ಲಿ ತೊಡಗಿಸಿಕೊಳ್ಳುತ್ತಿದ್ದರು, ಮದುವೆಯಾಗದ, ದೇವಾಲಯದ ಹೆಣ್ಣುಗಳನ್ನು 'ನಾಗಾವಾಸ' ಮತ್ತು ಇದಕ್ಕಿಂತ ಹೆಚ್ಚು ಪ್ರಸಾರದಲ್ಲಿದ್ದ 'ದೇವದಾಸಿ' ಪದದಿಂದ ಗುರುತಿಸಲಾಗುತ್ತಿತ್ತು. 'ನಾಗಾವಾಸ'ದಲ್ಲಿ ನೃತ್ಯ,

ಸಂಗೀತಗಾರರಲ್ಲದೆ, ಅವರಿಗೆ ತರಬೇತಿ ಕೊಡುತ್ತಿದ್ದ 'ನಟುವ'ರಿದ್ದರೆಂದು ತಿಳಿದುಬರುತ್ತದೆ. ಸೋಮನಾಥಪುರದಲ್ಲಿ ಇವರ ರಕ್ಷಣೆಗೆ ಒಬ್ಬ ನಾಯಕನಡಿ ಕೆಲವು ಅಂಗರಕ್ಷಕರಿದ್ದರೆಂಬ ವಿವರ ಕೇಶವ ದೇವಾಲಯದ ಶಾಸನದಲ್ಲಿ ಬರುವುದು. ನೃತ್ಯ-ಸಂಗೀತ ಸೇವೆಯಲ್ಲದೆ ಚಾಮರ, ಆರತಿ ಸೇವೆಯಲ್ಲಿ ನಾಗಾವಾಸಿಗಳು ನಿರತರಾಗಿದ್ದರು(ಶೆಟ್ಟರ್ ಷ; ಸೋಮನಾಥಪುರ, ಪುಟ ೧೪೭, ೧೪೮). ಇದರಿಂದ ನಮಗೆ ಸ್ಪಷ್ಟ ಮಾಹಿತಿ ದೊರೆಯುತ್ತದೆ. ನಾಗಾವಾಸದಲ್ಲಿ ನಟುವರು ಸಂಗೀತ ನೃತ್ಯವನ್ನು ಕಲಿಸಿಕೊಡುತ್ತಿದ್ದರು. ಅಲ್ಲದೆ ದೇವಾಲಯಗಳಲ್ಲಿ ಚಾಮರ, ಆರತಿ, ಸೇವೆಯನ್ನು ಮಾಡುತ್ತಿದ್ದರು. ಅಂದರೆ ದೇವಾಲಯದಲ್ಲಿ ನೃತ್ಯ ಮಾಡುತ್ತಿದ್ದ ಪಾತರದವರಾಗಿರಲಿ, ಅದಕ್ಕೂ ಮೊದಲಿದ್ದ ಸೂಳೆಯರಾಗಿರಲಿ, ಇವರಿಗೆ ನೃತ್ಯ ತರಬೇತಿ ನೀಡುತ್ತಿದ್ದವರು ನಟುವರು.

ನಾಗಾವಾಸ; ನಟರ ಮನೆ; ನಾಟ್ಯಗಾತಿಯರ ಗುಂಪು, ನಾಗ=ಸರ್ಪ ಅರ್ಥವನ್ನು ಹೊಂದಿದೆ. ಪ್ರತ್ಯಯಗಳನ್ನು ಬಳಕೆ ಮಾಡಿ ಹಲವಾರು ಶಬ್ದಗಳನ್ನು ರಚನೆ ಮಾಡಲಾಗಿದೆಯಾದರೂ ಸರ್ಪದ ಅರ್ಥವನ್ನೇ ಹೆಚ್ಚು ಹೊಂದಿವೆ. ರಾಜರನ್ನು ಮೋಸದಿಂದ ತಮ್ಮ ವಶ ಮಾಡಿಕೊಳ್ಳಲು, ಅವರ ರಾಜ್ಯದೊಳಗೆ ಇದ್ದುಕೊಂಡು ಅವರನ್ನು ನಾಶ ಮಾಡಲು ಸುಂದರವಾದ ನೃತ್ಯ ಬಲ್ಲ ಕನ್ಯೆಯರನ್ನು(ವಿಷಕನ್ಯೆ) ಶತ್ರುರಾಜ್ಯಕ್ಕೆ ಕಳಿಸಿಕೊಡುತ್ತಿದ್ದರು. ಅಂಥವರಿಗೆ ರಾಜನ ರಹಸ್ಯಗಳನ್ನು ತಿಳಿದುಕೊಳ್ಳಲು ಮತ್ತು ನೃತ್ಯಕ್ಕೆ ವಿಶೇಷ ತರಬೇತಿ ನೀಡುತ್ತಿದ್ದರು. ಹೀಗೆ ನೃತ್ಯಕ್ಕೆ ತರಬೇತಿ ನೀಡುವ ಸ್ಥಳಕ್ಕೆ ನಾಗಾವಾಸ ಎಂಬ ಹೆಸರು ಬಂದಿರಬಹುದು. ಕೌಟಿಲ್ಯ ಅರ್ಥಶಾಸ್ತ್ರದಲ್ಲಿ ಹೇಳಿದಂತೆ ಗಣಿಕೆಯರು ಅರವತ್ನಾಲ್ಕು ಕಲೆಗಳನ್ನು ಕಲಿಯಬೇಕಿತ್ತು. ಅದರಲ್ಲಿ ಮತ್ತೊಬ್ಬನನ್ನು ವಶಪಡಿಸಿಕೊಳ್ಳುವುದು ಒಳಗೊಂಡಿತ್ತು(ಶ್ರೀ ಕೂಡಲೀ ಶೃಂಗೇರಿ ಜಗದ್ಗುರು, ಶ್ರೀ ಸಚ್ಚಿದಾನಂದ ಶಂಕರಭಾರತಿ ಸ್ವಾಮಿ; ಕೌಟಲೀಯ ಅರ್ಥಶಾಸ್ತ್ರ, ಪುಟ ೧೯೭).

ನೃತ್ಯಶಾಲೆ ಮತ್ತು ನಾಟಕಶಾಲೆ ನೃತ್ಯದ ತರಬೇತಿಯನ್ನು ನೀಡುವಂತಹ ಕೇಂದ್ರಗಳಾಗಿದ್ದವು. ಅಲ್ಲಿ ನೃತ್ಯ ಹೇಳಿಕೊಡುವ ನಟುವರಿದ್ದರೆಂದು ಅಭಿಪ್ರಾಯಪಡಲಾಗಿದೆ. ಆದರೆ ನೃತ್ಯ ಪ್ರವೀಣನಾದ, ಇಲ್ಲವೇ ನೃತ್ಯ ಮಾಡುತ್ತಿದ್ದ ನಟುವರ ಹೆಸರು ಶಾಸನಗಳಲ್ಲಿ ಎಲ್ಲೂ ಉಲ್ಲೇಖವಾಗಿಲ್ಲ. ಆದರೆ ಕೆಲವು ಶಾಸನಗಳಲ್ಲಿ ಶಿಲ್ಪಕಾರುಕರು ನೃತ್ಯ ಮಾಡುತ್ತಿದ್ದ ಅಲ್ಲದೇ ನೃತ್ಯಶ್ರೇಷ್ಠರೆಂದು ಕರೆಸಿಕೊಂಡವರ ಉಲ್ಲೇಖಗಳು ದೊರೆತಿವೆ. ಬನವಾಸಿ ಶಾಸನದಲ್ಲಿ ನೃತ್ಯ ಪ್ರವೀಣ ಅಚಲನ ಬಗ್ಗೆ ಹೀಗೆ ಮಾಹಿತಿ ಇದೆ. ಪ್ರಖ್ಯಾತ ಭರತಾಗಮ(ನಾಟ್ಯಶಾಸ್ತ್ರ) ಯುಕ್ತಿಯ ಅನೇಕ ರೀತಿಯ ಮಾತಿನೊಳಗೆ ಉಳಿಯಿತು (ಆದರೆ) ನಟಸೇವ್ಯನ ಮುಂದೆ 'ಅಗ್ರತಲಸಂಚರ ಎಂದರೆ ಇದು ಎಂಬುದಾಗಿ ಶಾಸ್ತ್ರಸಮ್ಮತವಾದ ರೀತಿಯಲ್ಲಿ ಹೇಳಬೇಕು, ಯಥಾಕ್ರಮದಿಂದ ಹೀಗಿತ್ತೆಂದು ತಿಳಿಸಬೇಕು. ಹೀಗೆ ತಿಳಿಸಿದವನೇ(ಭೂಮಿಯಲ್ಲಿ) ನರ್ತಕ, ನಟರಲ್ಲಿ ಶ್ರೇಷ್ಠನಾದ ನಟನು ಎಂದು ಉಲ್ಲೇಖಿಸಿದೆ. ಶಾಸನ ಮುಂದುವರಿದು ದೇವಯ್ಯ ಎಂಬುವವನ ಮಗನಾದ

ಅಚಲನನ್ನು ಹೆಸರಿಸಿದೆ(ಕ.ವಿ.ಶಾ. ಸಂಪುಟ–೯, ಬಾದಾಮಿ, ೭೬). ಭರತನ ನಾಟ್ಯಶಾಸ್ತ್ರದಲ್ಲಿ ಉಲ್ಲೇಖಿಸಿದಂತೆ, ನೃತ್ಯದಲ್ಲಿ ಅಗ್ರನಾದ ನೃತ್ಯ ಎಂದರೆ ಹೀಗಿರುತ್ತದೆಂದು ಭೂಮಿಯಲ್ಲಿ ತಿಳಿಸಿದವನು ನರ್ತಕ ನಟರಲ್ಲೇ ಶ್ರೇಷ್ಠನಾದ ನಟನು ಎಂದು ಅಚಲನನ್ನು ಕುರಿತು ಉಲ್ಲೇಖಿಸಲಾಗಿದೆ. ಬಳ್ಳಿಗಾವಿ ಶಾಸನದಲ್ಲಿ ರಾಜಗುರು ವಾಮಶಕ್ತಿ ಶಿಷ್ಯ ಜ್ಞಾನದೇವರು ಪಾತ್ರದ ವಲ್ಲವ್ವೆಗೆ ದೇವರ ವೃತ್ತಿಯಾಗಿ ಬಿಟ್ಟ ಹಕ್ಕಲು ಗದ್ದೆ ಮ ೨, ಗದ್ಯಾಣ ೧೦, (E.C. VIII (ರೈ), ಶಿಕಾರಿಪುರ, ೧೦೧). ಕ್ರಿ.ಶ. ೧೩೭೨ರ ಹೆಗ್ಗಡೆದೇವನಕೋಟೆ ಶಾಸನದಲ್ಲಿ ವಿಜಯಪುರದ ರಾಮನಾಥದೇವರ ಪಾತ್ರಭೋಗಕ್ಕೆ ನಾಗವ್ವೆ ಮತ್ತು ಮಗ ಹೀರ್ಯ ರಾಮಣ್ಣಂಗಳು ಕೇತವ್ವೆಯನು ಯಾಗಿ ಪಾತ್ರಕ್ಕೆ ಧಾರಪೂರ್ವಕವಾಗಿ ಕೇತವ್ವೆ ಜೀವಿತಕ್ಕೆ ಬಡಗಿಗಳು ೧, ಅಕ್ಕಸಾಲಿಗರು ೧, ಕಂಚುಗಾರರು ೧ ಕೊಡಬೇಕು(E.C. III, ಗುಂಡ್ಲುಪೇಟೆ, ೧೭). ಬನವಾಸಿ ಶಾಸನದಲ್ಲಿ ಉಲ್ಲೇಖಿಸಲಾದ ಅಚಲ ಮತ್ತು ಚಾವಣರು ನೃತ್ಯಮೂಲ ಶಿಲ್ಪಕಾರುಕ ಪರಂಪರೆಯವರು ಇವರು ಶಿಲ್ಪಕಾರರಲ್ಲದೆ ನೃತ್ಯಗಾರರೂ ಆಗಿದ್ದರು. ಅಚಲನನ್ನು ಕುರಿತು ಹೇಳುವಾಗ ನೃತ್ಯ ಎಂದರೆ ಶಾಸ್ತ್ರಸಮ್ಮತವಾಗಿ ಹೀಗೆ ಇತ್ತು ಎಂದು ಭೂಮಿಯಲ್ಲಿ ತಿಳಿಸಿದವನು ಎಂದು ಹೇಳಲಾಗುತ್ತದೆ. ಅಲ್ಲದೆ ನರ್ತಕ, ನಟರಲ್ಲಿ ಶ್ರೇಷ್ಠನಾದ ನಟನು ಎಂದು ಉಲ್ಲೇಖಿಸಲಾಗಿದೆ. ಅಂದರೆ ಈ ಶಿಲ್ಪಕಾರರು ನೃತ್ಯದ ಮೂಲ ಸೃಷ್ಟಿಕರ್ತರು. ಇವರು ಗೈದ ನೃತ್ಯದಿಂದ ಇವರಿಗೆ ನರ್ತಕರು, ನಟರು ಎಂದು ಅನ್ವರ್ಥನಾಮದಲ್ಲಿ ಬಳಕೆಯಾಗಿರುವ ಸಾಧ್ಯತೆ ಇದೆ. ಅಚಲನು ಶಾಸ್ತ್ರಸಮ್ಮತವಾದ ನರ್ತಕ ಪರಂಪರೆಯಲ್ಲಿ ಬಂದ ಶ್ರೇಷ್ಠನಾದ ನಟ ಎಂಬ ವಾಕ್ಯದಲ್ಲಿ ಶಿಲ್ಪಕಾರರೇ ಮುಂದೆ ನಟರು ನರ್ತಕರೆಂದು ನೃತ್ಯಸೂಚಕವಾಗಿ ಗುರುತಿಸಿಕೊಂಡಿರಲು ಸಾಧ್ಯತೆ ಇದೆ. ಸೂಳೆಯರಿಗೆ, ಪಾತರದವರಿಗೆ ನೃತ್ಯ ಕಲಿಸಿಕೊಡುವವರು ಓಜ ಸಮುದಾಯದ ಶ್ರೇಷ್ಠ ನೃತ್ಯಕಾರರೇ ಆಗಿದ್ದಿರಬಹುದು. ಇವರು ನೃತ್ಯ ತರಬೇತಿಯನ್ನು ನೀಡುವವರೇ ಹೊರತು ರಂಗಭೋಗದಲ್ಲಿ ನೃತ್ಯ ಮಾಡಿದ ಉಲ್ಲೇಖಗಳು ಕಡಿಮೆ.

ಗೀತವಾದಿತ್ರ ನರ್ತನಗಳನ್ನು ಬೋಧಿಸುವ ಶಾಸ್ತ್ರಗಳಲ್ಲಿ ಕಾರೂ ಶಿಲ್ಪಿಗಳ ಪ್ರಸ್ತಾಪವು ಮೊದಲ ಬಾರಿಗೆ ಭರತಮುನಿಯ ನಾಟ್ಯಶಾಸ್ತ್ರದಲ್ಲಿ ಕಂಡು ಬರುತ್ತದೆ.

ನಿಯೋಗಾಧಿಕೃತಾಶ್ಚೈವ ಪುರುಷಾ ಯೋಷಿತಸ್ತಥಾ ।
ಕಾರುಕಾಃ ಶಿಲ್ಪಿನಶ್ಚೈವ ಸಮಭಾಷ್ಯಾಸ್ತೇ ತಥೈವ ಹಿ॥
ಪ್ರಾತಿವೇಶ್ಯಾ ಸಖೀ ದಾಸೀ ಕುಮಾರೀ ಕಾರುಶಿಲ್ಪಿನಿ ।
ಕಾರುಕಕುಶೀಲವಾದ್ಯಾ ವಿಜ್ಞೇಯಂ ನಾಮತಶ್ಚೈವ

ಎಂಬ ಉಕ್ತಿಗಳಿವೆ(ಸತ್ಯನಾರಾಯಣ ರಾ.; ಭಾರತೀಯ ಸಂಗೀತದಲ್ಲಿ ಪರಿಭಾಷಾ ಪ್ರಯೋಗ, ಪುಟ ೧೦). ಕಾರುಕ ಶಿಲ್ಪಿಗಳಲ್ಲಿ ಮೋಚಿ, ಕಮ್ಮಾರ, ಬಡಗಿ, ಎಂಬ ಅರ್ಥಗಳನ್ನು ಹೇಳುತ್ತಾನೆ. ಇಲ್ಲಿ ಗೀತಾದಿ ನರ್ತನಗಳನ್ನು ವೇಶ್ಯೆ, ಸಖಿ, ದಾಸಿ, ಕುಮಾರಿಯರಿಗೆ

ಹೇಳಿಕೊಡುವವರು ಕಾರುಕಶಿಲ್ಪಿಗಳೇ ಎಂಬುದನ್ನು ಸ್ಪಷ್ಟಪಡಿಸಿದ್ದಾನೆ. ಅಭಿನವಗುಪ್ತನು ಇದನ್ನು 'ಕಾರುಕಃ ಸ್ತೂಪಾಕಾರಾದಯಃ ಶಿಲ್ಪಿನಶ್ಚಿತ್ರ ಕಾರಾದಯಃ ಎಂದು ಅರ್ಥವನ್ನು ನಿರ್ಣಯಿಸುತ್ತಾನೆ. ಕಾಳಿದಾಸನೂ ಸಹ ಶಿಲ್ಪಕಾರ್ಯವೆಂದರೆ ಗೀತ ವಾದ್ಯ ನರ್ತನಗಳೆಂದೇ ಅರ್ಥೈಸಿದ್ದಾನೆ (ಸತ್ಯನಾರಾಯಣ ರಾ.; ಭಾರತೀಯ ಸಂಗೀತದಲ್ಲಿ ಪರಿಭಾಷಾ ಪ್ರಯೋಗ, ಪುಟ ೧೦).

ಪಾತರದವರಿಗೆ ನೃತ್ಯ ತರಬೇತಿಯನ್ನು ಕೊಟ್ಟು ಅವರನ್ನು ದೇವಾಲಯಗಳಿಗೆ ಒಪ್ಪಿಸಲಾಗುತ್ತಿತ್ತು. ನೃತ್ಯ ತರಬೇತಿಯನ್ನು ಹೊಂದಿದ ಪಾತರದವರಿಗೆ ಆರಂಭದಲ್ಲಿ ಅಂದರೆ ದೇವಾಲಯದ ರಂಗಭೋಗದಲ್ಲಿ ನೃತ್ಯಪ್ರದರ್ಶನಕ್ಕೆ ಅವಕಾಶ ದೊರೆಯುವುದಕ್ಕಿಂತ ಮೊದಲು ಅವರ ಜೀವನ ನಿರ್ವಹಣೆ ಕಷ್ಟವಾಗುತ್ತಿತ್ತು. ಅಂಥ ಸಂದರ್ಭದಲ್ಲಿ ನೃತ್ಯ ಕಲಿಸಿದ ಈ ಶಿಲ್ಪಕಾರುಕರು ಅಥವಾ ಶಿಲ್ಪಕಾರುಕ ಸಮುದಾಯದವರೇ ಅವರ ಜೀವಿತಕ್ಕೆ ಅಂದರೆ ಜೀವನ ನಿರ್ವಹಣೆಗೆ ದತ್ತಿ ಕೊಡುತ್ತಿದ್ದಿರಬೇಕು. ಬಳ್ಳಿಗಾವೆ ಶಾಸನದಲ್ಲಿ ವಾಮಶಕ್ತಿ ಶಿಷ್ಯ ಜ್ಞಾನದೇವರು ವಲ್ಲವ್ವೆ ಅಕ್ಕಲು ಗದ್ದೆ ಮ ೨, ಗದ್ಯಾಣ ೧೦ ಕೊಡಲಾಗಿದೆ. ಹಕ್ಕಲು ಎಂದರೆ ಆ ಭೂಮಿಯಲ್ಲಿ ಬೆಳೆದ ಬೆಳೆಯಿಂದ ಜೀವನ ನಿರ್ವಹಣೆ ಮಾಡಿಕೊಳ್ಳುವುದು ಎಂದು ಅರ್ಥ(E.C. VIII, ಶಿಕಾರಿಪುರ, ೧೦೧). ದೇವಾಲಯಗಳಲ್ಲಿ ರಂಗಭೋಗಕ್ಕೆ ಆಯ್ಕೆಯಾಗುವುದಕ್ಕಿಂತ ಮೊದಲು ನೃತ್ಯ ಕಲಿಸಿದ ಗುರುಗಳಿಂದ ಈ ರೀತಿ ಜೀವನ ನಿರ್ವಹಣೆಗೆ ದಾನ ಪಡೆದು ನಂತರ ರಂಗಭೋಗದಲ್ಲಿ ಪ್ರವೇಶ ಪಡೆದ ನಂತರ ದೇವಾಲಯಗಳಿಂದ ಮತ್ತು ಮೇಲ್ವರ್ಗದವರಿಂದ ದಾನದತ್ತಿಗಳು ಪಾತರದವರಿಗೆ ಹೇರಳವಾಗಿ ಬಂದಂತೆ ತೋರುತ್ತದೆ. ಹೆಗ್ಗಡದೇವನಕೋಟೆ ಶಾಸನದಲ್ಲಿ ಶಿಲ್ಪಕಾರುಕ ಸಮುದಾಯದವರೆಲ್ಲ ಸೇರಿ ಕೇತವ್ವೆ ಜೀವಿತಕ್ಕೆ ದಾನ ಬಿಟ್ಟಿದ್ದಾರೆ. ಈ ಶಾಸನಗಳೇ ಸ್ಪಷ್ಟವಾಗಿ 'ಜೀವಿತಕ್ಕೆ' ಎಂಬ ಪದವನ್ನು ಬಳಕೆ ಮಾಡಿರುವುದರಿಂದ ಆರಂಭದಲ್ಲಿ ಅವರ ಜೀವನ ನಿರ್ವಹಣೆಗೆ ಎಂಬುದು ಸ್ಪಷ್ಟವಾಗುತ್ತದೆ.

ಪಾತರ ಪದದ ಅರ್ಥ ಸೂಚಿಸುವಂತೆ ಅವರು ಒಂದು ಜನಾಂಗಕ್ಕೆ ಸೇರಿದವರು. ಪಾತರ ಶಬ್ದದ ಬಳಕೆ ಕಾಲಕ್ಕೆ ತಕ್ಕಂತೆ ಅರ್ಥ ಸಂವಾದಿಯಾಗಿ ಬೇರೆ ಪದಗಳ ಬಳಕೆ ಮಾಡಿದ್ದಾರಯೆ ಹೊರತು, ಅರ್ಥ ಬದಲಾಗಿಲ್ಲ, ಕೌಟಿಲ್ಯ ತನ್ನ ಅರ್ಥ ಶಾಸ್ತ್ರದಿಂದ ಅವರು ಒಂದು ಕುಲಕ್ಕೆ ಸೇರಿದವರು ಎಂಬುದು ಸ್ಪಷ್ಟವಾಗುತ್ತದೆ, 'ಗಣಿಕಾಧ್ಯಕ್ಷನು ಗಣಿಕೆ ಕುಲದಲ್ಲಿಯೋ, ಬೇರೆಯ ಕುಲದಲ್ಲಿಯೋ ಹುಟ್ಟಿದ ರೂಪ ಯೌವನ ಸಂಪನ್ನಳೂ, ಕಲಾಪ್ರೌಢಳೂ, ಎನಿಸಿದ ಸ್ತ್ರೀಯನ್ನು ಒಂದು ಸಾವಿರ ಪಣಗಳ ವರ್ಷಾಸನದ ಮೇಲೆ ಗಣಿಕಾ ಸ್ಥಾನದಲ್ಲಿ ನಿಯಮಿಸಿಕೊಳ್ಳಬೇಕು'.(ಶ್ರೀ ಕೂಡಲೀ ಶೃಂಗೇರಿ ಜಗದ್ಗುರು, ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು; ಕೌಟಲೀಯ ಅರ್ಥಶಾಸ್ತ್ರ, ಪುಟ ೧೯೪) "ಗಣಿಕ" ಕುಲ ಎಂದು ಪ್ರಯೋಗಿಸಿದ್ದಾನೆ. ಗಣಿಕ ಕುಲದ ಸ್ತ್ರೀಯನ್ನು ಗಣಿಕಾ ಸ್ಥಾನಕ್ಕೆ ಸೇರಿಸಿಕೊಳ್ಳಬೇಕು. ಒಂದು

ವೇಳೆ ಕಲಾಪ್ರೌಢಿಮೆ, ರೂಪ, ಯೌವನ ಇರುವ ಬೇರೆ ಕುಲದ ಸ್ತ್ರೀಯಿದ್ದರು, ನೇಮಿಸಿಕೊಳ್ಳಬಹುದು, ನೃತ್ಯ ಮಾಡುವ ವೃತ್ತಿ ಮೂಲದ ಗಣಿಕ ಎನ್ನುವ ಒಂದು ಕುಲವಿದ್ದು, ಬೇರೆ ಸ್ತ್ರೀಯರು ಆ ವೃತ್ತಿಗೆ ಸೇರಿದ ಮೇಲೆ ಗಣಿಕೆಯರಾದರು. ಗಣಿಕೆಯರನ್ನು ಕಾಲಾನಂತರದಲ್ಲಿ ಸೂಳೆಯರೆಂದು ಉಲ್ಲೇಖಿಸಲಾಗಿದೆ. ದೇವಾಲಯಗಳಲ್ಲಿ ಸೂಳೆಯರೆ ನೃತ್ಯ ಮತ್ತು ಸಂಗೀತವನ್ನು ನೆಡೆಸಿಕೊಡುತ್ತಿದ್ದರು. ಎಂಟನೆ ಶತಮಾನದಷ್ಟೊತ್ತಿಗೆ ದೇವಾಲಯಗಳಲ್ಲಿ ನೃತ್ಯವನ್ನು ಪಾತ್ರದವರು ರಂಗಭೋಗಗಳಲ್ಲಿ ಪ್ರದರ್ಶಿಸಿದರು.

**ರಂಗಭೋಗ**

ಪಾತರದವರ ಬಗ್ಗೆ ಅಧ್ಯಯನ ಮಾಡುವ ಮೊದಲು ದೇವಾಯಗಳಲ್ಲಿ ರಂಗಭೋಗದ ಬಗ್ಗೆ ಅಧ್ಯಯನ ಮಾಡಬೇಕು. ಪ್ರಾಚೀನ ಕಾಲದಲ್ಲಿ ದೇವಾಲಯಗಳು ದೇವರ ಆರಾಧನೆಯ ಕೇಂದ್ರ ಮಾತ್ರವಾಗಿರದೆ, ವಿದ್ಯಾಕೇಂದ್ರಗಳೂ ಆಗಿದ್ದವು. ಶಿಕ್ಷಣ ಮತ್ತು ರಂಗಭೋಗಕ್ಕೆ ಯಾವುದೇ ಸಂಬಂಧವಿರುವುದಿಲ್ಲ. ಅಂಗರಂಗ ಭೋಗಗಳು ದೇವಾಲಯದಲ್ಲಿ ವಿಶೇಷ ಪೋಷಣೆ ದೊರೆತ ವಿಭಾಗಗಳು. ಅಂಗಭೋಗ ದೇವರ ಗರ್ಭಗೃಹಕ್ಕೆ ಸಂಬಂಧಿಸಿರುತ್ತದೆ. ದೇವರ ನಿತ್ಯಪೂಜೆಗೆ ಬೇಕಾಗುವ ಪದಾರ್ಥಗಳಿಗೆ ಸಂಬಂಧಿಸಿರುತ್ತದೆ. ರಂಗಭೋಗ ಗರ್ಭಗೃಹದ ಮುಂದಿನ ಮಂಟಪವಾಗಿದೆ. ರಂಗಭೋಗದಲ್ಲಿ ನೃತ್ಯಕ್ಕೆ ಬೇಕಾದ ವೇದಿಕೆ ಮತ್ತು ವಾಸ್ತು ಸವಲತ್ತುಗಳನ್ನು ಒದಗಿಸಲಾಗಿತ್ತು. 'ನವರಂಗದ ಮಧ್ಯದ ನೃತ್ಯ, ಸಂಗೀತ ವೇದಿಕೆ, ಅದನ್ನು ಸುತ್ತುವರಿದ ಸುಖಾಸನದ ಜಗಲಿ, ಹಿತಮಿತ ಗಾಳಿ ಮತ್ತು ಬೆಳಕು ಒಳಬಿಡುವ ಜಾಲಂಧ್ರಗಳು, ಪಾತ್ರಧಾರಿಗಳು, ಪ್ರೇಕ್ಷಕರು ಪವಡಿಸಲು ಹಾಸುಗಲ್ಲು' (ಶೆಟ್ಟರ್ ಷ.; 'ಸೋಮನಾಥಪುರ', ಪುಟ ೧೪೭, ೧೪೮).

ರಂಗಭೋಗ ನೃತ್ಯ ಮಾಡುವ ಪಾತರದವರು, ಹಾಡುವ ಕಲ್ಲವ್ವೆ, ಕೋಲುಕಾರ (E.C. IX, ಬೇಲೂರು, ೨೯೭). ಬೇಲೂರು ಶಾಸನದಲ್ಲಿ ಹಾಡುವವರು ಸ್ತ್ರೀಯರಲ್ಲದೆ ಪುರುಷರು ಇದ್ದ ಕುರಿತು ಉಲ್ಲೇಖಿಸುತ್ತದೆ. ಬಸವಣ್ಣ ಬಾಛವ್ವೆಯ ಮಗ ಹಾಡುವ ಮಛೆಯನಾಕ ಎಂದಿದೆ(E.C. IX, ಬೇಲೂರು, ೧೫೫). ಮೋಖರಿಗಳು ಇದ್ದರೂ, ಮೊಖರಿ ಸಂಗೀತಗಾರರು, ಮೊಖರಿ(ಸಂ.'ಮುಖರ'). 'ಮೊಳಗಿಸುವವನು' ಎಂದು ಉದ್ದನೆಯ ಡೊಂಕುವಾದ್ಯ ಕಹಳೆ ಮೊಳಗಿಸುವವನೆಂದು, ಕರ್ನಾಟಕದಲ್ಲಿ 'ಹಾಡುವ ಮೊಖರಿಗಳ' ಪ್ರಸ್ತಾಪ ಬರುವುದು ನಾಗಾವಾಸಿಗಳು ನೃತ್ಯಗೈಯುವಾಗ ಮೊಖರಿಗಳು ವಾದ್ಯ ನುಡಿಸುತ್ತಿದ್ದರು(ಶೆಟ್ಟರ್ ಷ.; ಸೋಮನಾಥಪುರ, ಪುಟ ೧೪೮). ರಂಗವೇದಿಕೆಯಲ್ಲಿ ಪಾತ್ರದವರ ನೃತ್ಯಕ್ಕೆ ಹಾಡುವವರು, ವಿವಿಧ ವಾದ್ಯಗಳನ್ನು ನುಡಿಸುವ ವಾದ್ಯಕಾರರು ಇರುತ್ತಿದ್ದರು.

ರಂಗವೇದಿಕೆಯ ಸುತ್ತಲಿನ ಜಗಲಿಯ ಮೇಲೆ ಕುಳಿತ ಪ್ರೇಕ್ಷಕರ ಮುಂದೆ ಸಂಗೀತಕ್ಕೆ ತಕ್ಕ ಹೆಜ್ಜೆ ಹಾಕುವವಳು ಪಾತ್ರ ಅಥವಾ ಪಾತರದವರು. ಕಲಾರಸಿಕ ಅಥವಾ

ಕಲಾಪೋಷಕರೆನಿಸಿಕೊಂಡವರು ಪಾತರದವರ ನೃತ್ಯಗೈಯುವಾಗಿನ ಸೌಂದರ್ಯವನ್ನು ದೇವರ ಪ್ರೀತ್ಯರ್ಥವೆಂದು ದೇವರ ಎದುರಿನಲ್ಲಿ ತಾವು ಸವಿಯುವ ಪ್ರಸಂಗಕ್ಕೆ ಭೋಗ ಪದ ಬಳಕೆಯಾಗಿದೆ ಎನ್ನಬಹುದು. ಒಂದು ಪದಾರ್ಥವನ್ನು ಸೇವಿಸಿದಾಗ(ಭೋಗಿಸಿದಾಗ) ಸಿಗುವ ತೃಪ್ತಿ ಸುಖಾನುಭವದಂತೆ, ಸೌಂದರ್ಯವನ್ನು ವೀಕ್ಷಿಸಿದಾಗ ಮನಸ್ಸಿಗೆ ಸಿಗುವುದು ಒಂದು ರೀತಿಯ ಆನಂದ ಕೂಡ, ಭೋಗ ಅರ್ಥಸೂಚಕವೇ ಆಗಿದೆ.

ಪ್ರಾಚೀನ ಕಾಲದಿಂದಲೂ ದೇವಾಲಯಗಳು ಅಂಗರಂಗಭೋಗ ಹೊಂದಿದ್ದು ಉಳ್ಳವರು ದೇವಾಲಯಕ್ಕೆ ನೀಡುವ ದಾನಗಳಲ್ಲಿ ಅಂಗರಂಗಭೋಗಕ್ಕೆ ಆದ್ಯತೆ ಹೆಚ್ಚು. ಈ ಕುರಿತು ಮಾಹಿತಿ ನೀಡುವ ಶಾಸನಗಳು ಹಲವಾರು. ಕ್ರಿ.ಶ. ೮೨೦ರಲ್ಲಿ ಗುಜರಾತ್ ಕಪಿಲಾ ನದಿ ದಡದ ಮೇಲಿರುವ ಕಾವಿ ಕೋಟಿಪುರದ ಭಗವತಿ ಮತ್ತು ಜಯಾದಿತ್ಯ ದೇವಾಲಯದ ಅಂಗರಂಗಭೋಗಕ್ಕೆ ಘೂರ್ಣವಿ ಗ್ರಾಮವನ್ನು ದಾನ ನೀಡಲಾಗಿದೆ(EI. V, p113&114) ಕ್ರಿ. ಶ. ೮೦೨ರ ಮಣ್ಣೆ ಶಾಸನದಲ್ಲಿ ಜಿನಭವನದ ಅಂಗರಂಗ ಭೋಗಕ್ಕೆ ಪೆರ್ಮಡಿ ಗ್ರಾಮವನ್ನು ಚತುಸ್ಸಮಯಗಳಿಗೊದಗುವಂತೆ ದಾನ ನೀಡಲಾಗಿದೆ(EI. XXIII, p293). ದಾನ ನೀಡುವಾಗ ಅಂಗ ಮತ್ತು ರಂಗಭೋಗ ಎರಡಕ್ಕೂ ದಾನ ನೀಡುತ್ತಿದ್ದರು. ತೆಂಕಣ ದಂಡನಾಯಕ ವೀರಕೇಶವ ದೇವರ ಅಂಗರಂಗಭೋಗಕ್ಕೆ ಭೂಮಿ ಬಿಡುತ್ತಾನೆ(ಕ. ವಿ. ಶಾ. ಸಂಪುಟ-೧, ಹರಪನಹಳ್ಳಿ ೧೦೭). ರಂಗಭೋಗಕ್ಕೆ ಕೊಟ್ಟ ದಾನವೂ ದೇವಾಲಯಗಳಿಗೆ ಸೇರುತ್ತಿದ್ದರಿಂದ ಆರ್ಥಿಕವಾಗಿ ಧರ್ಮದ ಹೆಸರಿನಲ್ಲಿ ದೇವಾಲಯಗಳು ಬಲಿಷ್ಟವಾಗುತ್ತಿದ್ದವು. ದೇವಾಲಯಕ್ಕೆ ಬಂದ ದಾನದಿಂದ ಪಾತರದವರಿಗೆ ಬೇಡಿಕೆ ಹೆಚ್ಚಾಗುತ್ತಿತ್ತು. ಕಳಚೂರಿ ಸೋವಿದೇವ ಕುಕನೂರಿಗೆ ಬಂದಾಗ ಮಲ್ಲಿಕಾರ್ಜುನ ದೇವರಿಗೆ ಅಂಗರಂಗಭೋಗಕ್ಕೆ ವ್ಯಯ ಮಾಡಬೇಕೆಂದು ದಾನ ಮಾಡಿದ್ದಾನೆ(ಕ.ವಿ.ಶಾ. ಸಂಪುಟ-೨, ಯಲಬುರ್ಗಾ ೪೧). ರಂಗಭೋಗ ದೇವಾಲಯಗಳಲ್ಲಿ ಎಷ್ಟು ಮುಖ್ಯವಾಗಿತ್ತೆಂದರೆ ಎಲ್ಲ ವರ್ಗದವರು ದಾನ ನೀಡಿದ್ದಾರೆ. ಕೆಲವೊಮ್ಮೆ ಊರಿನ ಎಲ್ಲ ಧರ್ಮದವರು ದಾನ ಬಿಡುತ್ತಿದ್ದರು. ಮುದಿಸೆಟ್ಟಿ ಮತ್ತು ಇತರ ಧರ್ಮದವರು ಈಶ್ವರ ಗುಡಿಯ ಅಂಗರಂಗಭೋಗಕ್ಕೆ ತೆರಿಗೆ ದಾನ ಬಿಟ್ಟದ್ದಾರೆ(ಕ.ವಿ.ಶಾ. ಸಂಪುಟ-೭, ಲಿಂಗಸೂರು ೩).ರಂಗಭೋಗಕ್ಕೆ ಪೋಷಣೆ ನೀಡುವಲ್ಲಿ ವೈಯಕ್ತಿಕವಾಗಿ ಅಲ್ಲದೆ ಊರಿನ ಎಲ್ಲ ಧರ್ಮೀಯರಿಗೂ ಮತ್ತು ಪ್ರಮುಖರಿಗೂ ಆಸಕ್ತಿ ಇತ್ತೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಆದರೆ ಇಲ್ಲಿ ಅವರು ಪ್ರೇಕ್ಷಕರು ಮಾತ್ರ. ಪಾತರದವರಿಗೂ ಸಾಮಾನ್ಯರಿಗೂ ಯಾವುದೇ ಹತ್ತಿರದ ಸಂಬಂಧವಿರುವುದಿಲ್ಲ. ಪ್ರೇಕ್ಷಕರಾಗಿ ಇರಬಹುಷ್ಟೇ. ಅಂದರೆ ಪಾತರದವರು ಸಾಮಾನ್ಯ ವರ್ಗದವರಿಂದ ದೂರ ಇದ್ದರು. ಅಂದರೆ ಕಲಾವಿದೆ ಚೌಕಟ್ಟಿನಲ್ಲಿ ಗೌರವಿಸಲ್ಪಡುತ್ತಿದ್ದಳು.

ಹೊಯ್ಸಳ ದೊರೆ ಮೂರನೇ ನರಸಿಂಹನು ದೋರಸಮುದ್ರದ ತ್ರಿಕೂಟ ರತ್ನತ್ರಯದ ಶ್ರೀಶಾನ್ತಿದೇವರ ಅಂಗರಂಗಭೋಗಕ್ಕೆ ದಾನ ನೀಡಿದ್ದಾರೆ(E.C.VII, ನಾಗಮಂಗಲ, ೬೦). ಲಾಲನಕೆರೆ ಶಾಸನದಲ್ಲಿ ಎರಡನೇ ಬಲ್ಲಾಳನ ಆಳ್ವಿಕೆ ಕಾಲದಲ್ಲಿ ಮಧುಕೇಶ್ವರ ದೇವರ ಅಂಗರಂಗಭೋಗಕ್ಕೆ ಗದ್ದೆ, ತೋಟ ದತ್ತಿ ಬಿಡಲಾಗಿದೆ(E.C. VII, ನಾಗಮಂಗಲ, ೬೩). ಗೋಪಾಳ ದೇವರ ರಂಗಭೋಗಕ್ಕೆ ದತ್ತಿ ಬಿಡಲಾಗಿದೆ(E.C. VII, ನಾಗಮಂಗಲ, ೮೧). ವೀರನರಸಿಂಹ ಕಾಲದ ಶ್ರೀಪ್ರಸನ್ನ ಮಾಧವ ದೇವರ ರಂಗಭೋಗಕ್ಕೆ ದತ್ತಿ ಬಿಡಲಾಗಿದೆ. (E.C. VII ನಾಗಮಂಗಲ, ೭೩). ಬಿದಿರೆಯ ಕಲ್ಲಿನಾಥದೇವರ ರಂಗಭೋಗಕ್ಕೆ ಗದ್ದೆಯನ್ನು ಧಾರೆಯೆರೆದುಕೊಟ್ಟರು(E.C. XXIV, ಗುಬ್ಬಿ, ೬೦). ದೇವಾಲಯಗಳಿಗೆ ಭೂಮಿರೂಪದಲ್ಲಿ ಬರುವ ದಾನ ಕೂಡ ಒಂದು ಸಂಪತ್ತಾಗಿತ್ತು. ಭೂಮಿ ದಾನ ಮಾಡಿದ್ದರಿಂದ ದೇವಾಲಯದ ಒಡೆತನದಲ್ಲಿ ಆಸ್ತಿ ಹೇರಳವಾಗಿ ಸಂಗ್ರಹವಾಯಿತು. ಹೀಗೆ ದೇವಾಲಯದ ಒಂದು ಪ್ರಬಲ ಸಾಮಾಜಿಕ ಸಂಸ್ಥೆಯಾಗಿ ಮಾರ್ಪಾಡಾಗಲು ಇದು ಕಾರಣವಾಯಿತೆನ್ನಬಹುದು. ಬೂದಿಪಡಗ ಶಾಸನದಲ್ಲಿ ವಿಜಯನಗರ ಅರಸರ ಅಧಿಕಾರ ಅವಧಿಯಲ್ಲಿಯೂ ರಂಗಭೋಗಕ್ಕೆ ದಾನ ನೀಡಲಾಗಿದೆ. ಕ್ರಿ.ಶ. ೧೪೦೮ರಲ್ಲಿ ಮೊದಲನೇ ದೇವರಾಯರಾಯನ ಅಧಿಕಾರಾವಧಿಯಲ್ಲಿ ಗಾಜನೂರ ಮಲ್ಲಿಕಾರ್ಜುನ ದೇವರ ರಂಗಭೋಗಕ್ಕೆ ದಾನ ಕೊಡಲಾದ ಮಾಹಿತಿ ಇದೆ. (E.C. IV, ಚಾಮರಾಜನಗರ, ೨೧೩). ಭಂಡಿಗೆರೆ ಶಾಸನದಲ್ಲಿ ಕೃಷ್ಣದೇವರಾಯನ ಅಧಿಕಾರಾವಧಿಯಲ್ಲಿ ಶ್ರೀ ಅಣ್ಣಲೇಶ್ವರ ದೇವರಿಗೆ ರಂಗಭೋಗಕ್ಕೆ ಹರದನಹಳ್ಳಿ ಪೂರ್ವ ಸೀಮೆ ಗದ್ದೆ ದಾನ ನೀಡಿದ್ದಾರೆ(E.C. IV, ಚಾಮರಾಜ ನಗರ, ೨೩೩).

ದೇವಾಲಯಗಳಲ್ಲಿ ರಂಗಭೋಗಕ್ಕೆ ನೀಡಿದ ದಾನ ದತ್ತಿ ಕಲಾಪೋಷಣೆಗೆ ಎಂದು ಹೇಳಬಹುದಾದರೂ ಅದು ಮೇಲ್ನೋಟಕ್ಕೆ ಮಾತ್ರ. ದೇವಾಲಯದ ರಂಗಭೋಗದಲ್ಲಿ ನೃತ್ಯಪ್ರದರ್ಶನಕ್ಕೆ ಪ್ರವೇಶ ಪಡೆಯುವುದಕ್ಕಿಂತ ಪೂರ್ವದಲ್ಲಿ ನೃತ್ಯ ಕಲಿಸಿದ ಶಿಲ್ಪಕಾರುಕ ಗುರುಗಳಿಂದ ತಮ್ಮ ಜೀವನ ನಿರ್ವಹಣೆಗೆ ದಾನ ಪಡೆದ ಪಾತರದವರು ದೇವಾಲಯದ ರಂಗಭೋಗ ಪ್ರವೇಶಿಸಿದ ನಂತರ ಅವರೇ ದೇವಾಲಯಗಳಿಗೆ ದಾನ ನೀಡುವಷ್ಟು ಆರ್ಥಿಕವಾಗಿ ಪ್ರಬಲರಾಗುತ್ತಿದ್ದರು. ಇದಕ್ಕೆ ದೇವಾಲಯದಿಂದ ಇವರಿಗೆ ದೊರೆಯುತ್ತಿದ್ದ ಆರ್ಥಿಕ ಸೌಲಭ್ಯ ಅಥವಾ ಭದ್ರತೆ ಇತ್ತು. ದೇವಾಲಯಗಳಿಗೆ ಭೇಟಿ ಕೊಡುತ್ತಿದ್ದ ಸಮಾಜದ ಮೇಲ್ವರ್ಗದವರು, ಮತ್ತು ಆರ್ಥಿಕವಾಗಿ ಬಲಿಷ್ಠರಾಗಿದ್ದವರು ಪಾತರದವರೊಂದಿಗೆ ಸಂಪರ್ಕ ಹೊಂದಿ ಪಾತರದವರಿಗೂ ದಾನ ನೀಡುತ್ತಿದ್ದರು. ಇದರಿಂದ ಅವರಿಗೆ ಆರ್ಥಿಕ ಭದ್ರತೆಯನ್ನು ಒದಗಿಸಿ ಅವರಿಂದ ನಿರಂತರ ನೃತ್ಯ ಸೇವೆಯನ್ನು ಪಡೆಯುವ ಉದ್ದೇಶವಾಗಿತ್ತು. ಅವರ ಸೇವೆ ದೇವಾಲಯಗಳಿಗಷ್ಟೇ ಅಲ್ಲ, ವೈಯಕ್ತಿಕವಾಗಿಯೂ ಪಡೆಯುತ್ತಿದ್ದ ಕಾರಣಕ್ಕೆ, ದೇವಾಲಯಗಳಲ್ಲಿ ರಂಗಭೋಗ ಅವ್ಯಾಹತವಾಗಿ ಮುಂದುವರಿದಿತ್ತು.

ಪಾತರದವರಿಗೆ ನೀಡಿದ ದಾನ

ಕ್ರಿ.ಶ. ೧೦೪೪ರ ನಂದವಾಡಗಿ ಶಾಸನದಲ್ಲಿ ರಂಗಭೋಗಕ್ಕೆ ದಾನ ನೀಡುವುದರ ಜೊತೆಗೆ ಪಾತರದವರಿಗೂ ದಾನ ನೀಡಲಾಗುತ್ತಿತ್ತು. ನಂದವಾಡಗಿ ಶಾಸನದಲ್ಲಿ ಇಬ್ಬರು ಪಾತರದವರಿಗೆ ೪೮ ಮತ್ತರು ದಾನ ಮಾಡಿದ ಮಾಹಿತಿ ಇದೆ(ಕ.ವಿ.ಶಾ. ಸಂಪುಟ–೯, ಹುನುಗುಂದ, ೧೨೨). ನಾಡಗಾವುಂಡ ಸಿನ್ದಗೆಯ ಮೂಲಸ್ಥಾನ ದೇವರ ಪಾತ್ರ ಪಾವುಳಕ್ಕೆ ಊರಲ್ಲೊಂದು ಗದ್ಯಾಣ ನೀಡಿದ್ದಾನೆ. ಪಾತ್ರದವರಿಗೆ ದಾನ ಕೊಡುವಾಗ ದೇವರ ಪಾತ್ರದವರಿಗೆ ಎಂದು ಉಲ್ಲೇಖವಾಗಿರುತ್ತದೆ. ದೇವಾಲಯಗಳಲ್ಲಿ ನಡೆಯುವ ನೃತ್ಯ ದೇವರ ಪ್ರೀತ್ಯರ್ಥವಾಗಿ ನಡೆಯುವಂತಹದೆಂದು ಪಾತರದವರನ್ನು ಉದ್ದೇಶಿಸಿ ಹೇಳಲಾಗುತ್ತದೆ. ದೇವಾಲಯದಿಂದ ಆಚೆ ಸಮಾಜದಲ್ಲಿ ಎಲ್ಲೂ ಇದು ಸ್ವಾರ್ಥದಿಂದ ಕೂಡಿದ್ದು ಎಂದೆನಿಸಲು ಸಾಧ್ಯವೇ ಇರಲಿಲ್ಲ. (ಕ.ವಿ.ಶಾ. ಸಂಪುಟ–೯, ಬಿಜಾಪುರ, ೩೨). ಕಾಗಿನೆಲೆ ಶಾಸನದಲ್ಲಿ ಪಾತ್ರ, ಪರಕಾರಿನವರ್ಗೆ ಬಿಟ್ಟ ದಾನ ಎಂದಿದೆ(SII. XVIII, 53). ಕ್ರಿ.ಶ. ೧೦೧೮ರ ಬಾಗುಳಿ ಶಾಸನದಲ್ಲಿ ಜಗದೇಕಮಲ್ಲನ ಆಳ್ವಿಕೆ ಕಾಲದಲ್ಲಿ ಪಾತ್ರಕ್ಕೆ ನೀಡಿದ ದಾನ ಎಂದಿದೆ(ಕ.ವಿ.ಶಾ. ಸಂಪುಟ–೧, ಹರಪನಹಳ್ಳಿ ೯೭). ಕ್ರಿ.ಶ. ೧೩೭೨ರ ಗುಂಡ್ಲುಪೇಟೆ ಶಾಸನದಲ್ಲಿ 'ರಾಮನಾಥ ದೇವರ ಪಾತ್ರ ಭೋಗಕ್ಕೆ ವರುಷಕ್ಕೆ ಮೂವತ್ತಕ್ಕೆ ಮಾಡಿದ ನಿರ್ಣಯ' ವರ್ಷಕ್ಕೆ ಇಂತಿಷ್ಟು ಎಂದು ಹಣ ನಿಗದಿ ಮಾಡಿ ನೇಮಕ ಮಾಡುತ್ತಿದ್ದರು(E.C. III, ಗುಂಡ್ಲುಪೇಟೆ, ೧೨). ಅವಧಿ ಮುಗಿದ ನಂತರ ದಾನ ಕೊಡುವುದು ಬಿಡುವುದು ನಿರ್ಧಾರ ವಾಗುತ್ತಿತ್ತು. ಪಾತರದವರಿಗೆ ನೀಡುತ್ತಿದ್ದ ದಾನ ಕೆಲವೊಮ್ಮೆ ಶಾಶ್ವತವಾಗಿರುತ್ತಿರಲಿಲ್ಲ ಮತ್ತು ಅವರಿಗೆ ಆರ್ಥಿಕ ಭದ್ರತೆ ಇರಲಿಲ್ಲ.

ಕ್ರಿ.ಶ. ೧೨ನೇ ಶತಮಾನದ ಪುರ ಶಾಸನ ಮಾಹಿತಿ ಹೀಗಿದೆ. ನಲವತ್ತೆಂಟು ಮನ್ನೆಯರು ಸಭೆ ಸೇರಿ ಶ್ರೀಗವರೇಶ್ವರ ದೇವರ ರಂಗಭೋಗಕ್ಕೆ, ಪಾತ್ರದವರಿಗೆ ದಾನ ನೀಡಬೇಕೆಂದು ತೀರ್ಮಾನಿಸಿ ದಾನ ನೀಡಿದ್ದಾರೆ(ಕ.ವಿ.ಶಾ. ಸಂಪುಟ–೨, ಕುಷ್ಟಗಿ ೧೩). ಅಂದರೆ ದೇವಾಲಯದಲ್ಲಿ ನೃತ್ಯವನ್ನು ಏರ್ಪಡಿಸಿ ರಂಜನೆ ಪಡೆಯುವುದು ಊರಿನ ಪ್ರಮುಖರಿಗೆ ಮೆಚ್ಚುಗೆಯ ವಿಷಯವಾಗಿರುವುದು. ಸಾಮೂಹಿಕ ಹಣ ಹೂಡಿಕೆ ಪ್ರತಿಯಾಗಿ ಅನುಭೋಗದಿಂದ ತುಷ್ಟಿಗುಣ ಹೊಂದುವುದು ಮಾಡುವಷ್ಟು ದಾನ ಸಾಮಾನ್ಯ ವಿಚಾರವಾಗಿತ್ತು. ಅದಕ್ಕಾಗಿ ಈ ರೀತಿ ಸಾಮೂಹಿಕವಾಗಿ ದಾನ ನೀಡುವುದಕ್ಕೆ ನಿರ್ಧಾರ ತೆಗೆದುಕೊಂಡಿದ್ದಾರೆ. ದೇವರ ಪ್ರೀತ್ಯರ್ಥವೆಂದು ಹೇಳಲಾಗುವ ನೃತ್ಯ ಸಮಾಜದ ಆರ್ಥಿಕ ಪ್ರಾಬಲ್ಯಕ್ಕನುಗುಣವಾಗಿ ನಡೆದಿದೆ. ಸಮಾಜದ ಪ್ರೀತ್ಯರ್ಥವಾಗಿ ನಡೆದಿರುವಂಥದ್ದು. ಕ್ರಿ.ಶ. ೧೩೭೨ರ ಗುಂಡ್ಲುಪೇಟೆ ಶಾಸನ ರಾಮನಾಥದೇವರ ಪಾತ್ರಭೋಗದ ಕೇತವ್ವೆ ಜೀವಿತಕ್ಕೆ ಬಡಗಿಗಳು–೧, ಅಕ್ಕಸಾಲಿಗರು–೧, ಕಂಚುಗಾರರು–೧ ಕೊಡಬೇಕೆಂದಿದೆ. (E.C. III, ಗುಂಡ್ಲುಪೇಟೆ, ೧೭). ಸೋಮಾಪುರದ ಶಾಸನದಲ್ಲಿ ಮಲ್ಲಿಕಾರ್ಜುನ ದೇವರ ಪಾತರದವರಿಗೆ ದತ್ತಿ ಬಿಟ್ಟ ವಿಷಯ(E.C. XII,

ಕೊಪ್ಪ ೯). ಶ್ರೀ ಚೆನ್ನಕೇಶವ ಮತ್ತು ಶ್ರೀ ಲಕ್ಷ್ಮಿ ನಾರಾಯಣ ದೇವರ ಪಾತರದವರಿಗೆ ಮಾಡಿದ ದಾನ(E.C. IX, ಬೇಲೂರು ೧೪).

ಪಾತರದವರಿಗೆ ಪೋಷಣೆ ನೀಡುವುದರಿಂದ ಅವರಿಗೆ ಆರ್ಥಿಕ ಭದ್ರತೆ ಒದಗಿಸುವುದರಿಂದ ಅವರ ವೃತ್ತಿಜೀವನಕ್ಕೆ ಧಕ್ಕೆ ಬರದಂತೆ ಕಾಪಾಡುವುದು ಸಮಾಜದ ಆರ್ಥಿಕ ಶಕ್ತಿಗಳ ಉದ್ದೇಶವಾಗಿತ್ತು. ಇದು ಒಂದು ರೀತಿ ಅವರನ್ನು ರಕ್ಷಣೆ ಮಾಡಿದಂತೆ. ಅವರನ್ನು ರಕ್ಷಣೆ ಮಾಡುವ ಉದ್ದೇಶವೆಂದರೆ ಅವರ ಮೇಲೆ ದಾನ ದತ್ತಿ ರೂಪದಲ್ಲಿ ಬಂಡವಾಳ ಹೂಡಲಾಗಿದೆ. ಅವರಿಂದ ನೃತ್ಯಾನುಭೋಗದ ಲಾಭವನ್ನು ಪಡೆದುಕೊಳ್ಳಬೇಕಾಗಿದೆ. ಆ ಕಾರಣಕ್ಕೆ ಅವರಿಗೆ ಭೂಮಿ ಮತ್ತು ಸಂಪತ್ತು ದಾನದ ರೂಪದಲ್ಲಿ ಬಂಡವಾಳ ಹೂಡಿಕೆ ಮಾಡಲಾಗುತ್ತಿತ್ತು. ಪಾತರದವರು ಅಥವಾ ನೃತ್ಯಗಾತಿಯರೆಂದರೆ ಸಮಾಜದ ಮೇಲ್ವರ್ಗದವರಿಗೆ ಅನುಭೋಗದ ಹೂಡಿಕೆ ಕ್ಷೇತ್ರವಾಗಿದ್ದರು. ಇಂದಿಗೂ ಕೂಡ ಸಂಗೀತ ಮತ್ತು ನೃತ್ಯಗಳು ಉಳ್ಳವರಿಗೆ ಹೂಡಿಕೆ ಕ್ಷೇತ್ರಗಳೇ ಆಗಿವೆ. ನೃತ್ಯಕ್ಷೇತ್ರ ಇಂದು ಪಾತರದ ಸಮುದಾಯದಿಂದ ಆಚೆ ಇದೆ. ಮೇಲ್ವರ್ಗದ ಮಡಿವಂತ ಸಂಪ್ರದಾಯಸ್ಥ ಕುಟುಂಬಗಳ ಆಸಕ್ತಿಯ ಕ್ಷೇತ್ರವಾಗಿ ವಿಶೇಷ ಮನ್ನಣೆ ಗಳಿಸಿದೆ. ಅಂದು ದೇವಾಲಯದ ರಂಗಭೋಗಕ್ಕೆ ಸೀಮಿತವಾಗಿದ್ದ ಕಾಲಕ್ಕೂ ಬುದ್ಧಿವಂತ ಮತ್ತು ಮೇಲ್ವರ್ಗದವರಿಗಾಗಿಯೇ ಬಳಕೆಯಾಗುತ್ತಿತ್ತು. ಪ್ರಸ್ತುತ ಕಾಲದಲ್ಲಿಯೂ ಹಾಗೇ ಇದೆ. ಆದರೆ ನೃತ್ಯ ಮಾಡುವವರು ಮಾತ್ರ ಬೇರೆಯವರಾಗಿದ್ದಾರೆ. ಎಲ್ಲ ಕಾಲಕ್ಕೂ ನೃತ್ಯ ಹೂಡಿಕೆ ಕ್ಷೇತ್ರವೇ ಆಗಿದೆ. ದೇಶ ವಿದೇಶಗಳಲ್ಲೂ ನೃತ್ಯ ಕಲಾವಿದರ ಮೇಲೆ ಬಂಡವಾಳ ಹೂಡಲಾಗುತ್ತಿದೆ. ಅವರ ಪ್ರದರ್ಶನಗಳನ್ನು ಏರ್ಪಡಿಸಿ ಅದರಿಂದ ಉಳ್ಳವರು ಲಾಭ ಗಳಿಸುತ್ತಲೇ ಇದ್ದಾರೆ. ಮಾಧ್ಯಮಗಳ ಮೂಲಕ ಸ್ಪರ್ಧೆಯ ಹೆಸರಿನಲ್ಲಿ ನೃತ್ಯವೆನ್ನುವುದು ನೃತ್ಯದಿಂದಲೇ ಬೇರ್ಪಟ್ಟು ಗಂಡು ಹೆಣ್ಣುಗಳ ವಿಚಿತ್ರ ಸಾಹಸಗಳನ್ನು ಕಿರುತೆರೆಯ ಮೇಲೆ ಪ್ರದರ್ಶಿಸಲಾಗುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿ. ಇಂಥ ಸ್ಪರ್ಧೆಗಳನ್ನು ಏರ್ಪಡಿಸುವಲ್ಲಿ ಮಾಧ್ಯಮಗಳು ಪೈಪೋಟಿಯನ್ನು ನಡೆಸುತ್ತವೆ. ಆದರೆ ಇವೆಲ್ಲವುಗಳ ಮೂಲ ಎಂದರೆ ನೃತ್ಯ ಮಾಡುವವರು. ಅದರಲ್ಲೂ ಸ್ತ್ರೀ ಎಂದು ಹೇಳಬಹುದು. ಸ್ತ್ರೀಯರನ್ನು ನೃತ್ಯದ ಹೆಸರಿನಲ್ಲಿ ದೇಹಕೇಂದ್ರಿತವಾಗಿಯೇ ನೋಡಲಾಗುತ್ತದೆ. ನರ್ತಕಿಯರ ಮೇಲೆ ಬಂಡವಾಳ ಹೂಡಿಕೆ ಮೊದಲ ಆದ್ಯತೆ. ಕಲಾವಿದರ ಮತ್ತು ಕಲೆಯ ಪೋಷಣೆ ಎನ್ನುವುದೆಲ್ಲ ನಂತರ ಆದ್ಯತೆ.

ಪಾತರದವರು ಆರ್ಥಿಕವಾಗಿ ಎಷ್ಟು ಪ್ರಬಲವಾಗಿದ್ದರೆಂದರೆ ಸಮಾಜದಲ್ಲಿ ಸಾರ್ವಜನಿಕ ಕಾರ್ಯಗಳಿಗೆ, ದೇವಾಲಯಗಳಿಗೆ ದಾನಗಳನ್ನು ನೀಡಿದ್ದಾರೆ. ಪಾತರದವರು ನೀಡಿದ ದಾನಗಳ ಮೂಲಕವೂ ಪಾತರದವರ ಬಗ್ಗೆ ತಿಳಿದುಕೊಳ್ಳಲು ಸಾಧ್ಯವಾಗಿದೆ. ನೃತ್ಯದಲ್ಲಿ ತರಬೇತಿಯನ್ನು ಹೊಂದಿ ದೇವಾಲಯದಲ್ಲಿ ಅವಕಾಶ ಪಡೆಯುವವರೆಗೂ ಅವರಿಗೆ ಆರ್ಥಿಕ

ತೊಂದರೆ ಒಂದು ಸಲ ಅವರ ಪ್ರತಿಭೆಗೆ ಎಲ್ಲರಿಂದ ಮನ್ನಣೆ ದೊರೆಯಿತೆಂದರೆ ಆರ್ಥಿಕವಾಗಿ ಅವರು ಪ್ರಬಲವಾಗುತ್ತಿದ್ದರು. ಅಂದರೆ ಈ ಪಾತರದ ವೃತ್ತಿಯಲ್ಲಿಯೂ ಪೈಪೋಟಿ ಇದ್ದಂತೆ ಕಾಣುತ್ತದೆ. ಉತ್ತಮ ಪ್ರದರ್ಶನ ನೀಡುವವರಿಗೆ ಆದ್ಯತೆ ಇರುವ ಸಾಧ್ಯತೆ ಇತ್ತು. ಈ ಮೇಲಿನ ಶಾಸನಗಳಲ್ಲಿ ಅವರಿಗೆ ನೀಡಿದ ದಾನದ ಉಲ್ಲೇಖವನ್ನು ನೋಡಿದರೆ ಆ ಒಂದು ಅವಧಿಯಲ್ಲಿ ದೇವಾಲಯಗಳಲ್ಲಿ ಅಂಗಭೋಗದ ಜೊತೆಗೆ ರಂಗಭೋಗ ಇರಲೇಬೇಕಿತ್ತೆನಿಸುತ್ತದೆ. ದೇವಾಲಯ ನಿರ್ಮಾಣ ಮಾಡುವಾಗ ರಂಗವೇದಿಕೆಯನ್ನು ಕಡ್ಡಾಯವಾಗಿ ನಿರ್ಮಾಣ ಮಾಡುತ್ತಿದ್ದರು.

**ಪಾತರದವರು ನೀಡಿದ ದಾನ**

ಪಾತರದವರು ನೃತ್ಯ ಮಾಡುವ ವರ್ಗಕ್ಕೆ ಸೇರಿವರಾದರೂ ಸಮಾಜದಲ್ಲಿ ಒಂದು ಗೌರವದ ಸ್ಥಾನ ಹೊಂದಿದ್ದರು. ಆರ್ಥಿಕವಾಗಿ ಇವರು ಸದೃಢವಾಗಿದ್ದುದರಿಂದ ಉನ್ನತ ವರ್ಗದವರೊಂದಿಗೆ ಗುರುತಿಸಲ್ಪಡುತ್ತಿದ್ದರು. ದೇವಾಲಯ ಮತ್ತು ರಂಗವೇದಿಕೆಯಿಂದಾಚೆ ಅವರು ಸಾಮಾನ್ಯರೊಂದಿಗೆ ಸಂಪರ್ಕವಿರಲಿಲ್ಲ. ಪ್ರಸ್ತುತ ಇವತ್ತಿನ ಸಮಾಜದಲ್ಲಿ ಹೆಸರು ಕೀರ್ತಿ ಗಳಿಸಿದ ನೃತ್ಯ ಕಲಾವಿದರಿಗೆ ದೊರೆಯುತ್ತಿದ್ದ ಮನ್ನಣೆ ಅವರಿಗೂ ದೊರೆತ ಸಾಧ್ಯತೆ ಇದೆ. ಆದರೆ ಅಂದಿನ ಬಲಿಷ್ಠ ರಾಜಕೀಯ ಮತ್ತು ಪುರೋಹಿತಶಾಹಿ ಸಮಾಜ ಕೌಟುಂಬಿಕ ಬದುಕನ್ನು ಕಟ್ಟಿಕೊಳ್ಳಲು ಅವಕಾಶ ಕೊಟ್ಟಿಲ್ಲ. ಇದೊಂದು ಕಾರಣದಿಂದ ಮುಂದೆ ಪಾತರದವರು ವಿಜಯನಗರ ಸಾಮ್ರಾಜ್ಯದ ಆಳ್ವಿಕೆ ಕಾಲಕ್ಕೆ ವೇಶ್ಯೆಯರೊಂದಿಗೆ ಗುರುತಿಸಿಕೊಳ್ಳಬೇಕಾಯಿತು. ಇವರು ದೇವಾಲಯಗಳಿಗೆ ನೀಡಿದ ದಾನವನ್ನು ಕುರಿತು ಶಾಸನಗಳು ಉಲ್ಲೇಖಿಸಿವೆ. ಕ್ರಿ.ಶ. ೧೦೩೮ರ ಇಮ್ಮಡಿ ಜಯಸಿಂಹನ ಆಳ್ವಿಕೆ ಅವಧಿಯಲ್ಲಿ ಬಾಗಳಿಯ ಕಲಿದೇವರ ನಂದಾದೀವಿಗೆಗೆ ಹಾಡುವ ಕಾಮವ್ವೆ ನಾಗವ್ವೆಯರ ಮಗಳು ಶ್ರೀ ಕಲಿದೇವರ ತೊತ್ತು ಪಾತ್ರದ ಸಿರಿ[ಯ]ವ್ವೆ ತಾನು ತನ್ನ ವಂಶದವರು ಕಲ್ಲಕೇರಿಯ ತನ್ನ ಮನೆ ದೇವರಿಗೆ ಒಂದು ವರ್ಷಕ್ಕೆ ಎರಡು ಪಣ ನಂದಾದೀವಿಗೆಗೆ ನೀಡಬೇಕೆಂದು ಆಕೆಯ ಅಹವಾಲಾಗಿದೆ(ಕ.ವಿ.ಶಾ. ಸಂಪುಟ–೧, ಹರಪನಹಳ್ಳಿ೯). ಹೊಯ್ಸಳರ ಅಧಿಕಾರಾವಧಿಯಲ್ಲಿ ಪಾತರದವರು ಸಾಕಷ್ಟು ಸಂಪತ್ತನ್ನು, ಹಣವನ್ನು ಹೊಂದಿದ್ದರೆನಿಸುತ್ತದೆ. ಮತ್ತು ಅವರಿಗೂ ಕೂಡ ದಾನ, ಸಂಪತ್ತು ಹೇರಳವಾಗಿ ಬರುತ್ತಿತ್ತು. ಅವರಿಗೆ ದೊರೆಯುತ್ತಿದ್ದ ಆರ್ಥಿಕ ನೆರವಿನ ಮೂಲ ಭಾರಿ ಮೊತ್ತವೇ ಆಗಿತ್ತು. ಹಾಗಾಗಿ ದೇವರ ಉತ್ಸವಗಳಿಗೆ ದಾನ ನೀಡಿದ್ದಾರೆ. ಹಳೇಬೀಡಿನ ಶಾಸನದಲ್ಲಿ ಗೌರಿದೇವಿಯ ಉಯ್ಯಾಲೆ ಬಾಯಿನಕ್ಕೆ ಹೊಯ್ಸಳೇಶ್ವರ ದೇವರ ಪಾತ್ರದ ವಿಸ್ಸವ್ವೆ, ಲಕ್ಕವ್ವೆ ಐದು ಪಣ ಕೊಟ್ಟರು(E.C. IX, ಬೇಲೂರು, ೨೯೬). ದೇವರ ಉತ್ಸವಗಳಿಗೆ ಉಳ್ಳವರು ನೀಡುವ ದಾನ ನೀಡಿದಂತೆ ಪಾತ್ರದವರು ದಾನ ನೀಡಿದ್ದಾರೆ. ಅವರು ನೀಡುವ ದಾನಕ್ಕೆ ವಿರೋಧವೇನೂ ಇರಲಿಲ್ಲ.

ರಂಗವೇದಿಕೆಯಲ್ಲಿ ತಾಯಿ ಮಗಳು ಇಬ್ಬರೂ ಉಪಸ್ಥಿತರಿರುತ್ತಿದ್ದರು. ವೃತ್ತಿ ವಂಶಪಾರಂಪರ್ಯವಾಗಿರುವುದರಿಂದ ತಾಯಿ ಹಾಡುತ್ತಿದ್ದರೆ ಮಗಳು ನೃತ್ಯ ಮಾಡುತ್ತಿದ್ದಳು. ಹಾಡುವ ಕಲ್ಲವ್ವೆಯ ಮಗಳು ಪಾತ್ರದ(ಹೆಸರು ಉಲ್ಲೇಖವಿಲ್ಲ) ಶ್ರೀ ಪಂಚಿಕೇಶ್ವರ ದೇವರಿಗೆ ಕೆಲವು ಗದ್ಯಾಣ ದಾನ ನೀಡಿದ ಮಾಹಿತಿ ಇದೆ(E.C. IX, ಬೇಲೂರು, ೨೯೭). ಹಳೇಬೀಡಿನ ಮತ್ತೊಂದು ಶಾಸನದಲ್ಲಿ ಪಾತರದವರು ಸಾಮೂಹಿಕವಾಗಿ ದಾನ ನೀಡಿದ ಮಾಹಿತಿ ಇದೆ. ಪಾತ್ರದ ಆನೆ ಮಾಳೌವೆ ಧರ್ಮಕ್ಕೆ ಕೊಟ್ಟ ಗದ್ಯಾಣ ಮೂರು. ಶಿವರಾತ್ರಿಯ ಜಾಗರಣೆ ದಿನದಂದು ಈ ದಾನಕಾರ್ಯ ನಡೆದಿದೆ. ಅವುಜಿಗ ಬೊಮ್ಮಯನ ಮಗಳು ಪಾತ್ರದ ಚಂದವ್ವೆ ಒಂದು ಗದ್ಯಾಣ ಕಿಲಾರಿ ಬೊಮ್ಮಯನ ಮೊಮ್ಮಗಳು ಪಾತ್ರದ ಗೋಪವ್ವೆ ಒಂದು ಗದ್ಯಾಣ. ಪಾತ್ರದ ಚೆಣ್ಣಯನ ದೇವವ್ವೆ ಕೊಟ್ಟ ಹಣ ಅಯಿದು, ಹೊಯ್ಸಳೇಶ್ವರ ದೇವಾಲಯದ ಕಂಬದ ಗದ್ಯಾಣ(E.C. IX, ಬೇಲೂರು ೨೯೮). ಒಂದು ದೇವಾಲಯದಲ್ಲಿ ಹಲವಾರು ಪಾತರದವರು ಸೇವೆ ಸಲ್ಲಿಸುತ್ತಿದ್ದರು. ಅವರು ಒಂದೇ ಕುಟುಂಬದವರಾಗಿರಬಹುದು. ಅಕ್ಕ–ತಂಗಿಯರು ಇರುತ್ತಿದ್ದರು. ತಾಯಿ ಮಗಳು ಇರುತ್ತಿದ್ದರು. ಚಂದವ್ವೆ ಮತು ಗೋಪವ್ವೆ ತಂದೆ ಮತ್ತು ಅಜ್ಜನಿಂದ ಗುರುತಿಸಲ್ಪಟ್ಟಿದ್ದಾರೆ. ಅವುಜಿಗ ಬೊಮ್ಮಯ ಮತ್ತು ಕಿಲಾರಿ ಬೊಮ್ಮಯ ಇವರ ಕುಟುಂಬದಲ್ಲಿ ಚಂದವ್ವೆ ಮತ್ತು ಗೋಪವ್ವೆ ಇವರೇ ಮೊದಲ ಬಾರಿಗೆ ನೃತ್ಯ ಪ್ರಾರಂಭಿಸಿರಬಹುದು. ಇವರ ತಾಯಿ ಪಾತ್ರದ ಸೇವೆಯನ್ನು ಮಾಡಿದ್ದರೆ ತಾಯಿಯಿಂದ ಗುರುತಿಸಿಕೊಳ್ಳುತ್ತಿದ್ದರು. ಆದರೆ ಇಲ್ಲಿ ಹಾಗಾಗಿಲ್ಲ. ಕಿಲಾರಿ ಬೊಮ್ಮಯ ಮತ್ತು ಅವುಜಿಗ ಬೊಮ್ಮಯ ತಾವೇ ತಮ್ಮ ಹೆಣ್ಣುಮಕ್ಕಳನ್ನು ನೃತ್ಯ ಸೇವೆಗೆ ಕರೆತಂದಿರುವ ಸಾಧ್ಯತೆ ಇದೆ. ಬೇಲೂರಿನ ಮತ್ತೊಂದು ಶಾಸನದಲ್ಲಿ ಬಸವಣ್ಣ ಬಾಛವ್ವೆಯ ಮಗ ಹಾಡುವ ಮಛೆಯನಾಯಕ ಮಾಲೆಗಾರರೊಂದಿಗೆ ಕೂಟದಾನ(E.C. IX, ಬೇಲೂರು, ೧೫೫). ೧೩, ೧೪ನೇ ಶತಮಾನದ ಹಳೇಬೀಡಿನ ಶಾಸನದಲ್ಲಿ ಮದ್ದಳೆ ಮಯಿಲ(E.C. IX, ಬೇಲೂರು, ೨೯೯). ದೇವರ ಕೋಲುಕಾರ ಮಾಚಯ್ಯ, ಕೋಲುಕಾರ ಹರಿಯಂಣ ಇವರ ಉಲ್ಲೇಖ ಹಳೇಬೀಡಿನ ಕ್ರಿ.ಶ. ೧೨೭೪ರ ಶಾಸನದಲ್ಲಿ ಉಲ್ಲೇಖವಿದೆ(E.C. IX, ಬೇಲೂರು, ೨೯೭). ಇವರೆಲ್ಲ ಸಂಗೀತದ ವಿವಿಧ ವಾದ್ಯಗಳನ್ನು ನುಡಿಸುವವರು ಎನ್ನುವುದು ಖಚಿತವಾಗುತ್ತದೆ. ಪಾತರದ ಸಮುದಾಯದವರೆಲ್ಲ ದೇವಾಲಯದಲ್ಲಿ ಸಂಗೀತ ಸೇವೆ ಸಲ್ಲಿಸುತ್ತಿರಬಹುದೆನಿಸುತ್ತದೆ. ಸ್ತ್ರೀಯರು ನೃತ್ಯ ಮಾಡಿದರೆ ಪುರುಷರು ವಾದ್ಯಗಳನ್ನು ನುಡಿಸುತ್ತಿದ್ದರು. ಒಂದೇ ಕುಟುಂಬಕ್ಕೆ ಸೇರಿದ ಹಲವರು ಇರುವರು.

ದೇವಾಯಗಳಲ್ಲಿ ದೇವರ ಮುಂದೆ ನೃತ್ಯ ಮಾಡಲು ಪಾತರ, ನಟುವ, ಗಣಿಕೆ ಎಂದು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುವ ನರ್ತಕಿಯರಿದ್ದರು. ಹಿಂದೆ ಅರ್ಥದಲ್ಲಿ ಉಲ್ಲೇಖಿಸಿರುವಂತೆ ಇವರು ಒಂದು ವೃತ್ತಿಸೂಚಕ ಕುಲ ಅಥವಾ ಜನಾಂಗಕ್ಕೆ ಸೇರಿದವರು. ಬೇಟೆಗಾರರಿಗೆ ಬಿಲ್ವಿದ್ದೆ ಹುಟ್ಟಿನಿಂದ ಹೇಗೆ ಬಂದಿರುತ್ತದೆಯೋ ಹಾಗೆ ಪಾತರದವರಿಗೆ

ಕಲಾವೃತ್ತಿ ಹುಟ್ಟಿನೊಂದಿಗೆ ಬಂದಿರುವುದು ಸಹಜ. ಅದು ಆಳುವ ವರ್ಗದ ಕೃಪಾಕಟಾಕ್ಷಕ್ಕೆ ಒಳಗಾಗುವ ಮೊದಲು ಊರಿನ ಯಾವುದೋ ಒಂದು ಮೂಲೆಯಲ್ಲಿ ಎಲ್ಲ ಜನಸಾಮಾನ್ಯರಂತೆ ವಾಸ ಮಾಡುತ್ತಿದ್ದ ವೃತ್ತಿನಿರತ ಗಾಯಕ, ನೃತ್ಯಗಾರರಾಗಿದ್ದರೆನ್ನಬಹುದು. ಮೇಲ್ವರ್ಗದವರ ದೃಷ್ಟಿ ಯಾವಾಗ ಅವರ ಮೇಲೆ ಬಿದ್ದಿತೋ ಅಂದಿನಿಂದಲೇ ಅವರು ಆಳುವ ವರ್ಗದ ಮನರಂಜಿಸುವ ಕಲಾವಿದರಾದರೆನ್ನಬಹುದು. ಅಲ್ಲಿಯವರೆಗೂ ಅವರು ನಿರ್ಲಕ್ಷಿತ ಜನಾಂಗ.

ಪಾತರದವರು ಸಮಾಜದ ಪ್ರಮುಖ ಧಾರ್ಮಿಕ ಕೇಂದ್ರವಾದ ದೇವಾಲಯದ ರಂಗವೇದಿಕೆಯಲ್ಲಿ ಸಾರ್ವಜನಿಕವಾಗಿ ನೃತ್ಯ ಪ್ರದರ್ಶಿಸಿದರೋ ಅಂದಿನಿಂದಲೇ ಅವರನ್ನು ರಂಗಭೋಗದ ಪಾತರದವರಾದರೆನ್ನಬಹುದು. ಸಹಜವಾಗಿಯೇ ಸಮಾಜದ ಪ್ರಬಲ ಆರ್ಥಿಕ ಶಕ್ತಿಗಳ ಬಲೆಯಲ್ಲಿ ಸಿಲುಕಿ ತಮ್ಮ ಜನಾಂಗದವರೊಂದಿಗಿನ ವಿವಾಹ ಬಂಧನದಿಂದ ಆಚೆ ಬಂದು ತಮ್ಮನ್ನು ಆರ್ಥಿಕವಾಗಿ ಪೋಷಿಸುವವರ ಮುಷ್ಟಿಯಲ್ಲಿ ಹಿಡಿತಕ್ಕೆ ಒಳಗಾಗಿ ಬದುಕಬೇಕಾಯಿತು. ಇವರು ವಿವಾಹ ಬಂಧನದಿಂದ ಆಚೆ ಬಂದರೆಂದ ಮಾತ್ರಕ್ಕೆ ಪಾತರದವರನ್ನು ವೇಶ್ಯಯರೆಂದರೆ ತಪ್ಪಾಗುವುದು. "ನಾವು ದೇವದಾಸಿಯರಲ್ಲ, ಸೂಳೆಯರಲ್ಲ, ನಾವು ಪಾತರದವರು", ಎಂದು ಅಲ್ಲಾಸಾನಿ ತಮ್ಮ ಬಗ್ಗೆ ಹೇಳಿಕೊಂಡಿದ್ದಾಳೆ(ಶೈಲಜಾ ಹಿರೇಮಠ; ಪಾತರದವರು, ಪುಟ ೧೪). ಪಾತರದವರಿಗೆ ತಾವು ಕಲಾವಿದರೆಂಬ ಅಳಲಿದೆ. ಆ ಒಳ ತೋಟಿ ಧ್ವನಿ ಇಲ್ಲಿ ವ್ಯಕ್ತವಾಗಿದೆ. ಪಾತರದವರನ್ನು ಪದದ ಅರ್ಥದ ದೃಷ್ಟಿಕೋನದಿಂದ ನಿಘಂಟಿನಲ್ಲಿ ವೇಶ್ಯೆಯರ ಸಾಲಿಗೆ ಸೇರಿಸಿರಬಹುದು. ಆದರೆ ಒಂದು ವಸ್ತು ವ್ಯಕ್ತಿಗೆ ಹೆಸರು ಕೊಟ್ಟು ಆ ಶಬ್ದಕ್ಕೆ ಅರ್ಥ ಕೊಟ್ಟವರು ಮನುಷ್ಯರೆಂಬುದನ್ನು ಮರೆಯುವಂತಿಲ್ಲ. ಮನುಷ್ಯ ಮತ್ತು ಅವನ ಪ್ರವೃತ್ತಿ ಮೊದಲು ಹುಟ್ಟಿದ್ದು, ಅನಂತರ ಹುಟ್ಟಿದ್ದು ಅರ್ಥಕೋಶ ನಿಘಂಟುಗಳು.

ಕ್ರಿ.ಶ. ೮೦೨ರ ತಾಮ್ರಪಟವೊಂದರಲ್ಲಿ ಜಿನಭವನದಲ್ಲಿ ನಡೆಯುವ 'ವಾರವಿಲಾಸಿನೀ ವಿರಚಿತ ನೃತ್ಯ, ಗೀತ, ಭಾದ್ಯ' ಇತ್ಯಾದಿಗಳಿಗೆ ದಾನ ಕೊಡಲಾಗಿದೆ. ಪಾತರದವರನ್ನು 'ವಾರವಿಲಾಸಿನಿ'ಯರೆಂದು ಕರೆಯುತ್ತಿದ್ದಿರಬಹುದು(ಚಿದಾನಂದ ಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೨೦೨). ೧೨ನೇ ಶತಮಾನದ ವಿಜಾಪುರದ ಶಾಸನದಲ್ಲಿ ಅಯ್ಯಣಯ್ಯನ ವಾರವಧು ವಿಜಯದಬ್ಬೆ ನೀಡಿದ ಕಂಬದಾನ ಎಂದಿದೆ(ಕಲಬುರ್ಗಿ ಎಂ. ಎಂ.; ವಿಜಾಪುರ ಜಿಲ್ಲೆ ಶಾಸನ ಸೂಚಿ, ಶಾ.ಸಂ. ೨೨ ವಿಜಾಪುರ). 'ವಾರವಧು' ವಾರವಿಲಾಸಿನಿಯರಿಗೆ ಸಮಾನವಾಗಿ ಬಳಕೆ ಮಾಡಲಾಗಿದೆ ಎನ್ನಬಹುದು. ವಿಜಯನಗರ ಅರಸರ ಕಾಲಕ್ಕೆ ಇವರನ್ನು ವಾರಾಂಗನೆಯರೆಂದು ಕರೆಯಲಾಯಿತು. ಮಹಾನವಮಿ ಮಹೋತ್ಸವದಲ್ಲಿ ನಡೆಯುವ ಮನರಂಜನಾ ಪ್ರದರ್ಶನಗಳಲ್ಲಿ, ಪ್ರಾತಃಕಾಲದಿಂದ ಮಧ್ಯರಾತ್ರಿಯವರೆಗೂ ದೇವಾಲಯ, ಮಂಟಪ, ದ್ವಾರ, ಅರಮನೆ, ರಸ್ತೆಯ ಚೌಕ..... ಎಲ್ಲ ಕೇಂದ್ರ ಸ್ಥಳಗಳಲ್ಲಿ ಗುಂಪುಕಟ್ಟಿ ಕುಣಿಯುತ್ತಿದ್ದರು(ನಾಗೇಗೌಡ ಎಚ್. ಎಲ್.; ಪ್ರವಾಸಿ

ಕಂಡ ಇಂಡಿಯಾ, ಪುಟ ೩೪೪). 'ಬೆಳಗಿನ ಪೂಜೆಯ ನಂತರ ಅರಸನ ಮುಂದೆ ಸಹಸ್ರ ಅಂಗನೆಯರು ನೃತ್ಯ ಮಾಡುತ್ತಿದ್ದರು. ಸಂಜೆ ಕಪ್ಪಕಾಣಿಕೆಯು ಮುಗಿದ ನಂತರ ವಿಜಯಸೌಧದ ಮುಂದೆ (ರಾಜರ) ನೃತ್ಯ ಮಾಡುತ್ತಿದ್ದರು. ಇವೆಲ್ಲ ಪಾತರದವರಿಗೆ ರೂಪಾಂತರವಾಗಿ ಕರೆಯುತ್ತಿದ್ದ ಹೆಸರುಗಳು. ದೇವಾಲಯಗಳಿಂದ ರಾಜರ ಅಂತಃಪುರಕ್ಕೆ ಬಂದಂತೆಲ್ಲ ಪಾತರದವರ ಹೆಸರಲ್ಲಷ್ಟೇ ರೂಪಾಂತರವಾಗಲಿಲ್ಲ. ಅವರನ್ನು ಉಪಯೋಗಿಸಿಕೊಳ್ಳುವ ವ್ಯಕ್ತಿ ಸ್ಥಿತಿಯೂ ಬದಲಾಯಿತು. ಶಿಷ್ಟತೆಯಿಂದ ಅಶಿಷ್ಟತೆಗೆ ಬಂದಿತು.

ಪಾತರದವರನ್ನು ಸೂಳೆಯರನ್ನಾಗಿ ಮಾಡಿದ್ದು ಉಳ್ಳವರ ಸಮಾಜ, ಪಾತರದವರು ವೇಶ್ಯೆಯರನ್ನು ಕುರಿತು ಪ್ರತ್ಯೇಕವಾಗಿ ಉಲ್ಲೇಖಿಸಿರುವ ಶಾಸನಗಳು ಇವೆ. ಕ್ರಿ.ಶ. ೯೭೫ರ ಶಾಸನದಲ್ಲಿ ಐವರು ಸೂಳೆಯರಿಗೆ ಒಂದು ಪಾತ್ರಕ್ಕೆ ದಾನ ಕೊಟ್ಟ ಉದಾಹರಣೆ ಇದೆ. (ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೨೦೨). ಬಾಗಳಿ ಶಾಸನದಲ್ಲಿ 'ಪನ್ನೀರ್ವಸೂಳೆಯರಿಗೆ, ಸೂಳೆವಾಳಂಗೆ ವಂಚಿಗಂಗಂ ಫರೆಕಾಳರ್ಗ್ಗಂ; ಪಾತ್ರಕ್ಕಂ' ಎಂದು ಪಾತ್ರದವರಿಗೆ, ಸೂಳೆಯರಿಗೆ ಪ್ರತ್ಯೇಕ ದಾನ ನೀಡಲಾಗಿದೆ(ಕ.ವಿ.ಶಾ. ಸಂಪುಟ-೧, ಹರಪನಹಳ್ಳಿ ೯೭). ನಂದವಾಡಗಿ ಶಾಸನ ಪಾತರದವರಿಗೆ ೪೮ ಮತ್ತರು, (ರಂಗ)ಭೋಗದ ಸೂಳೆ ನಾಲ್ವರಿಗೆ ೭೬ ಮತ್ತರು ಭೂದಾನ ಮಾಡಿದ ವಿವರವಿದೆ(ಕ.ವಿ. ಶಾ. ಸಂಪುಟ-೯, ಹುನುಗುಂದ, ೧೨೨). ೪೮ ಮತ್ತರು ಭೂಮಿಯನ್ನು ಪಡೆದ ಪಾತರದವರ ಸಂಖ್ಯೆ ಉಲ್ಲೇಖವಿಲ್ಲ. ಹಾಗಾಗಿ ಇಲ್ಲಿ ಯಾರ ಸಂಭಾವನೆ ಹೆಚ್ಚಿತ್ತು ಎಂಬುದು ತಿಳಿದುಬರುವುದಿಲ್ಲ. ಪಾತರದದವರ ನೃತ್ಯ ನಡೆಯುವ ಸಂದರ್ಭದಲ್ಲಿ ಅಥವಾ ಅವರ ಅನುಪಸ್ಥಿತಿಯಲ್ಲಿ ರಂಗವೇದಿಕೆ ನಾಲ್ಕು ಕಂಬಕ್ಕೆ ಒಬ್ಬೊಬ್ಬರು ಉಪಸ್ಥಿತರಿರಬೇಕಿತ್ತೆನಿಸುತ್ತದೆ. ಹಾಗಾಗಿ ಅವರಿಗೆ ರಂಗಭೋಗದ ಸೂಳೆಯರೆನ್ನಬಹುದು.

ಪಾತರದವರು ನೃತ್ಯವಲ್ಲದೆ, 'ಗೀತ, ವಾದ್ಯ, ರಾಗವಾಗಿ ಪದ್ಯಗಳನ್ನು ಓದುವುದು(ಹಾಡುವುದು), ಕುಣಿಯುವುದು, ಅಭಿನಯಿಸುವುದು ..... 'ಮುಂತಾದ ವಿದ್ಯೆಗಳನ್ನು ಕಲಿಯಬೇಕಿತ್ತು(ಶ್ರೀ ಕೂಡಲೀ ಶೃಂಗೇರಿ ಜಗದ್ಗುರು, ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು, ಕೌಟಲೀಯ ಅರ್ಥಶಾಸ್ತ್ರ, ಪುಟ ೧೯೭). ಹಾಡುವ ಕಾಮವ್ವೆ ನಾಗವ್ವೆಯರ ಮಗಳು ಪಾತ್ರದ ಸಿರಿಯವ್ವೆ (ಕ.ವಿ.ಶಾ. ಸಂಪುಟ-೧, ಹರಪನಹಳ್ಳಿ, ೯೯). ಹಾಡುವ ಕಾಮವ್ವೆ, ನಾಗವ್ವೆಯರು ಮೊದಲಿನಿಂದಲೂ ಗಾಯಕ ವೃತ್ತಿಯನ್ನೇ ಮಾಡಿರಬಹುದು. ಇಲ್ಲವೇ ಯೌವನದಲ್ಲಿ ನೃತ್ಯ ಮಾಡುತ್ತಿದ್ದು, ವಯಸ್ಸಾದಂತೆ ನೃತ್ಯದಿಂದ ನಿವೃತ್ತಿ ಹೊಂದಿ ಹಾಡುವ ಕಾಯಕ ಮುಂದುವರಿಸಿರಬಹುದು. ರಂಗವೇದಿಕೆಯಲ್ಲಿ ನೃತ್ಯ ಮಾಡುವುದಕ್ಕೆ ಯೌವನಾವಸ್ಥೆಯ ಸೌಂದರ್ಯ ಅತಿ ಮುಖ್ಯ. ನೃತ್ಯ ದೇಹ ಕೇಂದ್ರಿತವಾದುದೆಂಬುದು ಇಲ್ಲಿ ಸ್ಪಷ್ಟವಾಗಿದೆ. ಪಾತರದವರು ನೃತ್ಯವನ್ನಲ್ಲದೆ ಸಂಗೀತವನ್ನು ಕಲಿಯಬೇಕಿತ್ತು. ಅಂದರೆ ಪಾತರದ ವೃತ್ತಿಯಿಂದ ನಿವೃತ್ತರಾದ ಮೇಲೆ ಹಾಡುವುದನ್ನು ಮುಂದುವರಿಸಬಹುದಿತ್ತು.

ಅವರಿಗೆ ಇದು ಅನಿವಾರ್ಯ ಕೂಡ ಆಗಿತ್ತು. ಒಂದು ವೇಳೆ ಅವರು ತಮ್ಮ ವೃತ್ತಿಯಿಂದ ನಿವೃತ್ತರಾದರೆ ನೀಡಿದ ದಾನ ದತ್ತಿ ಮರಳಿ ಕೊಡಬೇಕಿತ್ತು. ತಮ್ಮ ನೃತ್ಯವನ್ನು ತಮ್ಮ ಮಕ್ಕಳು ಮುಂದುವರಿಸುತ್ತಿರಬಹುದು.

ಬನವಾಸಿಯಲ್ಲಿ(ಕ್ರಿ.ಶ.೧೮೦೦) ಮೂರು ತಲೆಮಾರುಗಳ ಹಿಂದೆ ಗಂಗಾಸಾನಿ (೧೮೭೦). ರಂಗಸಾನಿ(೧೮೯೦) ಎಂಬ ನರ್ತಕಿಯರು ಮಧುಕೇಶ್ವರ ದೇವಸ್ಥಾನದಲ್ಲಿ ತಮ್ಮ ನರ್ತನ ಸೇವೆ ಸಲ್ಲಿಸುತಿದ್ದರು. ನೃತ್ಯಗಾತಿಯರೇ ಸಂಗೀತ ಹೇಳಿಕೊಡುತ್ತಿದ್ದರು. (ಶೈಲಜಾ ಹಿರೇಮಠ; ಪಾರದವರು, ಪುಟ ೩೯, ೪೦).

ಪಾತರದವರ ವೈಯಕ್ತಿಕ ಜೀವನದ ಬಗ್ಗೆ ಶಾಸನಗಳು ಉಲ್ಲೇಖಿಸಿಲ್ಲವಾದ್ದರಿಂದ ನಿಖರವಾಗಿ ವಿಶ್ಲೇಷಿಸುವುದು ಸಾಧ್ಯವಿಲ್ಲ, ಶೈಲಜಾ ಹಿರೇಮಠ ಅವರು ಪಾತರದವರೊಂದಿಗೆ ಮಾಡಿದ ಸಂಶೋಧನಾ ಸಂದರ್ಶನದಲ್ಲಿ ಉಲ್ಲೇಖ ಮಾಡಿರುವಂತೆ, ಅವರ ವಿವಾಹ ಸಾಂಕೇತಿಕ (ವಸ್ತು)ಗಳೊಂದಿಗೆ ನಡೆಯುತ್ತಿತ್ತು. ಗಂಡಾ ಕಟ್ಟುವುದರ ಮೂಲಕ, ಗೆಜ್ಜೆಕಟ್ಟುವುದರ ಮೂಲಕವೋ, ಸಂಗೀತ ಉಪಕರಣಗಳನ್ನು ಪಕ್ಕದಲ್ಲಿರಿಸಿ ಅಥವಾ ಅವರದೇ ಜನಾಂಗದ ಹಿರಿಯ ಪಾತರದವಳು ತಾಳಿ ಕಟ್ಟುತ್ತಿದ್ದಳು(ಶೈಲಜಾ ಹಿರೇಮಠ; ಪಾತರದವರು, ಪುಟ ೮೬, ೮೭). ಈ ರೀತಿ ವಿವಾಹವಾದ ನಂತರ ಇವರ ವೃತ್ತಿಜೀವನ ಆರಂಭವಾಗುತ್ತಿತ್ತು. ಅವರನ್ನು ಆರ್ಥಿಕವಾಗಿ ಪೋಷಣೆ ಮಾಡಲು ಮುಂದಾದವರಿಂದ ಅವರ ವೈಯಕ್ತಿಕ ಜೀವನ ಆರಂಭವಾಗುತ್ತಿತ್ತು. ಅವರೊಂದಿಗೆ ಕೊನೆಯವರೆಗೂ ನಿಷ್ಠೆಯಿಂದ ಇರುತ್ತಿದ್ದರು. ಇವರು ಸಂಗಾತಿ ಬದಲಾಯಿಸುತ್ತಿರಲಿಲ್ಲ. ಅವರೊಂದಿಗಿನ ಸಂಬಂಧ ಕೆಲವೇ ದಿನ ಮಾತ್ರ ಅಲ್ಲ. ಹಿಂದೆ ಉಲ್ಲೇಖಿಸಿದಂತೆ ನಾವು ದೇವದಾಸಿಯರಲ್ಲ, ಸೂಳೆಯರಲ್ಲ, ಎಂಬ ಅಲ್ಲಾಸಾನಿಯ ಮಾತಿಗೆ ಇದೇ ಕಾರಣವೆನ್ನಬಹುದು. ಇವರು ತಮಗೆ ಪೋಷಣೆ ನೀಡಿದವರೊಂದಿಗೆ ಅವರ ಪತ್ನಿಯರಷ್ಟೇ ವಿಧೇಯರಾಗಿರುತ್ತಾರೆನ್ನಬಹುದು. ಆದ್ದರಿಂದ ಇವರನ್ನು ವೇಶ್ಯೆಯರೆನ್ನುವುದು ಅಪವಾದವಾಗುತ್ತದೆ. ವಿವಾಹವೆಂಬ ಸಾಮಾಜಿಕ ಒಪ್ಪಂದದಾಚೆ ಇವರ ಸಂಬಂದ ಇರುವುದಕ್ಕೆ ಇವರನ್ನು ವೇಶ್ಯೆಯರ ಸಾಲಿನಲ್ಲಿ ನಿಲ್ಲಿಸಲಾಯಿತು.

ಇವರಿಗೆ ಪೋಷಣೆ ನೀಡುವವರು ಮೇಲ್ವರ್ಗಕ್ಕೆ ಸೇರಿದ ಶ್ರೀಮಂತರು, ಜಮಿನ್ದಾರರು. ಮುಂತಾದವರು ಜಮೀನು ನೀಡಿ ಪಾತರದವರ ಮೇಲೆ ಹಿಡಿತ ಹೊಂದಿರುತ್ತಿದ್ದರು. ಪಾತರದವರಿಗೆ ದಾನ ದತ್ತಿಯ ರೂಪದಲ್ಲಿ ಭೂಮಿಯನ್ನು ಕೊಡಲಾಗುತ್ತಿತ್ತು. ನಂದವಾಡಗಿ ಶಾಸನದಲ್ಲಿ ಪಾತರದವರಿಗೆ ನೀಡಿದೆ ಎನ್ನಲಾದ ೪೮ ಮತ್ತರು ಭೂಮಿ(ಕ.ವಿ.ಶಾ. ಸಂಪುಟ-೯, ಹುನುಗುಂದ, ೧೨೨). ಮಲ್ಲಟ ಶಾಸನದಲ್ಲಿ ಪಾತ್ರ ಪಾವುಳಕ್ಕೆ ನೀಡಿದ ಭೂದಾನ (ಕ.ವಿ.ಶಾ. ಸಂಪುಟ-೭, ಮಾನ್ವಿ, ೧೦೨). ೧೧ನೇ ಶತಮಾನದಲ್ಲಿ ನೃತ್ಯ, ಗೀತೆ, ವಾದ್ಯಕ್ಕೆ ಕೆಲವು ಮತ್ತರು ಕರಿಯ ನೆಲ ಬಿಡಲಾಗಿದೆ.(ಕ.ವಿ.ಶಾ. ಸಂಪುಟ-೭ ಮಾನ್ವಿ, ೮೮) ರಂಗಭೋಗಕ್ಕೆ

ಸಂಬಂದಿಸಿದ ಪಾತರದವರು, ವಿವಿಧ ವಾದ್ಯಗಾರರು ಜಮೀನುಳ್ಳ ಭೂಮಾಲೀಕರಲ್ಲ. ಮೂಲತಃ ಯಾವುದೇ ರೂಪದ ಆಸ್ತಿ, ಸಂಪತ್ತು ಹೊಂದಿರದ ಕೆಳವರ್ಗಕ್ಕೆ ಸೇರಿದ ಇವರಿಗೆ ತಮ್ಮದೇ ಆದ ಆಸ್ತಿಯನ್ನು ಹೊಂದಬೇಕೆನ್ನುವುದು ಸಹಜ ಆಕಾಂಕ್ಷೆ. ಪಾತರದವರ ಜೊತೆಗೆ ಉಲ್ಲೇಖವಾಗುವ ಪಾವುಳ ಶಬ್ದ ದೇವಸ್ಥಾನದ ಪ್ರಕಾರದಲ್ಲಿಯೇ ವಾಸಿಸುವ ಕೆಳವರ್ಗದ ಸೇವಕರ ಗುಂಪು(ಕನ್ನಡ ನಿಘಂಟು ಸಂಪುಟಗಳು; ಪುಟ ೫೫೬೨). ನಾಡಗಾವುಂಡರು, ಅಧಿಕಾರಿಗಳು, ಮೇಲ್ವರ್ಗದವರು ದಾನ ನೀಡಿ ಪಾತರದವರೊಂದಿಗೆ ವೈಯಕ್ತಿಕ ಸಂಬಂಧವನ್ನು ಹೊಂದುತ್ತಿದ್ದರು. ಪಾತರದವರ ಅಂತಹ ಮನೋಸ್ಥಿತಿಯನ್ನು ಬಳಕೆ ಮಾಡಿಕೊಂಡ ಭೂಮಾಲೀಕರು ಭೂಮಿ ರೂಪದಲ್ಲಿ ದಾನ ನೀಡುತ್ತಿದ್ದರು. ಹೀಗೆ ದಾನ ಪಡೆದ ಭೂಮಿ ಅವರ ವಂಶಕ್ಕೆ ಮುಂದುವರಿಯುತ್ತಿತ್ತು. ಪಾತ್ರ ವೃತ್ತಿಯು ಮುಂದುವರಿಯುತ್ತಿದ್ದ ಕಾರಣಕ್ಕೆ ಪಾತರದವರು ತಮ್ಮನ್ನು ಪೋಷಿಸುವವರೊಂದಿಗೆ ನಿಷ್ಠೆಯಿಂದ ಇರುತ್ತಿದ್ದರೆನ್ನಬಹುದು. ಈ ರೀತಿ ಇರುವ ಸಂಬಂಧಕ್ಕೆ ಸಮಾಜದಲ್ಲಿ ಮನ್ನಣೆ ಇರಲು ಸಾಧ್ಯವಿಲ್ಲ. ಅವರು ಎಷ್ಟೇ ನಿಷ್ಠೆಯಿಂದ ಇದ್ದರೂ ಅವರಿಗೆ ಹೆಂಡತಿ ಸ್ಥಾನ ದೊರೆಯಲು ಸಾಧ್ಯವಿಲ್ಲ. ಇಲ್ಲಿ ಪುರುಷನ ನೈತಿಕತೆಯನ್ನು, ಗೌರವವನ್ನು ಕಾಪಾಡುವುದು ಹೆಂಡತಿಯಾದರೂ ಸರಿ, ಪಾತರದವರಾದರೂ ಸರಿ ಇದು ಸ್ತ್ರೀಯಾದ ಕಾರಣಕ್ಕೆ ಅವರ ಹೊಣೆಗಾರಿಕೆಯೆಂದು ಭಾವಿಸಲಾಗಿತ್ತು. ಸಮಾಜದಲ್ಲಿ ಅವರ ಸಂಬಂಧ ಬಹಿರಂಗವಾದರೆ ಅಲ್ಲಿ ಸಮಾಜದ ನಿಕೃಷ್ಟತೆಗೆ ಒಳಗಾಗುವುದು ಹೆಣ್ಣು. ಏಕೆಂದರೆ ಗಂಡಿನ ಲೈಂಗಿಕತೆ ವಿಚಾರದಲ್ಲಿ ಧರ್ಮ ಮತ್ತು ಸಮಾಜದಲ್ಲಿ ಮುಕ್ತ ಅವಕಾಶ ಕೊಟ್ಟಿದೆ. ಅದೇ ಹೆಣ್ಣಿಗೆ ನಿರ್ಬಂಧ ಹೇರಿದೆ. ವೈದಿಕ ಕಾಲದಿಂದಲೂ ಸಂಸ್ಕೃತಿ ರೂಪಗೊಂಡಿರುವುದು ಹೀಗೆ. ಸ್ತ್ರೀ ಕುರಿತಾಗಿ ಸಮಾಜ ರಚನೆಯಾಗಿರುವುದೇ ಹಾಗೆ. ಅವಳ ಸುತ್ತ ನಿಯಮಗಳು ರಚನೆಯಾಗಿವೆ.

ರಂಗಭೋಗಕ್ಕೆ, ಪಾತರದವರಿಗೆ ನೀಡುವ ದಾನ ವೈಯಕ್ತಿಕವಾಗಿರದೇ, ಊರಿನ ಪರವಾಗಿ ಸಾಮೂಹಿಕವಾಗಿ ನೀಡುವ ದಾನವಾಗಿದ್ದರೆ, ಅದು ವಂಶಪರಂಪರೆಯಾಗಿ ಮುಂದುವರಿಯುತ್ತಿರಲಿಲ್ಲ. ನೀಡುವ ದಾನ ಕರಾರಿನ ರೂಪದಲ್ಲಿರುತ್ತಿತ್ತು. ಪಾತ್ರಭೋಗಕ್ಕೆ ವರುಷಕ್ಕೆ ೩೦ ಗದ್ಯಾಣ ಮಾಡಿದ ನಿರ್ಣಯ(E.C. III, ಗುಂಡ್ಲುಪೇಟೆ, ೧೨). ರಾಮನಾಥ ದೇವರ ಪಾತ್ರದ ಕೇತವ್ವೆ ಜೀವಿತಕ್ಕೆ ಬಡಗಿಗಳು ೧, ಅಕ್ಕಸಾಲಿಗರು–೧, ಕಂಚುಗಾರರು–೧ ಕೊಡಬೇಕು(E.C. III, ಗುಂಡ್ಲುಪೇಟೆ, ೭). ಈ ರೀತಿ ಒಂದು ವರ್ಷ, ಎರಡು ವರ್ಷ, ಎಂದು ಕರಾರಿನಂತೆ ನಿಗದಿ ಮಾಡಿ ಕೊಡುವ ದಾನದಿಂದ ಮತ್ತು ವಿವಿಧ ವೃತ್ತಿಯವರ ಮೇಲೆ ಕಂದಾಯದಂತೆ ಹಣ ನಿಗದಿ ಮಾಡಿ ನೀಡುವ ದಾನದಿಂದ ಪಾತರದವರಿಗೆ ಆರ್ಥಿಕ ಭದ್ರತೆ ದೊರೆಯುತ್ತಿರಲಿಲ್ಲವೆನ್ನಬಹುದು. ಈ ರೀತಿ ಸಾಮೂಹಿಕವಾಗಿ ದಾನ ನೀಡಿದವರೊಂದಗೆ ಪಾತರದವರು ಯಾವುದೇ ರೀತಿಯ ವೈಯಕ್ತಿಕ ಸಂಬಂಧವನ್ನು ಹೊಂದಿರುತ್ತಿರಲಿಲ್ಲ. ಪಾತರದವರಿಗೆ ಭೂಮಿ ದಾನ ನೀಡಿ ಅವರು ನೃತ್ಯ ನಡೆಸಿಕೊಡುವಂತೆ

ಕರಾರು ಮಾಡಲಾಗುತ್ತಿತ್ತೆನ್ನುವುದು ಸಿದ್ದಲಿಂಗಮಡಮ್ಮ ತಮಿಳು ಶಾಸನದಿಂದ ತಿಳಿದುಬರುತ್ತದೆ. ನಿರುತ್ತ ವಿಟಂಕಿ(ನೃತ್ಯಗಾತಿ)ಗೆ ಬ್ರಹ್ಮದೇಯ ಗ್ರಾಮವಾದ ಚಿಟ್ಟಿಜ್ಞೂರ ಸಭೆಯಲ್ಲಿ ಆ ಗ್ರಾಮದ ದಕ್ಷಿಣ ದಿಕ್ಕಿಗಿರುವ ಕಾಲುವಳಿ ಗ್ರಾಮವಾದ ಕುಲಿಯೂರಲ್ಲಿ ಕಾಲುಶೆಯ್ ಭೂಮಿಯನ್ನು ಆಕೆಗೂ ಮತ್ತು ಆಕೆ ವಂಶಪಾರಂಪರ್ಯದವರಿಗೂ ಸಲ್ಲುವಂತೆ ಮತ್ತು ಅವರು ಅದಕ್ಕೆ ನೃತ್ಯಭೋಗ(ನಿರುತ್ತಪೊಗಂ) ನಡಸಿಕೊಡಲು (ಅಥಾತ್) ತಿರುಪ್ಪಲಿಗಪ್ಪಗವರ ಮೆರವಣಿಗೆಯಲ್ಲಿ ದೇವರ ಮುಂದೆ ನೃತ್ಯ ಮಾಡಲು ಕೊಡಲಾಯಿತು(SII. XXVI, 391). ಇಲ್ಲಿ ನೀಡಿರುವುದು ದಾನವಾದರೂ ಅವರ ಮೇಲೆ ಒಂದು ರೀತಿಯ ಹಿಡಿತ ಸಾಧಿಸುವ ಕ್ರಿಯೆ ನಡೆದಿದೆ. ತೆಗೆದುಕೊಂಡ ದಾನಕ್ಕೆ ಅವಳಲ್ಲದೆ ಆಕೆಯ ವಂಶದವರೂ ನೃತ್ಯ ಸೇವೆ ಮಾಡಬೇಕು. ಇದು ಮುಂದೆ ಬರುವ ಪೀಳಿಗೆಯನ್ನು ಒಳಗೊಂಡಿದೆ. ಅವರ ಸೇವೆ ರಂಗಭೋಗಕ್ಕೆ ಮಾತ್ರ ಸೀಮಿತವಾಗಿರದೆ ಬೀದಿಯಲ್ಲಿ ಮೆರವಣಿಗೆಗೂ ವ್ಯಾಪಿಸಿತ್ತು. ಕಲಾಪೋಷಣೆಯ ಹೆಸರಲ್ಲಿ ಕಲಾವಿದರಿಗೆ ಮಾಡಿದ ಅವಮಾನ ಮತ್ತು ಅವರ ಮೇಲೆ ಸಾಧಿಸಿದ ಪ್ರಭುತ್ವವೆನ್ನಬಹುದು.

ದೇವಾಲಯಗಳು ಸಾಮಾಜಿಕ ಸಂಸ್ಥೆಯಾಗಿ, ಸಮಾಜದ ಎಲ್ಲ ವರ್ಗದವರೊಂದಿಗೆ ಸಂಪರ್ಕ ಹೊಂದಿ ಸಮುದಾಯವನ್ನು ಉತ್ತಮ ಮಾರ್ಗದಲ್ಲಿ ಮುನ್ನಡೆಸುವ ಕೇಂದ್ರ ಬಿಂದುವಾಗಿವೆ. ಅಂಥ ದೇವಾಲಯಗಳಲ್ಲಿ ಒಂದು ವರ್ಗದ ಮಹಿಳೆಯರೊಂದಿಗೆ ದೇವರ ಹೆಸರಲ್ಲಿ ದೇವರ ಪ್ರೀತ್ಯರ್ಥವೆಂದು ಅವರಿಂದ ನೃತ್ಯ ಸೇವೆ ಪಡೆಯುವುದು ಒಂದು ರೀತಿ ದೈಹಿಕವಾದ ಶೋಷಣೆ ಎನ್ನಬಹುದು. ಅವರ ಆರ್ಥಿಕ ದೌರ್ಬಲ್ಯವನ್ನು ಉಪಯೋಗಿಸಿಕೊಂಡು ಅವರ ಮೇಲೆ ಹಿಡಿತ ಸಾಧಿಸುವುದಾಗಿದೆ. ಅದೇ ನೃತ್ಯವನ್ನು ಅರಮನೆಯಲ್ಲಿ ರಾಣಿಯರು ಶಾಸ್ತ್ರೀಯವಾಗಿ ಪಡೆಯುತ್ತಿದ್ದರು. ಆದರೆ ಅದಕ್ಕೊಂದು ಸಾಂಸ್ಕೃತಿಕ ಚೌಕಟ್ಟನ್ನು ಒದಗಿಸಿಕೊಟ್ಟ ರಾಜಪ್ರಭುತ್ವ ಅದನ್ನು ಅರಮನೆಯಿಂದ ಆಚೆ ತರಲಿಲ್ಲ. ಆದರೆ ಅದೇ ಕಲೆಯನ್ನು ಪಾತರದವರು ಮಾಡಿದಾಗ ಅದಕ್ಕೆ ಸಾರ್ವಜನಿಕ ವೇದಿಕೆ ನಿರ್ಮಿಸಿದರು. ದೇವಸ್ಥಾನವನ್ನು ಕಟ್ಟಿಸಿದ ಮೇಲೆ ನೃತ್ಯ ಪರಿಣತ ಸುಂದರವಾದ ಸ್ತ್ರೀಯರಿಗಾಗಿ ಶೋಧ ನಡಸಿ ಅಂಥವರನ್ನೇ ದೇಶದ ನಾನಾ ಭಾಗಗಳಿಂದ ಆಯ್ಕೆ ಮಾಡಿ ತರಿಸುತ್ತಿದ್ದರಂತೆ. ತಂಜಾವೂರಿನ ರಾಜರಾಜೇಶ್ವರ ದೇವಸ್ಥಾನವನ್ನು ಕಟ್ಟಿಸಿದಾಗ ರಾಜರಾಜನು ನಾನೂರು ನರ್ತಕಿಯರನ್ನು ಹಾಗೆ ಆರಿಸಿ ತರಿಸಿದಂತೆ ತಿಳಿದುಬರುತ್ತದೆ(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೨೦೩). ಒಂದೊಂದು ದೇವಾಲಯದಲ್ಲಿ ಇಷ್ಟೊಂದು ಸಂಖ್ಯೆಯಲ್ಲಿ ನರ್ತಕಿಯರು, ಇವರಲ್ಲದೆ ಸೂಳೆಯರು ಇರುತ್ತಿದ್ದರು. ಇವರು ಒಂದೇ ಕಡೆ ಒಟ್ಟೊಟ್ಟಿಗೆ ದೇವಾಲಯಗಳಲ್ಲಿ ನೇಮಕಗೊಳ್ಳುತ್ತಿದ್ದರು. ಕ್ರಿ.ಶ. ೧೦೨೮ರಲ್ಲಿ ಸೂಡಿಯಲ್ಲಿ ಅಕ್ಕಾದೇವಿ ಅಕ್ಕೇಶ್ವರ ದೇವಸ್ಥಾನ ಕಟ್ಟಿಸಿ ದತ್ತಿಯನ್ನು ಬಿಟ್ಟಿದ್ದಾಳೆ. ಅದರಲ್ಲಿ ಬಲದ ದೆಸೆಯ ಪಾತ್ರಂ ಸೂಳೆ...... ವಕ್ಕಬ್ಬೆಗೆ ಮ ೧೨, ಎಡದ ದೆಸೆಯ ಪಾತ್ರಂ ಸೂಳೆ

ಗಾರ್ಗಬ್ಬೆಗೆ ಮ ೧೨ ಎಂದಿದೆ(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಂಸ್ಕೃತಿಕ ಅಧ್ಯಯನ, ಪುಟ ೨೦೩, ೨೦೪). ಪಾತ್ರದವರಿಗೆ ಸೂಳೆ ಎಂದು ಕರೆದಿರುವುದು ಪಾತ್ರದ ವೃತ್ತಿಯಿಂದ ನಿವೃತ್ತಿ ಹೊಂದಿ ಅದೇ ದೇವಾಲಯದಲ್ಲಿ ಆರ್ಥಿಕ ತೊಂದರೆಯಿಂದ ಜೀವನ ನಿರ್ವಹಣೆಗಾಗಿ ಸೂಳೆಯಾಗಿ ವೃತ್ತಿ ಆರಂಭಿಸಿರಬಹುದು. ಸೂಳೆಯರನ್ನು ಪಾತ್ರದವರೆಂದು ಸಂಭೋದಿಸಿಲ್ಲ. ಆದರೆ ಪಾತರದವರನ್ನು ಸೂಳೆ ಎಂದು ಶಾಸನಗಳಲ್ಲಿ ಕರೆದಿರುವುದನ್ನು ನೋಡಿದರೆ ಪಾತರದವರ ಸ್ಥಾನ ಕುಸಿದಿರಬಹುದು. ಇಲ್ಲವೇ ನೃತ್ಯವನ್ನು ಮಾಡುವ ಸೂಳೆಯಾಗಿರುವ ಸಾಧ್ಯತೆ ಇದೆ.

ಕಾಲಾನಂತರದಲ್ಲಿ ಪಾತರದವರಿಗೂ ವೇಶ್ಯೆಯರಿಗೂ ಭಿನ್ನತೆ ಗುರುತಿಸುವುದು ಕ್ಲಿಷ್ಟವಾಯಿತೆನ್ನಬಹುದು. ಆರ್ಥಿಕ ಪ್ರಭುತ್ವ ಹೊಂದಿದವರು ಪಾತರದವರನ್ನು ವೇಶ್ಯೆಯರಂತೆ ಬಳಸಿಕೊಳ್ಳಲು ಆರಂಭಿಸಿದರು. ಅವರೊಂದು ವಿಶಿಷ್ಟ ಕಲಾ ಶ್ರೀಮಂತಿಕೆಯನ್ನು ಪಡೆದು ಹುಟ್ಟಿದ ಜನಾಂಗ. ಅಂತಹ ಕಲಾವಿದರು ಆರ್ಥಿಕ ಪ್ರಭುತ್ವದ ಕೈಯಲ್ಲಿ ತಮ್ಮ ಮೂಲವನ್ನೇ ಕಳೆದುಕೊಂಡರೆನ್ನಬಹುದು.

ಮುದ್ದು ಪಳನಿಯ 'ರಾಧಿಕಾ ಸಾಂತ್ವಾನಂ' ಕೃತಿಯು ತನ್ನಂತೆ ತನ್ನ ಅಜ್ಜಿ ಮತ್ತು ತಾಯಿ ಕವಿಗಳಾಗಿದ್ದರು ಎಂದು ತಿಳಿಸುತ್ತಾಳೆ. ಈಕೆ ತನ್ನನ್ನು ಈ ಕೃತಿಯಲ್ಲಿ ಸಂಗೀತ ಅಭಿಜಾತ ಕಾವ್ಯ ಮತ್ತು ನೃತ್ಯದಲ್ಲಿ ತಜ್ಞಳೆಂದು ಕರೆದುಕೊಳ್ಳುವಳು, ಆದರೆ ಸಂಪ್ರದಾಯವಾದಿಗಳೆಂದು ಹೇಳಿಕೊಳ್ಳುವ ಕಂದಕೂರಿ ವೀರೇಶಲಿಗಂ ಈಕೆಯ ಕೃತಿ ಮತ್ತು ಆತ್ಮಚರಿತ್ರೆಯನ್ನು ತುಂಬ ಕೀಳಾಗಿ ನೋಡಿರುವರು. ಮುದ್ದುಪಳಿನಿಯ ಕಾಲದಲ್ಲೇ ತಂಜಾವೂರು ಸಂಸ್ಕೃತಿಯು ಸಾಕಷ್ಟು ಪ್ರೌಢವಾಗಿತ್ತು. ಮುದ್ದುಪಳನಿ ತನ್ನ ಕಲೆಯನ್ನು ತಂಜಾವೂರಿನ ಬೃಹದೇಶ್ವರ ದೇವಾಲಯದ ಮುಖಶಾಲೆಯಲ್ಲಿ ಪ್ರದರ್ಶಿಸಿರುವ, ಕಲಿತಿರುವ ಸಂಭವವಿದೆ. ಈ ದೇವಾಲಯದಲ್ಲಿ ಅನೇಕ ಕಲಾವಿದರು ಮತ್ತು ತಂತ್ರಜ್ಞರು ಆಶ್ರಯ ಪಡೆದಿದ್ದರು. ತಂಜಾವೂರಿನ ಅರಸರೇ ಈ ದೇವಾಲಯದ ಮುಖ್ಯ ಪೋಷಕರು. ಒಂಬತ್ತನೇ ಶತಮಾನದಿಂದ ಆರಂಭವಾದ ಚೋಳ ಸಂಪ್ರದಾಯದ ಶಿಲ್ಪ ಮತ್ತು ನೃತ್ಯಗಳು ಇಲ್ಲಿನ ಕಲಾವಿದರ ಸಮುದಾಯದಲ್ಲಿ ಹೆಚ್ಚು ಪ್ರಭಾವಶಾಲಿಯಾಗಿ ಕೆಲಸ ಮಾಡತೊಡಗಿದವು.(ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ(ಸಂ); ಸ್ತ್ರೀ ವಾದಿ ಸಾಹಿತ್ಯ ವಿಮರ್ಶೆ, ಪುಟ–೭೫)

ಶಿಲ್ಪಕಲೆಯ ಶ್ರೀಮಂತ ಪಳೆಯುಳಿಕೆಯಾಗಿರುವ ದೇವಾಲಯಗಳ ನೃತ್ಯಕಲೆಗೆ ವೇಶ್ಯೆಯರ ನೃತ್ಯವೇ ಸ್ಫೂರ್ತಿಯಾಗಿವೆ ಎಂದರೆ ಅವರು ಎಂತಹ ಆಗಾಧ ಕಲಾಪ್ರೌಡಿಮೆಯನ್ನು ಹೊಂದಿದ್ದರು ಎಂಬುದು ತಿಳಿಯುತ್ತದೆ. ಆದರೆ ಅವರು ಸೂಳೆಯರೆಂಬ ಕಾರಣಕ್ಕೆ ಅವರಿಗಷ್ಟೇ ಅಲ್ಲ ಅವರ ಕಲೆಗೂ ಬೆಲೆ ಇರುವುದಿಲ್ಲ. ಹೀಗಾಗಿ ವೇಶ್ಯೆಯರ ಕಲೆಗೆ ಬೆಲೆ ಇಲ್ಲದಾಯಿತು. ಏಕೆಂದರೆ ವೀರೇಶಲಿಂಗಂ ಅವರೇ ಮುದ್ದುಪಳಿನಿಯನ್ನು "ಸ್ತ್ರೀ ಎಂಬ ಶಾಲೀನತೆಯೂ

ಇಲ್ಲವೆಂದು ಹೀನವಾಗಿ ವಿಮರ್ಶಿಸಿರುವುದಕ್ಕೆ, ಸಂಪಾದಕಿ ನಾಗರತ್ನಮ್ಮನವರು ಕೃತಿಯಲ್ಲಿ ಶಾಲೀನತೆ ಹೆಂಗಸರಿಗೆ ಮಾತ್ರ ಸಹಜವಾದ ಗುಣವೆಂದು ತೀಕ್ಷ್ಣವಾದ ಉತ್ತರ ನೀಡಿರುವರು." ಸಮಾಜದಲ್ಲಿ ಗಂಡಸರಿಗೆ ಶೀಲ, ಪಾವಿತ್ರ್ಯ ಸಂಬಂಧಿಸುವುದಿಲ್ಲ. ಅವೇನಿದ್ದರೂ ಹೆಣ್ಣಿಗಾಗಿ ಮಾಡಿದಂತಹ ನಿಯಮಗಳು. ಇಂದು ಶಾಸ್ತ್ರೀಯ ನೃತ್ಯ ಮತ್ತು ಸಂಗೀತ ಕಲೆಗೂ ವೇಶ್ಯೆಯರಿಗೂ ಸಂಬಂಧವೇ ಇಲ್ಲದಂತಾಗಿದೆ. ಒಟ್ಟಾರೆ ಹೇಳುವುದಾದರೆ ಅರ್ಥಶಾಸ್ತ್ರದಲ್ಲಿ ಉಲ್ಲೇಖಿಸಲಾದ ಗಣಿಕೆಯರನ್ನು ಇತಿಹಾಸದ ಕಾಲಘಟ್ಟದಲ್ಲಿ ಭಿನ್ನ ಹೆಸರುಗಳಿಂದ ಗುರುತಿಸಿದರೂ ಅವರೆಲ್ಲ ಒಂದೇ ರೀತಿಯ ಸೇವೆ, ಒಂದೇ ರೀತಿ ಶೋಷಣೆಗೆ ಒಳಗಾಗಿರುವರು. ಇವರು ಒಂದೇ ಮೂಲವನ್ನು ಹೊಂದಿರುವವರು, ಸಂಗೀತ ಕ್ಷೇತ್ರವನ್ನು ಉಳಿಸಿದವರು, ಬೆಳೆಸಿದವರು, ಮುಂದುವರಿಸಿದವರು. ಈಗಲೂ ದೇವಾಲಯಗಳಲ್ಲಿ, ಉತ್ಸವಗಳಲ್ಲಿ, ವೇದಿಕೆ ಮೇಲೆ ಹೀಗೆ ಆಹ್ವಾನ ಬಂದ ಕಡೆಯೆಲ್ಲ ಸಾರ್ವಜನಿಕವಾಗಿ ನೃತ್ಯಸೇವೆಯನ್ನು ಸ್ತ್ರೀಯರು ಮಾಡುವುದುಂಟು. ಆದರೆ ಪ್ರಸ್ತುತ ಕಾಲದಲ್ಲಿ ನೃತ್ಯ ಮಾಡುವವರು ಯಾರು ಮತ್ತು ಯಾವ ವರ್ಗದವರು ಎಂಬುದು ಇಲ್ಲಿ ಮುಖ್ಯವಾಗಿರುತ್ತದೆ. ಮತ್ತು ಅಂಥ ವೇದಿಕೆಯೊಂದಿಗೆ ಕಲಾವಿದರು ವ್ಯಾವಹಾರಿಕ ಸಂಬಂಧವನ್ನು ಹೊಂದಿರುತ್ತಾರೆ. ಆದರೆ ಇತಿಹಾಸದಲ್ಲಿ ಹಾಗಿರಲಿಲ್ಲ. ಅಲ್ಲಿ ನೃತ್ಯ ಮಾಡುವ ಪಾತರದವರಿಗೆ ರಂಗಭೋಗವೆಂಬ ವೇದಿಕೆಗೆ ಇವರ ಸಂಬಂಧ ಮುಗಿಯುತ್ತಿರಲಿಲ್ಲ. ಅವರ ಸೇವೆ ಕಲಾಸೇವೆಯ ಜೊತೆಗೆ ಬಯಸಿದವರಿಗೆ ವ್ಯಕ್ತಿಗತವಾಗಿ ಸಲ್ಲಲೇಬೇಕಿತ್ತು. ಪುರುಷ ಸಮಾಜ ಅವರನ್ನು ವಿವಾಹ ಬಾಹಿರ ಮತ್ತು ಕುಟುಂಬದಾಚೆಯೇ ಬಳಕೆ ಮಾಡಿಕೊಂಡಿತು.

ಪ್ರಸ್ತುತ ಹತ್ತಂಬತ್ತನೇ ಶತಮಾನದವರೆಗೂ ಸಂಗೀತ ನೃತ್ಯ ಕಲೆಗಳನ್ನು ಮುಂದುವರಿಸಿಕೊಂಡು ಬಂದವರು ಪಾತರದವರೇ ಆಗಿದ್ದಾರೆ. ಶೈಲಜಾ ಹಿರೇಮಠ ಅವರು ತಮ್ಮ 'ಪಾತರದವರು' ಎಂಬ ಗ್ರಂಥದಲ್ಲಿ ಉಲ್ಲೇಖಿಸಲಾಗಿರುವ ಅಲ್ಲಾಸಾನಿ, ಗುಲಾಬ್ ಸಾನಿ, ಫಯಾಜ್, ಅಮೀನಾ ಹೀಗೆ ಇವರೆಲ್ಲಾ ಪಾತರದವರಾಗಿದ್ದಾರೆ. ಒಂದು ರೀತಿ ಈ ಸಂಗೀತ ನೃತ್ಯ ಕಲಾಪ್ರಕಾರಗಳನ್ನು ಮುಂದುವರಿಸಿಕೊಂಡು ಬಂದ ನಿಜವಾದ ಕಲಾವಿದರು ಇವರಾಗಿದ್ದಾರೆ. ೧೮೯೦ರ ದಶಕದಲ್ಲಿ ಪ್ರಾರಂಭವಾದ ನಾಚ್ ವಿರೋಧಿ ಚಳುವಳಿಯಿಂದ ಸಮಾಚಾರ ಮಾಧ್ಯಮಗಳು, ಸಮಾಜ ಸುಧಾರಕರ ಪ್ರಯತ್ನದಿಂದ ವೈಸ್‌ರಾಯ್‌ಗೆ ದೂರು ಹೋಗಿ ೧೯೧೧ರಲ್ಲಿ ಇದರ ವಿರುದ್ಧ ಕ್ರಮ ಕೈಗೊಳ್ಳಲು ಸೂಚನೆ ಬಂದದ್ದರಿಂದ ದೇವದಾಸಿಯರನ್ನು ದೇವಾಲಯಗಳಿಗೆ ಅರ್ಪಿಸುವಾಗ ನಡೆಯುತ್ತಿದ್ದ ವೈಭವೋಪೇತ ಸಮಾರಂಭಗಳು ಕ್ರಮೇಣ ಕಡಿಮೆಯಾದವು. ಈ ದೇವದಾಸಿ ನೃತ್ಯ ೧೯೨೦-೩೦ರ ದಶಕದಲ್ಲಿ ದೇವಾಲಯಗಳಿಂದ ಹಾಗೂ ಖಾಸಗೀ ಪೋಷಕರ ಮನೆಗಳಿಂದ ಬಹಿಷ್ಕೃತವಾಯಿತು. ಸರಿಸುಮಾರು ಅದೇ ಕಾಲದಲ್ಲಿ ಅವರ ನೃತ್ಯಕಲೆ ಪುನರುಜ್ಜೀವನ ಮತ್ತು ಪುನರ್‌ಸೃಷ್ಟಿಗಳೂ ನಡೆದವು.

ಅಪನಿಂದೆಗೆ ಒಳಗಾಗಿದ್ದ ಸಾದಿರ್ ಪ್ರದರ್ಶನಗಳು, ಸಾದಿರ ಎಂಬ ನೃತ್ಯ ಪ್ರಕಾರವಾಗಿದೆ. ಹದಿನಾಲ್ಕನೇ ಶತಮಾನದಲ್ಲಿ 'ಅಡವು' ತಂತ್ರವನ್ನು ಆಧರಿಸಿರುವ ನೃತ್ಯ ಪ್ರಕಾರ ಕಾಲ ಕಳೆದಂತೆ ನೀತಿಭ್ರಷ್ಟವಾದ ವೈಷ್ಣವ ಸಂಪ್ರದಾಯವಾದಿಗಳು ಅದನ್ನು ತಮ್ಮದಾಗಿಸಿಕೊಂಡು ಅದರಲ್ಲಿ ಇದ್ದ ಉನ್ನತವಾದ ತಾತ್ವಿಕ ಮತ್ತು ಧಾರ್ಮಿಕ ಅಂಶಗಳನ್ನು ತೆಗೆದುಹಾಕಿ ಅವುಗಳ ಜಾಗದಲ್ಲಿ ಕಚ್ಚಾ, ಇಂದ್ರಿಯಪರ ಅಂಶಗಳನ್ನು ಸೇರಿಸಿದರು. ೧೮ನೇ ಶತಮಾನದ ಹೊತ್ತಿಗೆ 'ಸಾದಿರ್' ಬ್ರಿಟಿಷರಿಂದ ಬಹಿಷ್ಕರಿಸಿದ್ದರಿಂದ ಅದರಲ್ಲಿದ್ದ ಕುಂದುಕೊರತೆಗಳನ್ನು ತೆಗೆದುಹಾಕಿ ಹೊಸದಾದ ಹೆಚ್ಚು ಪರಿಶುದ್ಧವಾದ ರೂಪದಲ್ಲಿ ಮರುಹುಟ್ಟು ಪಡೆಯಿತು. ಅದೇ ಇಂದು ರಾಷ್ಟ್ರೀಯ ನೃತ್ಯಪ್ರಕಾರವೆಂದು ಹೆಸರುವಾಸಿಯಾಗಿರುವ ಭರತನಾಟ್ಯವೆಂದು ಪದ್ಮಾಸುಬ್ರಹ್ಮಣ್ಯಂ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈ ನೃತ್ಯ ಪ್ರಕಾರಗಳು ಹೊಸ ಮೆರುಗನ್ನು ಪಡೆದು ಹೊಸದಾದ ರೂಪದಲ್ಲಿ ಬದಲಾವಣೆಗೊಂಡಿದ್ದೇನೋ ಸರಿ. ಆದರೆ ಅವು ಬ್ರಾಹ್ಮಣ ಮತ್ತು ಮೇಲ್ವರ್ಗದವರು ಅದರಲ್ಲಿ ತಮ್ಮ ಹೊಸ ಹೆಗ್ಗುರುತನ್ನು ಮೂಡಿಸಲು ಪ್ರಯತ್ನಿಸಿದರು. ಮತ್ತು ಅದರಲ್ಲಿ ಯಶಸ್ವಿಯೂ ಆಗಿರುವರು. ಅದಕ್ಕೆ ಕಾರಣವೇನು ಎಂಬ ಪ್ರಶ್ನೆ ಎದುರಾದಾಗ ಮತ್ತೆ ನಾವು ಹಿಂದಕ್ಕೆ ಹೋಗಬೇಕಾಗುತ್ತದೆ. ಲೇಖಕರ ಅಭಿಪ್ರಾಯದಂತೆ ಆಗಿನ ಕಾಂಗ್ರೆಸ್ ಮತ್ತು ಥಿಯೋಸಾಫಿಕಲ್ ಸೊಸೈಟಿ, ಇವರೆಡೂ ಬಹುವಾಗಿ ಬ್ರಾಹ್ಮಣರಿಂದ ತುಂಬಿಹೋಗಿದ್ದವು, ಅದಕ್ಕೆ ಆಯ್ಕೆಯಾಗಿದ್ದು ರುಕ್ಮಿಣಿದೇವಿ ಅರುಂಡೇಲ್ ಆಕೆಗೆ ತರಬೇತಿಯನ್ನು ನೀಡಿ ಭರತನಾಟ್ಯದಲ್ಲಿ ಭಾರತೀಯ ಪುನರುಜ್ಜೀವನದ ಪ್ರತಿಪಾದಕರೆಂದು ಅವರನ್ನು ಗುರುತಿಸಲಾಯಿತು.

ಒಂದು ಸಮೂಹ, ಸಮುದಾಯದಿಂದ ಆರಂಭವಾದ ಈ ನೃತ್ಯಕಲೆ ಆಳುವ ವರ್ಗದವರ ಕೈಯಲ್ಲಿ ಪ್ರತಿ ಕಾಲಘಟ್ಟದಲ್ಲಿ ಬದಲಾವಣೆ ಸ್ವರೂಪ ಪಡೆಯುತ್ತಾ ಬಂದಿತು. ಅರಮನೆಗಳಲ್ಲಿ ರಾಜಕುಮಾರಿಯರು, ರಾಣಿಯರು ನೃತ್ಯವಿಶಾರದೆ, ನೃತ್ಯವಿದ್ಯಾಧರೆ, ಹೀಗೆ ಹಲವಾರು ಬಿರುದುಗಳನ್ನು ಹೊಂದಿದ್ದರು. ಅವರ ನೃತ್ಯಕಲೆ ಮಹಲಿನೊಳಗೆ ಸಮಾಧಿಯಾಗುತ್ತಿದ್ದವು. ಅವರಿಂದ ಆ ಕಲೆ ಮುಂದುವರಿಯುತ್ತಿರಲೂ ಇಲ್ಲ, ಪ್ರದರ್ಶನಕ್ಕೆ ಅವಕಾಶವೂ ಇರಲಿಲ್ಲ. ಇದನ್ನು ಮುಂದುವರಿಸಿದವರು, ಉಳಿಸಿದವರು ವೇಶ್ಯೆಯರೇ ಆಗಿದ್ದರು. ಪ್ರತಿ ಕಾಲ ಘಟ್ಟದಲ್ಲಿಯೂ ಭಿನ್ನ ಹೆಸರಿನಲ್ಲಿ ಪುನರ್‌ಸೃಷ್ಟಿಸುತ್ತಾ ಬಂದರು. ಏಕೆಂದರೆ ಅವು ಅವರಿಗೆ ಕೌಟುಂಬಿಕವಾಗಿ ಬಂದಂಥವು. ಅಲ್ಲದೆ ತಮ್ಮ ತಾಯಿ ಅಜ್ಜಿಯರಿಂದ ರಕ್ತಗತವಾಗಿ ಬಂದು ಅದಕ್ಕೆ ಬಾಲ್ಯದಲ್ಲೇ ಸಂಗೀತದ ವಾತಾವರಣದಲ್ಲಿ ಬೆಳೆಯುತ್ತಿದ್ದುದರಿಂದ ವಿಶೇಷ ತರಬೇತಿ ಅವಶ್ಯಕತೆಯೂ ಬೇಕಿರಲಿಲ್ಲ. ಆದರೆ ಇಂಥ ಕಲಾ ಜೀವಾತ್ಮರಾಗಿರುವ ಇವರನ್ನು ಅಂದಿನ ಸಮಾಜವೂ ಕಲಾವಿದರೆಂದು ಗೌರವಿಸಲಿಲ್ಲ, ಇಂದಿನ ಸಮಾಜವೂ ಗೌರವಿಸುತ್ತಿಲ್ಲ. ವೇಶ್ಯೆಯರೆಂದ ತಕ್ಷಣ ಅವರನ್ನು ನೋಡುತ್ತಿದ್ದ ದೃಷ್ಟಿಕೋನವೇ ಒಂದು ರೀತಿ ಕೀಳಾಗಿದ್ದು, ಸಮಾಜದಿಂದ ತಿರಸ್ಕೃತರಂತೆ ಪ್ರತ್ಯೇಕ ಜೀವನ ನಡೆಸಬೇಕಿತ್ತು.

೫. ೨. ಸೂಳೆಯರು/ವೇಶ್ಯೆಯರು

ಪಿತೃಪ್ರಧಾನವಾದ ಈ ವ್ಯವಸ್ಥೆಯಲ್ಲಿ ಯಾವುದಾದರೊಂದು ಪದ್ಧತಿ ನಿಯಮ ಜಾರಿಯಲ್ಲಿದೆ ಎಂದರೆ ಅದು ಪುರುಷನ ಪರವಾಗಿಯೇ ಇರುತ್ತದೆ. ವಿವಾಹ ಎಂಬ ಸುಸಂಸ್ಕೃತ ಸಂಬಂಧ ಜಾರಿಯಲ್ಲಿದ್ದು, ಪತ್ನಿಯ ಅಕಾಲಿಕ ಮರಣದಿಂದ ವಿಧುರನಾದರೂ ಮರುವಿವಾಹಕ್ಕೆ ಧರ್ಮಶಾಸ್ತ್ರಗಳು ಅವಕಾಶ ಕೊಟ್ಟು, ಸಕಾರಣದಿಂದ ಬಹುಪತ್ನಿತ್ವಕ್ಕೂ ಒಪ್ಪಿಗೆ ಇತ್ತು. ಇಷ್ಟೆಲ್ಲ ಅನುಕೂಲ ಇದ್ದರೂ ಈ ಎಲ್ಲವನ್ನು ಮೀರಿ ವೇಶ್ಯೆಯರನ್ನು ಸೃಷ್ಟಿಸಿದರು. ಜೊತೆಗೆ ಅವರನ್ನೇ ದುಷ್ಟೆ ಎಂದರು. ಅವರ ಬಗ್ಗೆ ಕೀಳುಮನೋಭಾವ ತಳೆದರು. ತಮ್ಮದು ಸುಸಂಸ್ಕೃತ ಸಮಾಜವೆಂದು ಅವರನ್ನು ದೂರ ಇರಿಸಿದರು. ತಾವು ಮಾಡುವ ಕಾರ್ಯಕ್ಕೆ ದೇವರ ಹೆಸರನ್ನು ಹೇಳುತ್ತಿದ್ದರು. ತಾವು ಹೆಚ್ಚು ಹೆಚ್ಚು ಸುಖಿಸಲು ಅನುಕೂಲತೆಗಳನ್ನು ಮಾಡಿಕೊಳ್ಳುವುದಕ್ಕೋಸ್ಕರ ದೇವರ ಅನುಕೂಲತೆಗಳನ್ನು ಹೆಚ್ಚಿಸಿದರು. ಪಿತೃಪ್ರಧಾನ ಸಮಾಜ ಸೃಷ್ಟಿಸಿದ ದೇವರುಗಳು, ತಮ್ಮಂತೆ ಮನೆ, ಹೆಂಡತಿ, ಮಕ್ಕಳು, ಸಂಸಾರ, ಸುಖ ಸಂತೋಷ ವೈಭೋಗದಿಂದ ಇರಬೇಕೆಂದು ದೇವರಿಗೆ ಈ ಎಲ್ಲ ಭೋಗ ಭಾಗ್ಯಗಳನ್ನು ಒದಗಿಸುವ ನೆಪದಲ್ಲಿ ತಾವು ಸುಖಿಸಿದ್ದೇ ಕಾರಣವಾಗಿ ಇಂದಿಗೂ ಸಮಾಜದಲ್ಲಿ ನಿಜವಾಗಿಯೂ ಧರ್ಮ, ದೇವರೆಂದರೆ ಸಾಮಾನ್ಯರಿಗೆ ಅರ್ಥವಾಗದೆ ಉಳಿದಿರುವುದು. ಇಂಥ ಪುರುಷಪ್ರಧಾನ ಸಮಾಜ ಧರ್ಮದ ಹೆಸರಲ್ಲಿ ಕೊಟ್ಟ ಮತ್ತೊಂದು ಬಳುವಳಿ ಈ ವೇಶ್ಯೆ ಪದ್ಧತಿ ಎಂದು ಹೇಳಬಹುದು.

ವೇಶ್ಯೆಯರ ಬಗ್ಗೆ ಶಾಸನೋಕ್ತವಾಗಿ ದೊರೆತ ದಾಖಲೆಗಳಿಗಿಂತ ಮೊದಲು ಸಾಹಿತ್ಯ ಕೃತಿಗಳಲ್ಲಿ ಮಾಹಿತಿ ದೊರೆಯುತ್ತದೆಯಾದರೂ ಇದೇ ಕಾಲದಲ್ಲಿ ಎಂದು ನಿಖರವಾಗಿ ಹೇಳುವುದು ಸಾಧ್ಯವಿಲ್ಲ. ಶಾಸನೋಕ್ತ ಆಧಾರಗಳನ್ನು ಮುಖ್ಯವಾಗಿ ಅಧ್ಯಯನ ಮಾಡುವ ಉದ್ದೇಶವಾಗಿರುವುದರಿಂದ ಅಲ್ಲಿಂದಲೇ ಆರಂಭಿಸಲಾಗುವುದು.

'ಸೂಳೆ' ಎಂದು ಬಳಸುವ ಪದಕ್ಕೆ ಪರ್ಯಾಯವಾಗಿ ಬಳಕೆಯಾಗುವ ಪದಗಳೆಲ್ಲವೂ ಅಶ್ಲೀಲ ಅರ್ಥವನ್ನೇ ಒಳಗೊಂಡು ಬಳಕೆಯಾಗಿವೆ. ಪಾತರದವಳು, ನಟಿ, ಜಾರಿಣಿ, ಹೀಗೆ ಹಲವರು ಪದಗಳು ಹುಟ್ಟಿಕೊಂಡಿವೆ. ಸೂಳೆಗಾರಿಕೆಯೊಂದು ವೃತ್ತಿ ಸಮಾಜದಲ್ಲಿ ಎಲ್ಲ ವೃತ್ತಿಗಳು ಪುರುಷ ಸೂಚಕವಾಗಿವೆ. ಕುಂಬಾರ, ಬಡಿಗಾರ, ನೇಕಾರ, ಹೀಗೆ ಎಲ್ಲ ವೃತ್ತಿಗಳಲ್ಲಿ ವೃತ್ತಿ ಮತ್ತು ಪುರುಷನನ್ನು ಒಳಗೊಂಡಂತೆ, ಪುರುಷವಾಚಕವಾಗಿಯೇ ಪ್ರಯೋಗವಾಗಿವೆ. ಆದರೆ ಸೂಳೆಗಾರಿಕೆ ಪದವನ್ನು ಬಿಡಿಸಿದಾಗ ಅದಕ್ಕೆ ಅರ್ಥವೇ ಬರುವುದಿಲ್ಲ. ವೃತ್ತಿಗೂ, ಅರ್ಥಕ್ಕೂ, ಸೂಳೆಯರಿಗೂ ಪದಸಾಮ್ಯವಾಗಲಿ, ಅರ್ಥಸಾಮ್ಯವಾಗಲಿ ಹೊಂದುವುದೇ ಇಲ್ಲ. ಅಂದರೆ ಮೂಲತಃ ಇದೊಂದು ವೃತ್ತಿಯೇ ಅಲ್ಲ. ಎಲ್ಲ ವೃತ್ತಿಗಳು ತಾವಾಗಿಯೇ ರೂಪಗೊಂಡಂತವು. ಆದರೆ ಇದು ಪ್ರಯತ್ನಪೂರ್ವಕವಾಗಿ ರೂಪಿಸಿದಂತಹದು. ಹಾಗಾಗಿ ಈ ಪದಕ್ಕೂ ವೃತ್ತಿಗೂ ಅರ್ಥಸಾಮ್ಯತೆ ಇಲ್ಲವೆನ್ನಬಹುದು. ಈ ವಾದವನ್ನು ಹೊರತು

ಪಡಿಸಿಯೂ ನಾವು ಯೋಚಿಸುವುದಾದರೆ ಸೂಳೆಯರು ಮಾಡುವ ಕೆಲಸದಿಂದ ಇವರನ್ನು ಈ ರೀತಿ ಸಂಬೋಧಿಸಲಾಗುತ್ತಿತ್ತೇ ಎನ್ನುವುದಾದರೆ, ಸೂಳೆಯರು ಮೊದಲು ಗುರುತಿಸಿಕೊಂಡಿರುವುದೇ ದೇವಾಲಯಗಳ ಜೊತೆಗೆ, ದೇವರ ಸೇವೆಮಾಡುವವರಾಗಿ. ದೇವಾಲಯಗಳಲ್ಲಿ ನೂರಾರು ಸೂಳೆಯರನ್ನು ದೇವರ ಸೇವೆಗೆಂದು ನೇಮಕ ಮಾಡಿಕೊಳ್ಳಲಾಗುತ್ತಿತ್ತು. ಅವರಿಗೆ ದೇವಾಲಯದಲ್ಲಿ ದೇವರಿಗೆ ಚಾಮರ ಬೀಸುವುದಕ್ಕೆ, ಪಂಜು. (ರಾತ್ರಿ ಉತ್ಸವವಿದ್ದಾಗ ದೀಪ ಹಿಡಿಯುವ) ಹಿಡಿಯುವುದಕ್ಕೆ, ದೇವರ ಪಲ್ಲಕ್ಕಿ ಉತ್ಸವಕ್ಕೆ ಹಾಡು ಹೇಳಲು, ಪಲ್ಲಕ್ಕಿ ಹೊತ್ತು ತರುವವರಿಗೆ ಬಟ್ಟೆ ಹಾಸುವ ಇಂಥ ಹಲವಾರು ಕೆಲಸಗಳನ್ನು ಇವರೇ ಮಾಡಬೇಕಿತ್ತು. ಈ ಕೆಲಸವನ್ನು ಅವರವರೇ ಸರದಿ ಪ್ರಕಾರ ಮಾಡಬೇಕು. ಈ ರೀತಿ ಸರದಿ ಪ್ರಕಾರ ಅಂದರೆ 'ಸೂಳ್'=ಸರದಿ ಪ್ರಕಾರ ಕೆಲಸ ಮಾಡುವವರನ್ನು ಸೂಳೆಯರೆಂದು ಕರೆದಿರಬಹುದು.

ಮತ್ತೊಂದು ರೀತಿಯಲ್ಲಿ ಹೀಗೆ ಹೇಳಲಾಗುತ್ತದೆ. 'ಲಂಜಿಕಾ'=ಸೂಳೆ, ಕ್ರಿ.ಶ. ೫-೬ನೇ ಶತಮಾನಕ್ಕೆ ಸೇರಿದ ಬಾದಾಮಿ ಸಂಸ್ಕೃತ ಶಾಸನದಲ್ಲಿ ಲಜೇಶ್ವರ ಒಂದು ದೇವತೆಯನ್ನು ಮತ್ತು ಕನ್ನಡ ಶಾಸನದಲ್ಲಿ ಒಂದು ಊರನ್ನು ಹೆಸರಿಸಲಾಗಿದೆ. ಈ ಎರಡೂ ಶಾಸನಗಳನ್ನು ಬಾದಾಮಿಯ ವೈಷ್ಣವ ಗವಿಯ ಮೇಲೆ ಕೆತ್ತಿವೆ. ಪ್ರಾಚೀನ ಕಾಲದಲ್ಲಿ ದೇವಾಲಯ ಕಟ್ಟಿಸಿ ಅವುಗಳಿಗೆ ತಮ್ಮ ಹೆಸರನ್ನು ಇಡುತ್ತಿದ್ದರು. ಅದರಲ್ಲೂ ಬಾದಾಮಿ ಚಾಲುಕ್ಯರ ಕಾಲದಲ್ಲಿ ವೇಶ್ಯೆಯರು ದೇವಾಲಯಗಳಿಗೆ ಹೆಚ್ಚು ದಾನ ಕೊಟ್ಟಿದ್ದಾರೆ. ಲಂಜಿಕಾ=ವೇಶ್ಯೆ, ದೇವಾಲಯ ಕಟ್ಟಿಸಿ ತನ್ನ ಹೆಸರನ್ನೇ ಇಟ್ಟ ಕಾರಣ ಈ ದೇವರಿಗೆ ಲಂಜಿಕೇಶ್ವರ ಎಂಬ ಹೆಸರು ಬಂದಿರಬಹುದು. ಮಹಾಕೂಟವು ನಂದಿಕೇಶ್ವರ ಸೀಮೆಯ ದೇವಾಲಯದ ಸಂಕೀರ್ಣ ಆದುದರಿಂದ ಅಲ್ಲಿಯ ಮಹಾಕೂಟೇಶ್ವರ ದೇವತೆಯೆಂಬುದು ಈ ಲಂಜಕೇಶ್ವರ ದೇವತೆಯ ಪರ್ಯಾಯ ನಾಮವಾಗಿರಬಹುದೇ ಎನಿಸುತ್ತದೆ. ಸೂಳೆ ಕಟ್ಟಿಸಿರಬಹುದಾದ ಈ ಲಂಜಕೇಶ್ವರ (ಮಹಾಕೂಟೇಶ್ವರ) ದೇವರಿಗೆ ಮುಂದಿನ ದಿನಗಲ್ಲಿ ಸೂಳೆ ವಿನಾಪೋಟಿ ದಾನ ನೀಡಿದ್ದಾಳೆ. ವಿನಯಾದಿತ್ಯನ ಪ್ರಾಣವಲ್ಲಭೆ ವಿನಾಪೋಟಿ ಹಿರಣ್ಯಗರ್ಭದಾನ ಮಾಡಿ ಪೀಠಿಕೆ ತಾಮ್ರದ ಹೊದಿಕೆ ಹಾಕಿಸಿ, ದೇವರಿಗೆ ಬೆಳ್ಳಿಕೊಡೆ ಮತ್ತು ಭೂದಾನ ಮಾಡಿದ್ದಾಳೆ(ಕ.ವಿ.ಶಾ. ಸಂಪುಟ-೯, ಬಾದಾಮಿ, ೩೬೯). ಅವರು ತಮ್ಮನ್ನು ಸೂಳೆ ಎಂದು ಉಲ್ಲೇಖಿಸಿಕೊಂಡಿರುವುದಲ್ಲದೆ ವಿನಯಾದಿತ್ಯನಿಗೆ ಪ್ರಾಣವಲ್ಲಭೆಯಾಗಿದ್ದಳು ಎಂದರೆ ರಾಣಿಯರಿಗೆ ದೊರೆತಷ್ಟೇ ಸಮಾನ ಸ್ಥಾನ ದೊರೆತಿತ್ತು. ದೇವಾಲಯಗಳಿಗೆ ರಾಣಿಯರು ದಾನ ನೀಡಿದಂತೆ ನೀಡಿದ್ದಾರೆ. ಅಂದರೆ ಇವರೂ ಆರ್ಥಿಕವಾಗಿ ಬಲಿಷ್ಠರಾಗಿದ್ದರು. ಸಮಾಜ ಇವರನ್ನು ಗೌರವಿಸುತ್ತಿತ್ತು. ಹಾಗಾಗಿ ಇವರು ತಮ್ಮ ಬಗ್ಗೆ ಅಷ್ಟೊಂದು ಗೌರವದಿಂದ ಹೇಳಿಕೊಂಡಿದ್ದಾರೆ.

ಕ್ರಿ.ಶ. ೭ ಮತ್ತು ೮ನೇ ಶತಮಾನದ ಬಿಜೇಶ್ವರ ದೇವಾಲಯದ ಮೂರು ಕಂಬಗಳನ್ನು ಸೂಳೆ ಚಲಬ್ಬೆ ಮಾಡಿಸಿದಂತೆ ಉಲ್ಲೇಖವಿದೆ(ಕ.ವಿ.ಶಾ. ಸಂಪುಟ–೯, ಬಾದಾಮಿ, ೯೮). ವೇಶ್ಯೆಯರ ಜೀವನ ಎಷ್ಟು ಮೇಲ್ಮಟ್ಟದಾಗಿತ್ತು ಮತ್ತು ಅವರಿಗೆ ಗೌರವ ಕೂಡ ದೊರೆತಿತ್ತು ಎನ್ನಬಹುದು. ವೇಶ್ಯೆಯರನ್ನು ಶಾಸನದಲ್ಲಿ ಸೂಳೆ ಎಂಬ ಪದಗಳಿಂದಲೇ ಉಲ್ಲೇಖಿಸಲಾಗಿದೆ. ದೇವಾಲಯಗಳ ಜೊತೆಗಿನ ಸಂಬಂಧದಿಂದಲೇ ಅವರನ್ನು ಗುರುತಿಸಿರುವುದು ವಿಶೇಷ. ಸೂಳೆಯರನ್ನು ದೇವರ ಭೋಗಕ್ಕಾಗಿಯೇ ಸೃಷ್ಟಿಸಿರುವುದು. ಚಲಬ್ಬೆಗೆ 'ಸೂಳೆ' ಎಂದು ತನ್ನನ್ನು ಗುರುತಿಸಿಕೊಳ್ಳುವುದರಲ್ಲಿ ಯಾವುದೇ ಅಗೌರವವೆಂದೆನಿಸಿರುವುದಿಲ್ಲ. ಅದೊಂದು ವೃತ್ತಿಸೂಚಕವಾಗಿ ಎಂಬಂತೆ ಬಳಕೆಯಾಗಿದೆ. ಸಮಾಜದಲ್ಲೂ ಸೂಳೆಯರ ಸ್ಥಾನ ಕುಸಿದಿರಲಿಲ್ಲವೆನ್ನಬಹುದು. ಲೋಕಮಹಾದೇವಿಯ ದೇಗುಲದ ಸೂಳೆ ಗೋಯಿಂದ ಪೊಡ್ಡಿಯ ಮಗಳು ಬಾದಿಪೊಡ್ಡಿ ಎಂಬುವಳು ಉತ್ತಮ ರೀತಿಯ ಗೋಸಾಸ, ಅಶ್ವರಥ, ಹಸ್ತಿರಥ, ಭೂಮಿ ಮತ್ತು ಉಭಯಮುಖ ದಾನ ನೀಡಿದಂತೆ ಹೇಳಿದೆ(ಕ.ವಿ.ಶಾ. ಸಂಪುಟ–೯, ಬಾದಾಮಿ ೯೦). ಮೊದಲು ಸೂಳೆಯರು ದೇವಾಲಯಗಳಿಗೆ ನೀಡಿದ ದಾನ ಕುರಿತಾಗಿ ಮಾಹಿತಿ ನೀಡಿರುವ ಶಾಸನಗಳು, ನಂತರ ಸೂಳೆಯರಿಗೆ ನೀಡಿದ ಶಾಸನಗಳು ದೊರೆತಿವೆ. ದೇವಾಲಯದ ಸೂಳೆರಾದ ಇವರಿಗೆ ಸಮಾಜದಿಂದ ದಾನದ ರೂಪದಲ್ಲಿ ಸಂಪತ್ತು ಹೇರಳವಾಗಿಯೇ ಬರುತ್ತಿರಬೇಕು. ಸಮಾಜದ ಮೇಲ್ವರ್ಗದವರಂತೆ ಜೀವನ ನಡೆಸುತ್ತಿರಬಹುದು. ಪೊಡ್ಡಿ, ಬೊಡ್ಡಿಯ ಹೊಸಗನ್ನಡದಲ್ಲಿ ಅದರ ಅರ್ಥ ದುಷ್ಟ ಸ್ತ್ರೀ; ಅಪವಿತ್ರ ಹೆಂಗಸು(ಶಿವರಾಮ ಕಾರಂತ; ಸಿರಿಗನ್ನಡ ಅರ್ಥಕೋಶ; ಪುಟ ೩೯೨). ಪೊದಿ, ಪೊಟಿ, ಪೊಡ್ಡಿ, ಬೊಡ್ಡಿ ಹೀಗೆ ರೂಪಾಂತರವಾಗಿರಬಹುದು.

ಕ್ರಿ.ಶ. ೮೦೨ರ ತಾಮ್ರಪಟದಲ್ಲಿ ಜಿನಭವನದಲ್ಲಿ ನಡೆಯುವ 'ವಾರವಿಲಾಸಿನಿ ವಿರಚಿತ ನೃತ್ಯ ಗೀತ ವಾದ್ಯ' ಇತ್ಯಾದಿಗಳಿಗೆ ದಾನ ಕೊಡಲಾಗಿದೆ(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೨೦೨). ಶೈವ, ವೈಷ್ಣವ ದೇವಾಲಯಗಳಲ್ಲಿದ್ದ ಗೀತ ನೃತ್ಯದಂತ ರಂಜನೀಯ ಕಾರ್ಯಕ್ರಮಗಳು ಜೈನದೇವಾಲಯಗಳಿಗೂ ಪ್ರವೇಶಿಸಿದವು. ಜೈನ ಧರ್ಮವನ್ನು ಎತ್ತಿ ಹಿಡಿಯುವುದಕ್ಕಾಗಿ ವೈದಿಕ ಧರ್ಮವನ್ನು ಮೀರಿ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕು ಮತ್ತು ಜೈನಧರ್ಮವನ್ನು ಉಳಿಸಿಕೊಳ್ಳಬೇಕೆಂದರೆ ವೈದಿಕ ದೇವಾಲಯದ ಕೆಲವು ಶಿಷ್ಟಾಚಾರಗಳನ್ನು ತಾವು ಅಳವಡಿಸಿಕೊಳ್ಳವುದು ಅನಿವಾರ್ಯವಾಗಿತ್ತು. ಆ ಕಾರಣಕ್ಕೆ ಜೈನರ ಉಪದೇಶ ಮತ್ತು ನೀತಿಬೋಧನೆ ಹೊರತಾಗಿ ದೇವಾಲಯ ಅಂಗಭೋಗ, ರಂಗಭೊಗ, ನೃತ್ಯ ಇವೆಲ್ಲ ಪ್ರವೇಶ ಪಡೆದವು. ಕ್ರಿ.ಶ. ೭–೮ನೇ ಶತಮಾನದಲ್ಲೆ ಸೂಳೆಯರ ಉಲ್ಲೇಖವಿದ್ದರೂ ೯ನೇ ಶತಮಾನದ ನಂತರವೇ ಹೆಚ್ಚಿನ ಮಾಹಿತಿ ದೊರಕುವುದು. ಕ್ರಿ.ಶ. ೯೭೫ರ ಶಾಸನವೊಂದರಲ್ಲಿ ಐವರು ಸೂಳೆಯರಿಗೆ ದಾನ ಕೊಡಲಾಗಿದೆ(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೨೦೨). ೮ನೇ ಶತಮಾನದ ಕೇರಳದ

ದೇವದಾಸಿಯ ಶಿಲ್ಪ ದೊರೆತಿದ್ದು, ಆ ಶಿಲ್ಪವನ್ನು ನೋಡಿದರೆ ಅವಳು ದೇವದಾಸಿ ಅಷ್ಟೇ ಅಲ್ಲ. ಪಾತ್ರದವಳೂ ಆಗಿರುವ ಸಾಧ್ಯತೆ ಇದೆ. ಆ ಶಿಲ್ಪದಲ್ಲಿರುವ ದೇವದಾಸಿ ಉಡುಗೆ ಸಾಮಾನ್ಯ ಮಹಿಳೆಯರು ಧರಿಸುವಂತಿರದೆ ಇಂದಿನ ಶಾಸ್ತ್ರೀಯ ನೃತ್ಯ ಮಾಡುವ ನೃತ್ಯಗಾರ್ತಿಯರ ಉಡುಗೆಯಂತಿದೆ. ನೃತ್ಯ ಕಲಾವಿದೆಯಂತೆ ಕಾಣುತ್ತಾಳೆ(John Guy; Indian Temple Sculptur, p 119) ೮ನೇ ಶತಮಾನದಲ್ಲಿ ದೇವದಾಸಿಯರೇ ದೇವಾಲಯಗಳಲ್ಲಿ ನೃತ್ಯವನ್ನು ಮಾಡುತ್ತಿದ್ದರು. ಈ ಕಾಲಾವಧಿಯಲ್ಲಿ ಪಾತ್ರದವರ ಪ್ರವೇಶವಾಗಿರಲಿಲ್ಲ. ದೇವದಾಸಿಯರೇ ನೃತ್ಯವನ್ನು ಮಾಡಬೇಕಿತ್ತು.

**ಸೂಳೆವಳ**

ಬಾಳ್ಗುಳಿಯ ಕಲಿದೇವರ ಸೇವೆಗೆ 'ಪನ್ನಿರ್ವರ್ಸೂಳೆಯರಿಗೆ, ಸೂಳೆವಾಳಂಗೆ, ವಂಚಿಗಂಗಂ, ಪಱಕಾಱರ್ಗಂ.....ದಾನ ನೀಡಲಾಗಿದೆ(ಕ.ವಿ.ಶಾ. ಸಂಪುಟ-೧, ಹರಪನಹಳ್ಳಿ ೯೭). ದೇವಾಲಯಗಳಲ್ಲಿ ಎಷ್ಟು ಜನ ಸೂಳೆಯರನ್ನು ಬೇಕಾದರೂ ನೇಮಕ ಮಾಡಲಾಗುತ್ತಿತ್ತು. ಕುಕನೂರಿನ ಶಾಸನದಲ್ಲಿ 'ಶ್ರೀ ಮೂಲಸ್ಥಾನ ದೇವರ ಸೂಳೆವಳ ಸೋವಿನಾಯಕನ ಮಗ ಸೋಳೆವಳ ಬಸವಣಂಗೆ ದೇವಿಯ ತ್ರಿಸಂಧ್ಯಯೊಳಂ ಸಂಜೆವಱಯಂಭಾಜಂ'(ಕ.ವಿ.ಶಾ. ಸಂಪುಟ-೨, ಯಲಬುರ್ಗಾ, ೫೨). ಮೋರಿಗೇರಿ ಶಾಸನದಲ್ಲಿ ಸೂಳೆವಾಳಂಗೆ...., ಮತ್ತರ್ಪ್ಪನ್ನೆರಡು ಎಂದಿದೆ.(ಕ.ವಿ.ಶಾ. ಸಂಪುಟ-೧, ಹಗರಿಬೊಮ್ಮನಹಳ್ಳಿ, ೨೪).ಹೊಳೆ ಆನವೇರಿ ಶಾಸನದಲ್ಲಿ ಸೂಳೆವಾಳಂಗೆ ಮತ್ತಮೂಱ ಎಂದಿದೆ(SII. XVIII, 61). ಈ ಶಾಸನದಲ್ಲಿ ಸೂಳೆವಳ ಎಂದು ಉಲ್ಲೇಖವಾಗಿದೆ. ಸೂಳೆವಳ ಎಂದರೆ ಮೇಲ್ವಿಚಾರಕ ದೇವಾಲಯದಲ್ಲಿ ಅಷ್ಟೊಂದು ಸಂಖ್ಯೆಯಲ್ಲಿ ಸೂಳೆಯರನ್ನು ನೇಮಕ ಮಾಡಿರುವಾಗ ಮತ್ತು ಅವರೆಲ್ಲರಿಗೂ ಅವರದೇ ಆದ ಬೇರೆ ಬೇರೆ ಕರ್ತವ್ಯಗಳನ್ನು ವಹಿಸಿಕೊಡಲಾಗಿರುತ್ತದೆ. ಹಾಗಾಗಿ ಅವರೆಲ್ಲರ ಮೇಲ್ವಿಚಾರಣೆ ಮಾಡುವವನು ಎಂದು ಅಭಿಪ್ರಾಯ ಪಡಲಾಗಿದೆ. ಇವರು ಸರಕಾರಿ ಅಧಿಕಾರಿಯಂತೆ ಕಾರ್ಯ ನಿರ್ವಹಿಸುವವರಾಗಿರಬೇಕು ಎನ್ನಲಾಗುತ್ತದೆ. ಆದರೆ ಈ ವೃತ್ತಿ ವಂಶಪರಂಪರೆಯಾಗಿ ಮುಂದುವರಿದಿದೆ. ಸೂಳೆಯರು ವೃತ್ತಿಯಲ್ಲಿ ನಿಷ್ಠೆಯಿಂದ ಉಳಿಯುವಂತೆ ಮಾಡಲು ಒಬ್ಬ ಮೇಲ್ವಿಚಾರಕನ ಅವಶ್ಯಕತೆ ಇದ್ದು ಅವನೇ ಈ ಸೂಳೆವಳ ಆಗಿರುವ ಸಾಧ್ಯತೆ ಇದೆ. ಸೂಳೆವಳನ ಬಗ್ಗೆ ಈ ರೀತಿ ಅಭಿಪ್ರಾಯಗಳು ಮಂಡನೆಯಾಗಿವೆ. ಇವನು ಮೇಲ್ವಿಚಾರಕನೇ ಆಗಿದ್ದರೆ ಆತನಿಗೆ ದೇವಾಲಯ ಅಥವಾ ಅದಕ್ಕೆ ಸಂಬಂಧಿಸಿದವರೇ ವೇತನ ನಿಗದಿ ಮಾಡಿರುತ್ತಿದ್ದರು. ಆದರೆ ಇಲ್ಲಿ ಹಾಗಾಗಿಲ್ಲ. ಪಾತರದವರು, ವಂಶಿಗ(ಕೊಳಲು ನುಡಿಸುವವ), ಪರೆಕಾರ(ಹಲಗೆ ಬಾರಿಸುವವ) ಜೊತೆಗೆ ಸೂಳೆವಳನಿಗೂ ದಾನ ನೀಡಲಾಗಿದೆ. ಎಂದರೆ ಈತ ಸೂಳೆ ಅಥವಾ ಪಾತರದ ಕುಟುಂಬಕ್ಕೆ ಸೇರಿದ ಯಾವುದಾದರೂ ವಾದ್ಯ ನುಡಿಸುವವನೇ ಇರಬೇಕು. ಸೂಳೆವಳ ಎಂದು ಉಲ್ಲೇಖಿಸಿರುವ ಎಲ್ಲ ಶಾಸನಗಳಲ್ಲೂ ಇವನಿಗೆ ದಾನ ನೀಡಲಾಗಿದೆ. ಎಂದರೆ ಇವನು

ಸೂಳೆಯರ ಮೇಲ್ವಿಚಾರಕನಲ್ಲ ಎಂದು ಹೇಳಬಹುದು. ಚಿನ್ನತುಂಬಳ ಶಾಸನದಲ್ಲಿ ಸೂಳೆ, ಪಾತ್ರ, ಪಾಡುವವರು, ವಂಶಿಕಾರ, ಪಾವಿಗ, ಪರೆಕಾರ, ಮದ್ದಳಿಕಾರ, ಗಾಂಧರ್ವಿಗ, ಮಾನಸ, ಸೂಳೆವಳ ಇವರೆಲ್ಲರಿಗೂ ದಾನಗಳನ್ನು ನಡೆಸಿಕೊಂಡು ಹೋಗಬೇಕೆಂದು ಉಲ್ಲೇಖಿಸಲಾಗಿದೆ (SII. IX (I), 133). ಈ ಶಾಸನದಲ್ಲೂ ದೇವಾಲಯದ ಸಂಗೀತ ನೃತ್ಯದವರ ಜೊತೆಗೆ ಸೂಳೆವಳನನ್ನು ಗುರುತಿಸಿರುವುದರಿಂದ ಈತ ಯಾವುದೋ ವಾದ್ಯಕಾರನಿರಬೇಕು.

**ತೆರಿಗೆ; ಮನೆವಣ, ಕನ್ನಡಿವಣ, ಪಿರಿಯರವಣ**

ಸೂಳೆಯರಿಗೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು ಎನ್ನುವುದು ಶಾಸನಗಳಿಂದ ತಿಳಿದುಬರುತ್ತದೆ. ಈ ಅವಧಿಯಲ್ಲಿ ವೃತ್ತಿತೆರಿಗೆ ಸಾಮಾನ್ಯವಾಗಿದ್ದವು. ಸಮಾಜದಲ್ಲಿ ಜಾರಿಯಿದ್ದ ಎಲ್ಲ ವೃತ್ತಿಯವರ ಮೇಲೂ ತೆರಿಗೆಯನ್ನು ವಿಧಿಸಲಾಗಿದೆ. ವೃತ್ತಿಗಳು ಆದಾಯದ ಮೂಲವಾಗಿರುವ ಕಾರಣಕ್ಕೆ ಈ ರೀತಿ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಎಲ್ಲ ವೃತ್ತಿಗಳಂತೆ ಸೂಳೆಗಾರಿಕೆಯೂ ಒಂದು ವೃತ್ತಿ ಎಂದು ಪರಗಣಿಸಿ ಸೂಳೆಯರ ಮೇಲೆ ತೆರಿಗೆಯನ್ನು ವಿಧಿಸಲಾಗಿದೆ. 'ಮನೆವಣ' ಮತ್ತು 'ಕನ್ನಡಿವಣ' ಎಂದು ತೆರಿಗೆ ದೇವರಿಗೆ ಬಿಡಲಾದ ಮಾಹಿತಿ ಹಿರೇಮ್ಯಾಗಳಗೇರಿ ಶಾಸನದಲ್ಲಿದೆ.(ಕ.ವಿ.ಶಾ. ಸಂಪುಟ-೧, ಹರಪನಹಳ್ಳಿ ೧೧೩). ಇದೆ. ಕ್ರಿ.ಶ. ೧೫೦೬ರಲ್ಲಿ ವಿಜಯನಗರ ನರಸಿಂಹನ ಕಾಲದಲ್ಲಿ 'ಕಂನಡಿ ತೆರಿಗೆ' ವಿಧಿಸಲಾಗಿದೆ (E.C.VII, ಮಳುವಳ್ಳಿ, ೧೦೬). ಮಳಲಕೆರೆ ಶಾಸನದಲ್ಲಿ ನಾಲ್ಕು ಸೂಳೆದೆರೆ ಬಿಟ್ಟ ಮಾಹಿತಿ ಇದೆ(E.C. XI, (ರೈ)ದಾವಣಗೆರೆ ೧೩೩). ಕ್ರಿ.ಶ. ೧೦೭೫ರ ತುಂಬರ ಹೊಸೂರು ಶಾಸನದಲ್ಲಿ ಉದಯಾದಿತ್ಯನ ಪೆರಿಯರಸಿ ಬಿನ್ನಪದ ಮೇರೆಗೆ ರಾಮೇಶ್ವರ ದೇವರಿಗೆ ಎಪ್ಪತ್ತೊಕ್ಕಲು ಮದುವೆಯ ಪಂದರವಣ, ಸೂಳೆಯರ ಕನ್ನಡಿವಣ ಬಿಟ್ಟುಕೊಟ್ಟ ಉಲ್ಲೇಖವಿದೆ(E.C. VII, ಶಿಕಾರಿಪುರ, ೨೯೬). ಹೊಳೆ ಆನವೇರಿ ಶಾಸನದಲ್ಲಿ 'ಪಿರಿಯರವಣ' ಎಂಬ ತೆರಿಗೆ ಉಲ್ಲೇಖವಿದೆ(SII. XVIII, 61). ಇದು ಆಯ್ಯವರ್ಮನ ಸೂಳೆ ಪಿರಿಯ ಚಟ್ಟಬ್ಬೆಗೆ ವಿಧಿಸಿದ ತೆರಿಗೆ. ಈಕೆಗೆ ಐದು ಮತ್ತರು ಭೂಮಿ ದಾನ ಕೊಟ್ಟಿದ್ದಾನೆ. ಸೂಳೆಯರಲ್ಲೇ ಈಕೆ ಹಿರಿಯಳಾಗಿರಬಹುದು. ಆಕೆಯ ಮೇಲೆ ಮಾತ್ರ ತೆರಿಗೆ ವಿಧಿಸಿರಬಹುದು. ಒಂದು ಕುಟುಂಬದಲ್ಲಿ ಇರುವ ಎಲ್ಲ ಹೆಣ್ಣುಮಕ್ಕಳನ್ನು ಸೂಳೆಯರನ್ನಾಗಿ ನೇಮಕ ಮಾಡಿದಾಗ ಅಲ್ಲಿ ಅವರ ಸಂಖ್ಯೆ ಹೆಚ್ಚಾಗುತ್ತದೆ. ಅವರೆಲ್ಲರ ಹೊಣೆಗಾರಿಕೆ ನೋಡಿಕೊಂಡು ಹೋಗುವ ಹಿರಿಯಳಿಗೆ ವಿಧಿಸುವ ತೆರಿಗೆ ಇರುವ ಸಾಧ್ಯತೆ ಇದೆ.

ಮನೆವಣ ಮನೆಗಂದಾಯ, ಕನ್ನಡಿವಣ ಕನ್ನಡಿದೆರೆ, ಸೂಳೆವಣಕ್ಕೆ ಸೂಳೆದೆರೆ ಎಂದೂ ಕೂಡ ಉಲ್ಲೇಖವಾಗಿವೆ. ವೈಯಕ್ತಿಕ ತೆರಿಗೆಯಾಗಿರಬಹುದು. ಸೂಳೆಯರು ಕನ್ನಡಿ ಬಳಕೆಗೆ ಹೆಚ್ಚು ಪ್ರಾಧಾನ್ಯತೆ ಕೊಟ್ಟಿರುವುದರಿಂದ ಆ ಹೆಸರಿನಲ್ಲಿ ತೆರಿಗೆ ವಿಧಿಸಿರಬಹುದು ಎಂಬುದು ಚಿದಾನಂದಮೂರ್ತಿಯವರ ಅಭಿಪ್ರಾಯ. ಕೆ. ಇಸ್ಮಾಯಿಲ್ ಅವರು 'Money for Looking

glass'(ಇಸ್ಮಾಯಿಲ್ ಕೆ.; ಕರ್ನಾಟಕ ಟೆಂಪಲ್ಸ್, ಪುಟ ೫೯). ಇದು ತಲೆಗಂದಾಯ ಒಬ್ಬಳ ಮೇಲೆ ಮಾತ್ರ ವಿಧಿಸುವಂತಹುದು. ಅವರ ಆದಾಯದ ಮೂಲ ಅಧಿಕವಿರುವ ಸಾಧ್ಯತೆ ಇದೆ. ಕೇವಲ ಕನ್ನಡಿ ಬಳಕೆಯಿಂದ ತೆರಿಗೆ ವಿಧಿಸಲಾಗುತ್ತದೆ ಎನ್ನುವುದಾದರೆ ಬಳಕೆ ಮಾಡುವ ವಸ್ತುಗಳ ಮೇಲೆಲ್ಲಾ ತೆರಿಗೆ ವಿಧಿಸಬೇಕಿತ್ತು. ಯಾವ ವಸ್ತು ಅಥವಾ ಸಂಪತ್ತು ಆದಾಯದ ಮೂಲವಾಗಿರುತ್ತದೆಯೋ ಅಂಥಹದರ ಮೇಲೆ ತೆರಿಗೆ ವಿಧಿಸಲಾಗುತ್ತದೆ. ಆದರೆ ಕನ್ನಡಿ ಬಳಕೆ ಆದಾಯದ ಮೂಲವಲ್ಲ. ಅಷ್ಟಕ್ಕೂ ಸೂಳೆಯರ ಮೇಲೆ ವಿಧಿಸುವ ವೃತ್ತಿ ತೆರಿಗೆಗೆ ಸೂಳೆದೆರೆ ಎಂದು ಶಾಸನಗಳು ಸ್ಪಷ್ಟ ಉಲ್ಲೇಖ ನೀಡುವುದರಿಂದ ಕನ್ನಡಿವಣ ವೃತ್ತಿ ತೆರಿಗೆಯಾಗಿರಲು ಸಾಧ್ಯವಿಲ್ಲ. ಗೃಹಿಣಿಯರು ಅಲಂಕಾರಕ್ಕೆ ಕನ್ನಡಿಗೆ ಪ್ರಾಮುಖ್ಯತೆ ಕೊಡುವಂತಿರಲಿಲ್ಲ. ಕೆಲವು ಕುಟುಂಬಗಳಲ್ಲಿ ಕನ್ನಡಿ ಬಳಕೆ ನಿಷಿದ್ಧ ಕೂಡ ಆಗಿತ್ತು. ಆದರೆ ಮದುವೆಯಲ್ಲಿ ಶುಭಕಾರ್ಯಕ್ಕೆ ಕನ್ನಡಿ ಮಂಗಳ ಸಾಮಗ್ರಿಗಳ ಜೊತೆ ಇರಲೇಬೇಕಿತ್ತು. ಮದುವೆಯಲ್ಲಿ ಕಳಸಕನ್ನಡಿ ಮುಂದೆ ತನ್ನಿ ಎಂದು ಹೇಳುವ ವಾಡಿಕೆ ಈಗಲೂ ಇದೆ.ಈಗಲೂ ಮದುವೆ ಸಂದರ್ಭದಲ್ಲಿ ಕಳಸ ಹಿಡಿಯುವವರು ಮನೆಯ ಗೃಹಣಿಯರಾದರೆ ಕನ್ನಡಿ ಹಿಡಿಯುವವರು ವೇಶ್ಯೆಯರಾಗಿರುವ ಸಾಧ್ಯತೆ ಇದೆ. ಮುತ್ತೈದೆಯರಿಗೆ ಸುಮಂಗಲಿಯರೆಂದರೆ ಸೂಳೆಯರಿಗೆ ನಿತ್ಯ ಸುಮಂಗಲಿಯರೆನ್ನಲಾಗುತ್ತದೆ. ಮುತ್ತೈದೆ ಪತಿ ಬದುಕಿರುವವರೆಗೆ ಮಾತ್ರ ಸುಮಂಗಲಿ ಆದರೆ ಸೂಳೆಯರು ದೇವರನ್ನೇ ಪತಿ ಎಂದು ಭಾವಿಸಿರುವುದರಿಂದ ಅಲ್ಲಿ ಪತಿಯ ಜೀವಂತ ಮರಣದ ಪ್ರಶ್ನೆಯೇ ಬರುವುದಿಲ್ಲ. ಅವರು ತಮ್ಮ ಬದುಕಿನ ಉದ್ದಕ್ಕೂ ಸುಮಂಗಲೆಯರು.

ಮದುವೆಯಲ್ಲಿ ವಿವಾಹವಾಗುವ ಕನ್ಯೆ ಧೀರ್ಘಸುಮಂಗಲಿಯಾಗಿರಬೇಕೆಂದರೆ, ಅಪರೋಕ್ಷವಾಗಿ ಗಂಡಿಗೆ ಧೀರ್ಘಾಯುಷ್ಯ ಲಭಿಸಲಿ ಎನ್ನುವ ಕಾರಣಕ್ಕೆ ವಿವಾಹ ಮಾಡುವಂತಹ ಶುಭ ಸಂದರ್ಭದಲ್ಲಿ ಅಲಂಕಾರದ ಜೊತೆಗೆ ಸೂಳೆಯರ ಆಶೀರ್ವಾದ ಅಥವಾ ಹಾರೈಕೆ ಅಗತ್ಯವಾಗಿರುತ್ತದೆ. ಈ ಕಾರಣಕ್ಕೆ ಮದುವೆಯಲ್ಲಿ ಕಳಸದ ಜೊತೆ ಕನ್ನಡಿ ಹಿಡಿಯುವವರು ವೇಶ್ಯೆಯರಾಗಿರುವ ಸಾಧ್ಯತೆ ಇದೆ. ಅವರ ಈ ಸೇವೆಗೆ ಹಣದ ರೂಪದ ಕಾಣಿಕೆ ಕೊಡುವುದು ವಿಶೇಷ ಹೀಗೆ ಪ್ರತಿ ಮದುವೆಯಲ್ಲಿ ಅವರಿಗೆ ದೊರೆಯುವ ಕಾಣಿಕೆ ರೂಪದ ಆದಾಯದ ಮೇಲೆ ವಿಧಿಸುವ ತೆರಿಗೆಯನ್ನು ಕನ್ನಡಿವಣ ಎಂದು ಶಾಸನಗಳಲ್ಲಿ ಉಲ್ಲೇಖಿಸಿರಬಹುದು. ಪಂದರವಣ ಮದುವೆಯಲ್ಲಿ ಹಂದರದ ಮೇಲೆ ವಿಧಿಸುವ ತೆರಿಗೆಯಾಗಿದೆ. ಈಗಲೂ ವೇಶ್ಯೆಯರಿಗೆ ವಿವಾಹದ ಶುಭಕಾರ್ಯಗಳಲ್ಲಿ ಎಷ್ಟೊಂದು ವಿಶೇಷವಾದ ಮನ್ನಣೆ ನೀಡಲಾಗುತ್ತದೆ ಎಂದರೆ ನಮ್ಮ ಗ್ರಾಮೀಣ ಪ್ರದೇಶದಲ್ಲಿ ವಿವಾಹದ ಸಂದರ್ಭದಲ್ಲಿ ಮಾಂಗಲ್ಯದ ದಾರಕ್ಕೆ ಮಾಂಗಲ್ಯ ಕರಿಮಣಿ ಹಾಕುವವರು ಇವರೇ, ಇವರ ಕೈಯಿಂದ ಈ ಕಾರ್ಯ ಮಾಡಿಸಿದರೆ ಮದುವೆಯಾಗುವ ಹುಡುಗಿ ದೀರ್ಘಸುಮಂಗಲಿಯಾಗಿರುತ್ತಾಳೆ ಎನ್ನುವುದು ನಂಬಿಕೆ ಈಕಾರ್ಯಕ್ಕೆ ಹಣದ ರೂಪದ

ಕಾಣಿಕೆ ಜೊತೆಗೆ ಸೀರೆಯುನ್ನು ಉಡುಗೊರೆಯನ್ನಾಗಿ ನೀಡುತ್ತದೆ(ಬಳ್ಳಾರಿ ಜಿ, ಹಗರಿಬೊಮ್ಮನಹಳ್ಳಿ, ತಾ).

'ಮನೆವಣ' ಸೂಳೆಯರ ಒಂದು ಕುಟುಂಬದಲ್ಲಿ ಜನಿಸಿದ ಹೆಣ್ಣುಮಕ್ಕಳೆಲ್ಲರೂ ಸೂಳೆಯರೇ ಆಗಬೇಕಿತ್ತು. ಅದರಲ್ಲಿ ಒಬ್ಬಳನ್ನು ಸೂಳೆಯನ್ನಾಗಿ ಬಿಟ್ಟು ಉಳಿದವರಿಗೆ ವಿವಾಹ ಮಾಡಿಕೊಡುತ್ತೇವೆಂದರೆ, ಅವರನ್ನು ವಿವಾಹವಾಗಲು ಯಾವ ಕುಟುಂಬಗಳು ಮುಂದೆ ಬರುವುದಿಲ್ಲ. ಹಾಗಾಗಿ ಆ ಕುಟುಂಬದಲ್ಲಿರುವ ಹೆಣ್ಣುಮಕ್ಕಳೆಲ್ಲರೂ ವೇಶ್ಯೆಗಾರಿಕೆಯನ್ನೇ ಪ್ರಧಾನ ವೃತ್ತಿಯನ್ನಾಗಿ ಸ್ವೀಕರಿಸಬೇಕು. ಇವರೆಲ್ಲರ ಮೇಲೆ ಒಟ್ಟಾಗಿ ವಿಧಿಸುವ ತೆರಿಗೆ ಮನೆವಣ ಆಗಿರುವ ಸಾಧ್ಯತೆ ಇದೆ. ಅವರು ಬೇರೆ ವೃತ್ತಿ ಮಾಡುತ್ತೇವೆಂದರೂ ಸಮಾಜ ಅವಕಾಶ ಕೊಡುತ್ತಿರಲಿಲ್ಲ. ಸೂಳೆಗಾರಿಕೆ ಅವರ ವೃತ್ತಿಯಾಗಿರಬೇಕು ಎಂದು ಬಯಸುತ್ತದೆ. ಒಂದು ವೇಳೆ ಅವರು ಬೇರೆ ವೃತ್ತಿಯಲ್ಲಿ ತೊಡಗಿಸಿಕೊಂಡರೆ ಅಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಬಹಳ ಕಾಲ ಅಂಥ ವೃತ್ತಿಯಲ್ಲಿ ಉಳಿಯಲು ಸಾಧ್ಯವಿಲ್ಲ. ಮೇಲೆ ವಿಧಿಸಲಾದ ತೆರಿಗೆ ಮನೆವಣವಾಗಿದೆ. ಈ ತೆರಿಗೆ ವಿಧಿಸುವ ಮೂಲ ಉದ್ದೇಶ ವೇಶ್ಯೆಯರು ಆರ್ಥಿಕವಾಗಿ ಹಿಡಿತದಲ್ಲಿರಬೇಕು ಎನ್ನುವುದು ಒಂದು ಕಾರಣವಾದರೆ, ಮತ್ತೊಂದು ದೇವಾಲಯಗಳಲ್ಲಿ ಸೇವೆಗೆಂದು ನೇಮಕ ಮಾಡಿಕೊಂಡ ಸೂಳೆಯರಿಗೆ ತೆರಿಗೆ ವಿಧಿಸಿ, ಮತ್ತೆ ಆ ತೆರಿಗೆಯನ್ನು ದೇವಾಲಯಕ್ಕೆ ತಲುಪುವಂತೆ ಮಾಡಲಾಗಿದೆ. ದೇವಾಲಯದ ಜೊತೆಗೆ ಗುರುತಿಸಿಕೊಂಡವರೆಲ್ಲ ದೇವಾಲಯದ ಸೂಳೆಯರೆ. ದೇವಾಲಯದ ಆವರಣದೊಳಗೆ ಬರುವ ಮೇಲ್ವರ್ಗದ ಮತ್ತು ಪುರೋಹಿತರಿಗೆ ಮಾತ್ರ ಇವರು ಸೇರಿದವರೇ ಹೊರತು ಸಮಾಜ ಸೂಳೆಯರಲ್ಲ. ಆ ಕಾರಣಕ್ಕೆ ಇವರಿಗೆ ಗೌರವವಿತ್ತು ಮತ್ತು ಆರ್ಥಿಕವಾಗಿ ಪ್ರಬಲವಾಗಿದ್ದರು. ಅಂದರೆ ದೇವಾಲಯದ ಅಧಿಕಾರಿ, ಮೇಲ್ವರ್ಗದವರು ಪುರೋಹಿತರಿಂದ ಇವರಿಗೆ ಬಂದ ಆದಾಯವಾಗಿರಲಿ ಅಥವಾ ದಾನ ಬಿಟ್ಟ ಭೂಮಿ, ಸಂಪತ್ತೇ ಆಗಿರಲಿ ಈ ರೀತಿ ಸೂಳೆಯರ ಮೇಲೆ ತೆರಿಗೆ ವಿಧಿಸುವುದರಿಂದ ಮತ್ತೆ ಆ ಸಂಪತ್ತು ಮರಳಿ ದೇವಾಲಯವನ್ನೇ ತಲುಪುವ ವ್ಯವಸ್ಥೆಯನ್ನು ತೆರಿಗೆ ಎಂಬ ಹೆಸರಿನಿಂದ ಮಾಡಿರುವ ಸಾಧ್ಯತೆ ಇದೆ.

**ಸೂಳೆಗೇರಿ**

ಸೂಳೆಯರ ವಾಸಕ್ಕೆ ಪ್ರತ್ಯೇಕವಾದ ಸ್ಥಳ ನಿಗದಿ ಮಾಡಿ ಅಲ್ಲಿ ಅವರಿಗೆ ವಾಸಕ್ಕೆ ನಿವಾಸಗಳನ್ನು ನಿರ್ಮಿಸಿಕೊಡಲಾಗಿರುವ ಸ್ಥಳಗಳಿಗೆ ಸೂಳೆಗೇರಿ ಎಂದೇ ಕರೆಯಲಾಗುತ್ತಿತ್ತು. ಕ್ರಿ.ಶ. ೧೦೫೮ರ ಸೂಡಿಯ ಶಾಸನದಲ್ಲಿ ಸೂಳೆಗೇರಿಯ ಉಲ್ಲೇಖ ಬರುತ್ತದೆ. ಅಕ್ಕಾದೇವಿಯಪೆರ್ಗಡೆ ನಾಗದೇವಯ್ಯ ನಾಗೇಶ್ವರ ದೇವಾಲಯ ನಿರ್ಮಾಣ ಮಾಡಿಸಿ ಅಲ್ಲಿ ೧೬ ಸೂಳೆಯರನ್ನು ನೇಮಕ ಮಾಡಿಸಿ ದೇವಸ್ಥಾನದ ಎರಡೂ ಪಕ್ಕಗಳಲ್ಲಿಯೂ

ಒಂದೊಂದು ಸೂಳೆಗೇರಿಗಳನ್ನು ನಿರ್ಮಾಣ ಮಾಡಿಸಿದನೆಂದು ಮಾಹಿತಿ ಇದೆ(EI. XV, p87). ಕವಲೂರ ಶಾಸನದಲ್ಲಿ ಮಣಿಯೂರ ಬಾಚರಸ ದೊಡ್ಡರಸ ಮೊದಲಾದವರು ಸೇರಿ ಹರಿಹರ ದೇವರ ಬ್ರಹ್ಮಪುರಿಗೆ, ಸೂಳೆಗೇರಿಗೆ ಎಡೆಹಳ್ಳಿಗೇರಿಯನ್ನು ದಾನ ಬಿಟ್ಟಿದ್ದಾನೆ. ಅದೇ ಶಾಸನದ ಮುಂದಿನ ಸಾಲಿನಲ್ಲಿ ಏಚಮಯ್ಯ ನಾಯಕರು ಊರ ಹಿರಿಯರು ಜಗಲಿಯ ಮೇಲೆ ನೆರೆದಿರ್ದು ಅಂಗಭೋಗಕ್ಕೆ ೨೪ ಮನೆ, ಸೂಳೆಗೇರಿಗೆ ೨೮ ಮನೆಗಳನ್ನು ಕೊಟ್ಟ ವಿಷಯವಿದೆ. ಶ್ರೀಮದಯ್ನೂರು ಶ್ರೀ.... ತೆ ಇಪ್ಪತ್ನಾಲ್ಕು ಮನೆ ಸೂಳೆಗೇರಿಗೆ ಎಂದಿದೆ(ಕ.ವಿ.ಶಾ. ಸಂಪುಟ–೨, ಕೊಪ್ಪಳ, ೩). ಕ್ರಿ.ಶ. ೧೧೧೨ರಲ್ಲಿ ದಂಡನಾಥ ಅನಂತಮಯ್ಯನು ಪುಲಿಗೆರೆಯ ಸ್ವಯಂ ಭೂ ದೇವಾಲಯದ ಮುಂದೆ ಅದಕ್ಕೆ ಸೇರಿದ 'ಸೂಳೆಕೇರಿ'ಯನ್ನು ಮಾಡಿಸಿದನೆಂದಿದೆ. (ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೨೦೫).

ಈ ರೀತಿ ದೇವಾಲಯಗಳ ಪಕ್ಕದಲ್ಲೆ ಸೂಳೆಗೇರಿಯನ್ನು ನಿರ್ಮಿಸಲು ಹಲವಾರು ಕಾರಣಗಳಿವೆ. ಅವರ ಸೇವೆಯ ಅಗತ್ಯ ಯಾವುದೇ ಸಮಯದಲ್ಲಿ ಬೇಕಾಗಬಹುದು. ಪ್ರಾತಃಕಾಲದ ಪೂಜೆಯ ವೇಳೆಯಲ್ಲಿ ಹಾಡಲು ಬೇಕಾಗಬಹುದು. ದೇವಾಲಯಗಳ ಆಡಳಿತ ಕಾರ್ಯಗಳು ನಡೆಯುವುದು ಜನಸಾಮಾನ್ಯರಿಂದಲ್ಲ. ಅವರಿಗೆ ಅಂಥ ಆರ್ಥಿಕ ಸಾಮರ್ಥ್ಯ ಇರುವುದಿಲ್ಲ. ಇಂದಿಗೂ ದೇವಾಲಯಗಳನ್ನು ಸಮಾಜದ ಶ್ರೀಮಂತ ಪ್ರತಿಷ್ಠಿತರೆನಿಸಿಕೊಂಡವರೆಲ್ಲ ಸೇರಿಯೇ ನಿರ್ಮಾಣ ಮಾಡಿರುತ್ತಾರೆ. ಅಲ್ಲಿ ನಡೆಯುವ ಕಾರ್ಯಚಟುವಟಿಕೆಗಳಿಗೆ ಹರಿದು ಬರುವ ದಾನ ದತ್ತಿಗಳು ಮೇಲ್ವರ್ಗದ ಶ್ರೀಮಂತರಿಂದಲೇ ಹಾಗಾಗಿ ಅವರಿಗೆ ದೇವಾಲಯದ ಮೇಲೆ ಪೂರ್ಣ ಹಿಡಿತವಿರುತ್ತದೆ. ಅವರಿಗೆ ಯಾವ ರೀತಿಯ ಅನುಕೂಲ ಮತ್ತು ಸೌಲಭ್ಯಗಳು ಬೇಕೋ ಹಾಗೆ ನಿರ್ಮಾಣ ಮಾಡಿಸುತ್ತಾರೆ. ದೇವಾಲಯ, ರಂಗಭೋಗ, ಸೂಳೆಯರು, ಪಾತ್ರದವರು, ಸೂಳೆಗೇರಿಗಳು ಇವೆಲ್ಲ ಅವರ ಸ್ವಯೋಜಿತ ಪರಿಕಲ್ಪನೆಗಳಲ್ಲದೆ ಮತ್ತೇನೂ ಆಗಿರಲು ಸಾಧ್ಯವಿಲ್ಲ. ಒಂದು ಸ್ವಂತ ಸೂರು ಕಟ್ಟಿಕೊಳ್ಳಲು ಸಾಧ್ಯವಿಲ್ಲದ ಜನಸಾಮಾನ್ಯರು ಇಷ್ಟೆಲ್ಲಾ ಅನುಕೂಲವಾದ ದೇವಾಲಯ ನಿರ್ಮಾಣಕ್ಕೆ ಆರ್ಥಿಕ ಸಹಾಯ ಮಾಡಲು ಹೇಗೆ ಸಾಧ್ಯ. ಶಿಲ್ಪ ಸೌಂದರ್ಯಯುಕ್ತ ದೇವಾಲಯಗಳ ನಿರ್ಮಾಣದ ಜೊತೆಗೆ ಅಷ್ಟೇ ಸೌಂದರ್ಯಯುಕ್ತ ಸೂಳೆಗೇರಿಗಳನ್ನು ನಿರ್ಮಾಣವಾಗಿದ್ದವೆಂದು ಶಾಸನಗಳು ಉಲ್ಲೇಖಿಸುತ್ತವೆ. ಸೂಳೆಗೇರಿಗಳು ಎಷ್ಟು ಸುಂದರವಾಗಿದ್ದವೆಂದು ಕುರುಗೋಡು ಶಾಸನದಲ್ಲಿ ಹೀಗೆ ವರ್ಣಿಸಲಾಗಿದೆ.

ಸ್ಮರರಾಜಧಾನಿಯೋ ಸುರವನಿತಾ
ಜನ್ಮಭೂಮಿಯೋ ಚೆಲ್ವಂಗಾಗರಮೋ ಪೇಳೆಂಬನೆಗಂ ಕರಮೆ
ಸೆಗುಂ ಸೂಳೆಗೇರಿಗಳು ತತ್ಪುರದೊಳ್

ಎಂದು ವರ್ಣನೆಯಿದೆ(ಕ.ವಿ.ಶಾ. ಸಂಪುಟ–೧ ಬಳ್ಳಾರಿ, ೮). ರಟ್ಟದೊರೆ ಕಾರ್ತವೀರ್ಯನ ಆಳ್ವಿಕೆ ಕಾಲದ ಶಾಸನದಲ್ಲಿ ಊರಿನಲ್ಲಿ ವೇಶ್ಯೆಯರಿರುವುದರಿಂದ ಸೊಗಸಾಗಿರುತ್ತದೆ ಎಂದು

ಪುರಾಣಗಳಲ್ಲೆ ಹೇಳಲಾಗಿದೆಯಾದುದರಿಂದ ಹತ್ತನೆಯ ಶತಮಾನದಲ್ಲಿ ಒಂದು ಊರಿಗೆ ಒಂದು ಸೂಳೆಯರಿಗೆ ಕೇರಿ ನಿರ್ಮಿಸಿಕೊಡುವುದು ತಪ್ಪಲ್ಲವೆಂದು ಭಾವಿಸಿದ್ದರು. ಸೂಳೆಗೇರಿಗೆ ಭೇಟಿ ನೀಡುತ್ತಿದ್ದವರೆಲ್ಲ ಶ್ರೀಮಂತ ಮೇಲ್ವರ್ಗದವರೆಂಬುದು ಇಲ್ಲಿ ಖಚಿತವಾಗುತ್ತದೆ. ದೇವಾಲಯಗಳಂತೆ ಸುಂದರವಾದ ಸೂಳೆಗೇರಿಗಳನ್ನು ನಿರ್ಮಿಸುತ್ತಿದ್ದರು. ಇವು ತಮ್ಮ ಮನೆಗಳಂತೆ ಸುಂದರ ಮತ್ತು ವೈಭವದಿಂದ ಕೂಡಿರಬೇಕಿತ್ತು. ಏಕೆಂದರೆ ಅಲ್ಲಿಗೆ ಭೇಟಿಕೊಡುವವರು ಅವರೇ ಆಗಿದ್ದರು. ಸಾಮಾನ್ಯರಿಗೆ ಇಲ್ಲಿ ಪ್ರವೇಶವೂ ಇರಲಿಲ್ಲ, ಅಷ್ಟೊಂದು ಹಣದ ಬಲವೂ ಇರಲಿಲ್ಲ. ಅದಕ್ಕೆ ನಮ್ಮ ಪುರಾಣಗಳು ಪುಷ್ಟಿ ಕೊಡುತ್ತವೆ. ವೇಶ್ಯೆಯರಿಂದ ಕೂಡಿದ ಮಂಗಳೂರಿನ ವರ್ಣನೆ ಸ್ಕಂದ ಪುರಾಣದಲ್ಲಿದೆ.

ವಣಿಗ್ಭಿರ್ವಿವಿಧೈಶ್ಚೈವ ಧನಾಢ್ಯೈಸ್ತು ಸಮನ್ವಿತಂ
ನಾನಾಲಂಕಾರ ಸಂಯುಕ್ತೆ ವೇಶ್ಯಾಭಿಃ ಸರ್ವಲಂಕೃತಂ

ಮಹಾಧನವಂತರಾದ ಬಹುಮಂದಿ ವ್ಯಾಪಾರಸ್ಥರಿಂದ ಈ ನಗರ ತುಂಬಿತ್ತು. ಬಗೆ ಬಗೆಯ ಅಲಂಕಾರದಿಂದೊಪ್ಪುವ ವೇಶ್ಯಾ ಸ್ತ್ರೀಯರು ಇದನ್ನು ಚೆಂದಗೊಳಿಸುತ್ತಿದ್ದಾರೆ. ಎನ್ನಲಾಗಿದೆ(ನಾಗೇಗೌಡ ಎಚ್.ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೯೨). ದೇವಾಲಯಗಳು ವಿದ್ಯಾಕೇಂದ್ರಗಳು ಆಗಿದ್ದವು. ದೇವಾಲಯದ ಪಕ್ಕದಲ್ಲಿಯೇ ಸೂಳೆಗೇರಿಗಳಿದ್ದವು ಅಲ್ಲಿ ಬೋಧನೆ ಮಾಡುವ ಶಿಕ್ಷಕರು ವೇಶ್ಯೆಯರೊಂದಿಗೆ ಸಂಪರ್ಕ ಇಟ್ಟುಕೊಳ್ಳುವಂತಿರಲಿಲ್ಲ. ಅಂಥವರಿಗೆ ಶಿಕ್ಷೆ ಆಗುತ್ತಿತ್ತು. ಆ ರೀತಿ ಕಟ್ಟೆಚ್ಚರಿಕೆಯಿಂದ ಇರುವಂತೆ ಅಲ್ಲಿರುವ ತಪೋಧನರಿಗೆ ಆಜ್ಞೆ ಮಾಡಿರುವ ಶಾಸನವಿದೆ. ಈ ಕಟ್ಟಾಜ್ಞೆ ಊರಿನವರಿಗೆ ಸಂಬಂಧಿಸಿರುವಂತಿಲ್ಲ. ಮೋರಿಗೇರಿಯ ಶಾಸನದಲ್ಲಿ ಸೂಳೆಯರ ಬಗ್ಗೆ ಸೂಳೆವಾಳನಿಗೆ ದಾನ ಕೊಟ್ಟ ಮಾಹಿತಿ ಇದೆ. ಅಂದ ಮೇಲೆ ಅಲ್ಲಿ ದೇವಾಲಯದ ಪಕ್ಕದಲ್ಲಿ ಸೂಳೆಗೇರಿ ಇರಲೇಬೇಕು. ಅದೇ ಶಾಸನದ ಮುಂದಿನ ಸಾಲುಗಳು ಹೀಗಿವೆ. ಇದು ನೈಷ್ಠಿಕಸ್ಥಾನಮಿಲ್ಲಿ ನೈಷ್ಠಿಕರಲ್ಲದ ತಪೋಧನಮಿರಲಾಗದು, ಬ್ರಹ್ಮಚರ್ಯದಿಂದ ಕೆಟ್ಟು ನಡೆದ ತಪೋಧನರಂ ನಾಡನಾಳ್ವರಸುಂ ಮಂನ್ನೆಯನು ಮೋರಿಂಗೆಱಿಯ ಪನ್ನಿರ್ವರೋಡೆಯರುಮಿರ್ದು ಪೊರಮಡಿಸಿಯವರ'(ಕ.ವಿ.ಶಾ. ಸಂಪುಟ-೧, ಹಗರಿಬೊಮ್ಮನಹಳ್ಳಿ, ೨೪). ಅಲ್ಲಿರುವ ತಪೋಧನರು ಅನ್ಯ ಊರಿನವರು ಶಿಕ್ಷಣ ನೀಡುವುದಕ್ಕಾಗಿ ಬಂದವರು ವೇಶ್ಯೆಯರೊಂದಿಗೆ ಸಂಪರ್ಕ ಹೊಂದುವುದು ತಪ್ಪೆಂದು ಭಾವಿಸಲಾಗಿತ್ತು. ಉಪಾಧ್ಯಾಯ, ವಿದ್ಯಾರ್ಥಿಗಳಿಗೆ ಕಟ್ಟುನಿಟ್ಟಿನ ಬ್ರಹ್ಮಚರ್ಯವನ್ನು ವಿಧಿಸಲಾಗಿತ್ತು, ಅದನ್ನು ಮೀರಿದವರಿಗೆ ಶಿಕ್ಷೆ ಕಾದಿತ್ತು. ದೇವಾಲಯ ಒಂದು ವಿದ್ಯಾಸಂಸ್ಥೆಯೂ ಹೌದು, ಹಾಗೆಯೇ ವೇಶ್ಯೆಯರಿಂದ ತುಂಬಿದ ತಾಣವೂ ಹೌದು. ಆದರೆ ಅವರೊಂದಿಗೆ ಎಲ್ಲರೂ ಸಂಪರ್ಕ ಹೊಂದುವಂತಿರಲಿಲ್ಲ. ಅವರು ಇಂಥವರಿಗೇ ಎಂದು ಮೀಸಲಾಗಿದ್ದರು.

### ದೇವಾಲಯಗಳಲ್ಲಿ ಸೂಳೆಯರ ಪಾತ್ರ

ದೇವಾಲಯಗಳಲ್ಲಿ ಸೂಳೆಯರು ನಿರ್ವಹಿಸುವ ಕೆಲಸವನ್ನು ಅವರ ಹೆಸರಿನ ಹಿಂದೆ ಸೇರಿಸಿ ಹೇಳಿರುವುದರಿಂದ ಅವರ ಕೆಲಸದ ಬಗ್ಗೆ ತಿಳಿಯುತ್ತದೆ. ದೇವಾಲಯದಲ್ಲಿ ಒಂದೊಂದು ಸೇವೆಗೂ ಒಬ್ಬೊಬ್ಬ ಸೂಳೆ ಇದ್ದಳು. ಸೂಡಿಯ ಅಕ್ಕಾದೇವಿ ಕಟ್ಟಿಸಿದ ಅಕ್ಕೇಶ್ವರ ದೇವಸ್ಥಾನ ಮತ್ತು ನಾಗದೇವಯ್ಯ ಕಟ್ಟಿಸಿದ್ದ ನಾಗೇಶ್ವರ ದೇವಸ್ಥಾನಗಳು ಸೂಳೆಯರ ಬಗ್ಗೆ, ಅವರು ದೇವಸ್ಥಾನದಲ್ಲಿ ಮಾಡುತ್ತಿದ್ದ ಕೆಲಸ, ನಿಲ್ಲುತ್ತಿದ್ದ ಸ್ಥಳದ ಬಗ್ಗೆ ವಿವರ ಸಿಗುವುದು. ಅದರ ಆಧಾರದ ಮೇಲೆ ವಿಭಾಗ ಮಾಡಬಹುದು.

### ಚಾಮರದ ಸೂಳೆಯರು

ಕ್ರಿ.ಶ. ೧೦೪೮ರ ಹೊಳೆಆನವೇರಿ ಶಾಸನದಲ್ಲಿ ಮೊದಲ ಅಂಕದ ಬಾದಿಯ ಮಗಳು ಚಾಮರದ ಸೂಳೆ ಕಾಳಬ್ಬೆಗೆ ಮತ್ತರಯ್ದು(SII. XVIII, 61). ಸೂಡಿ ಶಾಸನದಲ್ಲಿ ಎಡದ ಪಕ್ಕದ ಕೇರಿಯ ಮೊದಲ ದೆಸೆಯ ಚಾಮರದ ಸೂಳೆ, ಬಲದ ದೆಸೆಯ ಬಿಟ್ಟಿಯ ಚಾಮರದ ಸೂಳೆ, ಎಡದ ದೆಸೆಯ ಕೇರಿಯ ಚಾಮರದ ಸೂಳೆ, ಕೇರಿಯ ಚಾಮರದ ಸೂಳೆ(EI. XV, p 82). ದೇವಾಲಯಗಳಲ್ಲಿ ದೇವರಿಗೆ ಚಾಮರ (ಗಾಳಿ) ಹಾಕುವುದು, ಈಗಲೂ ದೇವಾಲಯಗಳಲ್ಲಿ ಮತ್ತು ದೇವರ ಉತ್ಸವಗಳಲ್ಲಿ ಈ ಕೆಲಸ ಮಾಡುವವರು ಸೂಳೆಯರೇ, ಇವರ ವಾಸ ಸ್ಥಳ ಪ್ರತ್ಯೇಕವಾಗಿಯೇ ಇರುತ್ತವೆ. ಆಗ ಕೇರಿ ಎಂಬ ಪದ ಬಳಸಲಾಗುತ್ತಿತ್ತು. ಎಡದ ಪಕ್ಕದ ಕೇರಿಯ ಮೊದಲ ದೆಸೆಯ ಬಿಟ್ಟಿಯ ಚಾಮರದ ಸೂಳೆ ಅಚಬ್ಬೆ, ಬಲದ ಪಕ್ಕದ ಕೇರಿಯ ಮೊದಲ ದೆಸೆಯ ಬಿಟ್ಟಿಯ ಚಾಮರದ ಸೂಳೆ ಅಬ್ಬೆಗೆ (EI. XV, p 82). ಇವೆರಡರಲ್ಲಿ ಬಿಟ್ಟಿ ಎಂಬ ಪದ ಬಳಕೆಯಾಗಿದೆ. ಅಂದರೆ ಇವರ ಸೇವೆಗೆ ಸಂಭಾವನೆ ಕೊಡಲೇಬೇಕೆಂದಿರುವುದಿಲ್ಲ. ಏಕೆಂದರೆ ಅದು ಸೇವೆಯ ಅರ್ಥದಲ್ಲಿದೆ. ಈಗಲೂ ದೇವರ ಉತ್ಸವಗಳಲ್ಲಿ ದೇವರಿಗೆ ಚಾಮರ ಹಾಕುವವರು ಸೂಳೆಯರೇ ಇವರೇ ಸ್ವ ಇಚ್ಛೆಯಿಂದ ಬಂದು ಈ ಕೆಲಸ ಮಾಡಬೇಕು. ಅದಕ್ಕೆ ಇವರಿಗೆ ಯಾವುದೇ ಸಂಭಾವನೆ ಕೊಡುವುದಿಲ್ಲ. ಊರಿನಲ್ಲಿ ಫಸಲು ಬಂದಾಗ ರೈತರು ಅವರಿಗೆ ಒಂದಷ್ಟು ಜೀವನ ನಿರ್ವಹಣೆಗೆಂದು ಕೊಡಲಾಗುತ್ತದೆ. ಈ ರೀತಿ ಕೊಡುವುದಕ್ಕೆ ಆಯದ ಕಾಳು ಎಂದು ಕರೆಯಲಾಗುತ್ತದೆ(ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾ).

### ಕಂಬದ ಸೂಳೆಯರು

ದೇವಾಲಯದ ಕಂಬಗಳಿಗೆ ನಿಲ್ಲುವ ಸೂಳೆಯರನ್ನು ಕಂಬದ ಸೂಳೆಯರು ಎನ್ನಲಾಗುತ್ತದೆ. ಕಂಬದ ನಾಲ್ವರು ಸೂಳೆಯರು ಎಂದು ಉಲ್ಲೇಖವಿದೆ.(ಕ.ವಿ.ಶಾ. ಸಂಪುಟ–೧, ಹರಪನಹಳ್ಳಿ, ೧೧೩). ಕ್ರಿ.ಶ. ೧೦೫೪ರ ಸೂಡಿ ಶಾಸನದಲ್ಲಿ ಅಕ್ಕೇಶ್ವರ ದೇವಾಲಯದಲ್ಲಿ ಕಂಬದ ಸೂಳೆಯರ ಬಗ್ಗೆ ವಿವರವಿದೆ. ಬಲದ ದೆಸೆಯ ಮೊದಲ ಕಂಭದ ಸೂಳೆ.... ಬ್ಬೆಗೆ

ಮ ೧೫, ಅಲ್ಲಿಯ ಕಂಬದ ಸೂಳೆ ಅಸಗಬ್ಬೆಗೆ ಮ ೧೩, ಎಡದ ದೆಸೆಯ ಮೊದಲ ಕಂಬದ ಸೂಳೆ ರೇವಕಬ್ಬೆಗೆ ಮ ೧೩, ಅಲ್ಲಿಯ ಕಂಬದ ಸೂಳೆ ಗುಬ್ಬಿಯ ಚಾವುಂಡಬ್ಬೆಗೆ ಮತ್ತರ್.... (EI. XV, p 82). ಬಲವಕ್ಕದೆಡವಕ್ಕದ ಕಂಬದ ಸೂಳೆಯರ್ ನಾಲ್ವರ್ಗ್ಗಂ ಮತ್ತರ್ ೪೮(EI. XV, p 87). ದೇವಾಲಯದ ಒಳ ಆವರಣದಲ್ಲಿ ಕಂಬಕ್ಕೆ ನಿಲ್ಲುವ ಇವರಿಗೆ ದಾನ ಪ್ರತ್ಯೇಕವಾಗಿಯೂ ಮತ್ತು ಎಲ್ಲರಿಗೂ ಒಟ್ಟಿಗೆ ದಾನ ಕೊಡಲಾಗುತ್ತಿತ್ತು. ಕ್ರಿ.ಶ. ೧೧೨೧ರಲ್ಲಿ ಕಾಗಿನೆಲೆ ಕಾಳೇಶ್ವರ ದೇವಾಲಯದ ಕಂಬದ ಸೂಳೆಯರಿಗೆ ದತ್ತಿ ಕೊಟ್ಟಿದ್ದಾರೆ(SII. XVIII, 117). ಪ್ರಾಚೀನ ಕಾಲದ ದೇವಾಲಯಗಳಲ್ಲಿ ಕಂಬಗಳದ್ದೇ ಒಂದು ವಿಶೇಷ ದೇವಾಲಯದಲ್ಲಿ ಕಂಬಗಳನ್ನು ದಾನ ಮಾಡುತ್ತಿದ್ದರು. ಸಾಲೊಟಗಿ ಶಾಸನದಲ್ಲಿ ಕಂಬದಾನ ಮಾಡಿದ ಮಾಹಿತಿ ಇದೆ(EI. IV, p 63). ಇವು ವಿಶೇಷ ಕೆತ್ತನೆ ಮತ್ತು ಅಲಂಕಾರದಿಂದ ಕೂಡಿರುತ್ತವೆ. ಅಲ್ಲದೆ ದೇವಾಲಯದಲ್ಲಿ ವಿಶೇಷ ಆಕರ್ಷಣೆಗೊಳಪಡಿಸುವಂತಹವು. ಈ ಕಂಬಳಿಗೆ ಪೂಜೆ ಅಥವಾ ಇನ್ನಿತರ ವೇಳೆಯಲ್ಲಿ ಕಂಬಕ್ಕೊಬ್ಬರಂತೆ ಸೂಳೆಯರನ್ನು ನಿಲ್ಲಿಸಲಾಗುತ್ತಿತ್ತು. ಸೂಳೆಯರೂ ಕಂಬಗಳನ್ನು ನಿರ್ಮಿಸುತ್ತಿದ್ದರು. ಸೂಳೆ ಚಲಬ್ಬೆ ಬಿಜೇಶ್ವರದ ದೇವಾಲಯದ ಮೂರು ಕಂಬಗಳನ್ನು ಮಾಡಿಸಿದಂತೆ ಉಲ್ಲೇಖವಿದೆ(ಕ.ವಿ.ಶಾ. ಸಂಪುಟ-೯, ಬಾದಾಮಿ, ೯೮). ಕಂಬದ ಕೆತ್ತನೆಯ ನಯನಾಜೂಕಿಗೆ ತಕ್ಕಂತೆ ಅಲ್ಲಿ ಸೂಳೆಯರೂ ನಿಲ್ಲಬೇಕಿತ್ತು.

**ಪಾತ್ರದ ಸೂಳೆಯರು**

ದೊರೆತ ಶಾಸನಗಳಲ್ಲಿ ಕೆಲವನ್ನು ಹೊರತುಪಡಿಸಿ ಉಳಿದೆಲ್ಲವೂ ಪಾತ್ರ ಮತ್ತು ವೇಶ್ಯೆಯರಿಗೆ ಪ್ರತ್ಯೇಕ ದಾನಗಳನ್ನು ನೀಡಿರುವುದನ್ನೇ ದಾಖಲಿಸಿವೆ. ಪಾತರದವರು ವೇಶ್ಯೆಯರಿಗಿಂತ ಪ್ರತ್ಯೇಕವಾಗಿ ಗುರುತಿಸಲ್ಪಟ್ಟವರು. ಕ್ರಿ.ಶ. ೯೭೫ರ ಹೆಬ್ಬಾಳು ಶಾಸನದಲ್ಲಿ ಐವರು ಸೂಳೆಯರೊಂದಿಗೆ ಒಬ್ಬ ಪಾತರದವಳಿಗೆ ಬಿಟ್ಟ ದಾನ ಸೂಳೆಯರಿಂದ ಪಾತರದವರನ್ನು ಪ್ರತ್ಯೇಕಿಸಿ ತೋರಿಸುತ್ತದೆ.(EI. IV, p 50). ಸೂಳೆಯರಿಗಿಂತ ಪಾತರದವರ ಸಂಖ್ಯೆ ಕಡಿಮೆ ಇತ್ತು. ತ್ರಿಪುರಾಂತಕ ದೇವರ ಪಾತ್ರ ಸೂಳೆ ಪದುಮಾವತಿಯ ಹೆಸರಿದೆ ಮತ್ತು ಅಕ್ಕೇಶ್ವರ ದೇವಾಲಯದ ಬಲದ ದೆಸೆಯ ಪಾತ್ರಂ ಸೂಳೆ ವಕ್ಕಬ್ಬೆಗೆ... ಮ ೧೨, ಎಡದ ದೆಸೆಯ ಪಾತ್ರ ಸೂಳೆ ಗಾರ್ಗಬ್ಬೆಗೆ ಮ ೧೨ ಎಂದಿದೆ(EI. XV, p 82). ಪದುಮಾವತಿ ದೇವದಾಸಿಯೂ ಹೌದು ನರ್ತಕಿಯೂ ಹೌದು. ಸುಂದರವಾಗಿದ್ದು, ಸಂಗೀತ ನೃತ್ಯ ಬಲ್ಲ ಯಾರು ಬೇಕಾದವರು ಪಾತರದವರಾಗಬಹುದಿತ್ತು. ವೇಶ್ಯೆಯರು ಕೂಡ ಸಂಗೀತ ನೃತ್ಯ ಕಲಿತು ಪಾತರದವರಾಗಿರಬಹುದು. ಆದರೆ ಮೂಲತಃ ಅವರು ಆ ಜನಾಂಗದವರಲ್ಲ. ಹಾಗೆಯೇ ಎಲ್ಲ ಪಾತರದವರು ಸೂಳೆಯರಲ್ಲ. ಪಾತರದವರನ್ನು ದೇವಾಲಯದ ರಂಗಭೋಗದಿಂದ ಆಚೆ ಕರೆ ತಂದು ವೈಯಕ್ತಿಕವಾಗಿ ಬಳಕೆ ಮಾಡಿಕೊಂಡ ದರ್ಪಿಷ್ಟವರ್ಗ ಅವರನ್ನು ವೇಶ್ಯೆರನ್ನಾಗಿ ಮಾಡಿದರು.

ದೇವಾಲಯಗಳನ್ನು ಪ್ರವೇಶ ಮಾಡಿದರೆ ಎತ್ತ ನೋಡಿದರೂ ವೇಶ್ಯೆಯರೇ ಕಣ್ಣಿಗೆ ಬೀಳುವಂತೆ ವ್ಯವಸ್ಥೆ ಮಾಡಿಕೊಂಡಿದ್ದರು. ಕಂಬದ ಸೂಳೆಯರು, ಚಾಮರದ ಸೂಳೆಯರು, ಪಾತ್ರದ ಸೂಳೆಯರು, ಬಸರಾಳು ಶಾಸನದಲ್ಲಿ ದೇವರಾರತಿಯ ಸೂಳೆಯರಿಗೆ ಮ ೩ ಎಂದಿದೆ. ಅದೇ ಶಾಸನದಲ್ಲಿ ಮುಂದಿನ ಸಾಲಿನಲ್ಲಿ 'ದೇವರ ಭೋಗದ ನಾಗಾವಾಸದ ಜೀವಿತ ಮ ೩೦' ಎಂದಿದೆ(E.C. VII, ಮಂಡ್ಯ ೩೦). ನಂದವಾಡಗಿ ಶಾಸನದಲ್ಲಿ ರಂಗಭೋಗದ ಸೂಳೆ ನಾಲ್ವರ್,(ಕ.ವಿ.ಶಾ. ಸಂಪುಟ–೯, ಹುನುಗುಂದ ೧೨೨). ಭೋಗದ ಸೂಳೆಯರ್(SII. XX, 35). ಮಾಡದ ಸೂಳೆ ನಾಗಲತೆಗೆ ಮ ೧೨(SII. XVIII, 91). ರಂಗಭೋಗದಲ್ಲಿ ಹಾಡುವವರು ಇದ್ದರು. ಹಾಡುವ ಕಾಮವ್ವೆ ನಾಗವ್ವೆ(ಕ,ವಿ.ಶಾ. ಸಂಪುಟ–೧, ಹರಪನಹಳ್ಳಿ, ೯೯). ಹೀಗೆ ದೇವಾಲಯಗಳಲ್ಲಿ ಸೂಳೆಯರಿಗೆ ಅವರವೇ ಆದ ಕರ್ತವ್ಯಗಳಿಂದ ಅವರನ್ನು ಗುರುತಿಸಲಾಗಿದೆ. ಅವರವರ ಕೆಲಸಗಳನ್ನು ಅವರೇ ಸರದಿ ಪ್ರಕಾರ ಮಾಡುವ ವ್ಯವಸ್ಥೆ ಇದ್ದಿರಬೇಕು.

ಈ ಮೇಲೆ ಶಾಸನದಲ್ಲಿ ಉಲ್ಲೇಖಿಸಲಾದ ವೇಶ್ಯೆಯರಲ್ಲದೆ, ದೇವರ ಪೂಜಾ ಪರಿಕರಗಳನ್ನು ಶುಚಿಗೊಳಿಸುವವರು, ದೇವಾಲಯದ ಆವರಣ ಕಸ ಗೂಡಿಸುವವರು, ಓಲಗದ ಸೂಳೆಯರು, ಹೀಗೆ ದೇವಾಲಯದಲ್ಲಿ ಪ್ರತಿಯೊಂದು ಕಾರ್ಯಕ್ಕೂ ಸ್ತ್ರೀಯರನ್ನೇ ನೇಮಕ ಮಾಡಲಾಗುತ್ತಿತ್ತೆನ್ನುವುದು ಶಾಸನಗಳಿಂದಲೇ ನಮಗೆ ತಿಳಿದುಬರುತ್ತದೆ. ಸೇವೆ ಎನ್ನುವ ಎಲ್ಲ ಕೆಲಸವನ್ನು ವೇಶ್ಯೆಯರಿಂದಲೇ ಮಾಡಿಸಲಾಗುತ್ತಿತ್ತು. ಆದರೆ ಗರ್ಭಗುಡಿಯಲ್ಲಿ ದೇವರ ಪೂಜೆ ಮಾಡುವವರು ಮಾತ್ರ ಪೂಜಾರಿಗಳಾಗಿದ್ದರು. ದೇವಾಲಯದ ಆವರಣವೆಲ್ಲ ವೇಶ್ಯೆಯರಿಂದಲೇ ತುಂಬಿದ್ದರೆ ಅಂಗಭೋಗ ಮಾತ್ರ ಪ್ರವೇಶಕ್ಕೆ ನಿಷಿದ್ಧವಾಗಿತ್ತು. ದೇವರು ಅವ್ಯಕ್ತವಾಗಿ ಸೇವೆಯನ್ನು ಪಡೆಯುತ್ತಾನೆ ಎಂದು ನಂಬಿಸಿ ತಾವು ಅವರಿಂದ ಸೇವೆಯನ್ನು ಪಡೆಯುತ್ತಿರಬಹುದು. ನಮ್ಮ ಜನರಲ್ಲಿ ಪೂಜಾರಿಗಳ ಬಗ್ಗೆ ಒಂದು ರೀತಿಯ ಭಯ ಮತ್ತು ಗೌರವದ ಭಾವನೆ ಇದೆ. ಕಾರಣವೆಂದರೆ ದೇವರಿಗೂ ಪೂಜಾರಿಗೂ ಹತ್ತಿರದ ಸಂಬಂಧವಿದೆ, ಪೂಜಾರಿಗಳನ್ನು ದೇವರು ಸೃಷ್ಟಿಸಿರುವನು ದೇವರ ಮಗನಂತೆ ಎಂದೇ ಭಾವಿಸಿರುವರು. ದೇವರು ಅವರ ಮೈಯಲ್ಲಿ ಆವಿರ್ಭವಿಸುವನು, ಆತನ ಮೂಲಕ ದೇವರೆ ಆಜ್ಞೆ ಮಾಡುತ್ತಾನೆ, ತನ್ನ ಬೇಡಿಕೆಗಳನ್ನು ಆತನ ಮೂಲಕವೇ ಈಡೇರಿಸಿಕೊಳ್ಳುತ್ತಾನೆ. ಆತನಿಗೆ ತಮ್ಮನ್ನು ಅರ್ಪಸಿಕೊಂಡರೆ ಆ ದೇವರಿಗೆ ಅರ್ಪಿಸಿಕೊಂಡಂತೆ. ಆತನಿಗೆ ಪ್ರೀತ್ಯರ್ಥವಾದರೆ, ಆ ದೇವರಿಗೆ ಪ್ರೀತ್ಯರ್ಥವಾದಂತೆ. ಆತನ ಕೃಪೆ ತಮ್ಮ ಮೇಲೆ ಬಿದ್ದಿದೆ ಎಂದರೆ ಅನ್ಯಥಾ ಯೋಚಿಸುವಂತೆಯೇ ಇಲ್ಲ. ಇದಕ್ಕೆ ತಾವೇ ಮುಂದಾಗಿ ದೈಹಿಕವಾಗಿ ತಮ್ಮನ್ನು ಅರ್ಪಿಸಿಕೊಳ್ಳುತ್ತಿದ್ದರು. ಅಂಥ ಆಲೋಚನಾರಹಿತ, ಪ್ರಶ್ನಾತೀತ ವಾತಾವರಣವನ್ನು ಸೃಷ್ಟಿಸುತ್ತಿದ್ದರು ಎಂದು ಹೇಳಬಹುದು. ಇಲ್ಲವಾದಲ್ಲಿ ಅಷ್ಟೊಂದು ವೇಶ್ಯೆಯರಿಂದ ತುಂಬಿದ ದೇವಾಲಯುಗಳು, ಸಮಾಜದಿಂದ ನಿರಾತಂಕವಾಗಿರುತ್ತಿರಲಿಲ್ಲ. ದೇವರ ಕೃಪೆಗೆ

ಒಳಗಾಗುತ್ತೇವೆಂದರೆ ಇಂಥ ಸಂಪ್ರದಾಯಗಳ ವಿರುದ್ಧ ಪ್ರಶ್ನೆಯೇ ಉದ್ಭವವಾಗವುದಿಲ್ಲ. ದೇವಾಲಯದ ಅಂಗಭೋಗಕ್ಕೆ ವೇಶ್ಯೆಯರ ಪ್ರವೇಶ ನಿಷಿದ್ಧವಾಗಿತ್ತು. ಅಂಗಭೋಗ ದೇವರಿಗೆ ಸಂಬಂಧಿಸಿದ ಬೆಲೆಬಾಳುವ ಆಭರಣ ಮತ್ತು ಸಂಪತ್ತಿನಿಂದ ತುಂಬಿರುತ್ತಿದ್ದವು. ಈಗಲೂ ಹೆಚ್ಚಿನ ಸಂಖ್ಯೆಯ ಪ್ರಖ್ಯಾತ ದೇವಾಲಯಗಳು ಸಂಪತ್ತಿನ ಆಗರಗಳಾಗಿವೆ. ಕೇರಳದ ಅನಂತಶಯನ ಪದ್ಮನಾಭ ದೇವಾಲಯ ಇದೇ ವಿಷಯಕ್ಕೆ ವಿವಾದ ಸೃಷ್ಟಿಸಿತ್ತು. ಆಂದ್ರ ಪ್ರದೇಶದ ತಿರುಪತಿ ವೆಂಕಟರಮಣ ಶ್ರೀಮಂತ ದೇವರೆನಿಸಿಕೊಂಡಿದೆ. ಈ ರೀತಿ ರಾಜಕೀಯ ಶಕ್ತಿಗಳ ಮತ್ತು ಶ್ರೀಮಂತರಿಂದ ಹರಿದುಬಂದ ಸಂಪತ್ತೆಲ್ಲ ಗರ್ಭಗೃಹದ ಗುಪ್ತವಾದ ಸ್ಥಳದಲ್ಲೇ ಇರಿಸಲಾಗುತ್ತದೆ. ಸಾರ್ವಜನಿಕರಿಗೆ ಆಪತ್ತಿನ ಭಯ ಹುಟ್ಟಿಸಿ ಪ್ರವೇಶವನ್ನು ತಾವೇ ನಿರಾಕರಿಸುವಂತೆ ಮಾಡಿರುತ್ತಾರೆ. ಸ್ತ್ರೀಯರಿಗೆ ಪಾವಿತ್ರ್ಯತೆ ನೆಪದಿಂದ ಪ್ರವೇಶ ನಿಷೇಧಿಸುತ್ತಾರೆ. ವೇಶ್ಯೆಯರನ್ನು ಹೊರತುಪಡಿಸಿ ಮೇಲ್ವರ್ಗದ ಸ್ತ್ರೀಯರಿಗೂ ಗರ್ಭಗೃಹಕ್ಕೆ ಪ್ರವೇಶವಿಲ್ಲ. ಪ್ರಸ್ತುತ ಕಾಲದಲ್ಲಿಯೂ ಅದೇ ನಿಯಮ ಮುಂದುವರಿದಿದೆ. ಕೆಲವು ದೇವಾಲಯಗಳಲ್ಲಿ ಪ್ರವೇಶವನ್ನೇ ನಿಷೇಧ ಮಾಡಲಾಗಿದೆ.

ಸೇವೆಯನ್ನು ಮಾಡುವ ಜಾಗದಲ್ಲಿ ಸ್ರೀಯರನ್ನು, ಅನುಭೋಗಿಸುವ ಸ್ಥಾನದಲ್ಲಿ ಪುರುಷರನ್ನು ಇರಿಸಲಾಗಿದೆ. ದೇವಾಲಯ ಒಂದು ಧಾರ್ಮಿಕ ಕೇಂದ್ರ. ಧರ್ಮವನ್ನು ಹೊರತು ಸಮಾಜ ಹೊಂದಿದೆ. ಅಂಥ ಸಮಾಜದಲ್ಲಿ ಸಾರ್ವಜನಿಕ ಕಾರ್ಯಕ್ಕೆ ಉಪಯೋಗವಾಗುವಂಥ ಸೇವೆಯನ್ನು ಮಾಡುವ ಬಗ್ಗೆ ಯೋಚಿಸಿದೆ. ಧಾರ್ಮಿಕ ಸೇವೆಯ ಬಗ್ಗೆ ಹೆಚ್ಚು ಆಸಕ್ತಿ ವಹಿಸಿರುವುದು ಸ್ವಾರ್ಥ ಹಿತಾಸಕ್ತಿಗಾಗಿ ಎಂಬುದರಲ್ಲಿ ಅನುಮಾನವೇ ಇಲ್ಲ ಎನಿಸುತ್ತದೆ. ದೇವಾಲಯಗಳಿಗೆ ಹರಿದು ಬಂದಷ್ಟು ದಾನದತ್ತಿಗಳು ಸಾರ್ವಜನಿಕ ಕಾರ್ಯಕ್ಕೆ ಹೋಗಿಲ್ಲವೆಂದರೆ ಆಶ್ಚರ್ಯವೇನಿಲ್ಲ. ಉಳ್ಳವರು ದೇವಾಲಯದಲ್ಲಿರುವ ವೇಶ್ಯೆಯರನ್ನು ಪೋಷಿಸಿರುವರು. ಅಂಗಭೋಗ ರಂಗಭೋಗಕ್ಕೆ ಕ್ರಮಾನುಗತವಾಗಿ ತಪ್ಪದೆ ದಾನ ನೀಡಲಾಗಿದೆ. ಒಂದಕ್ಕೆ ನೀಡುವ ದಾನ ಪಾಪ ಕರ್ಮಗಳನ್ನು ಮಾಡುವುದಕ್ಕಾಗಿ, ಮತ್ತೊಂದಕ್ಕೆ ನೀಡಿದ ದಾನ ಮಾಡಿದ ಪಾಪ ಕರ್ಮಗಳನ್ನು ಕಳೆದು(ದೇವರು) ಒಳಿತು ಸಂಭವಿಸುವಂತೆ ಮಾಡಲಿ ಎನ್ನುವ ಕಾರಣಕ್ಕೆ ದಾನ ನೀಡಲಾಗಿದೆ.

ಪುರುಷರಿಂದ ಏಕೆ ಸೇವೆಯನ್ನು ಪಡೆದುಕೊಳ್ಳುವುದಿಲ್ಲವೆಂದರೆ ದೇವರು, ಸ್ತ್ರೀಯರಿಂದಲೇ ಸೇವೆ ಪಡೆಯ ಬಯಸುವುದಾದರೆ, ವಿವಾಹವಾದ ಹೆಣ್ಣುಮಕ್ಕಳ ಸೇವೆಯನ್ನೇಕೆ ಸ್ವೀಕರಿಸಲಿಲ್ಲ, ಅಸಂಖ್ಯಾತ, ಅವಿವಾಹಿತ, ಕಲಾನೈಪುಣ್ಯರಾದ ಸುಂದರಿಯರೇ ಏಕೆ ಬೇಕೆಂದ? ಭಗವಂತನಿಗೆ ಸುರೂಪಿ, ಕುರೂಪಿ ಎಂಬ ಭೇದಗುಣವಿದೆಯೆ? ಭಗವಂತನಿಗೆ ಪ್ರಿಯವಾದ ಅವರು ಸಮಾಜಕ್ಕೆ ಏಕೆ ಪ್ರಿಯವಾಗಲಿಲ್ಲ? ಸಮಾಜದಿಂದ ಅಂದರೆ ಗೃಹಸ್ಥರು ವಾಸಿಸುವ ಕುಟುಂಬಗಳಿಂದ ಅವರನ್ನು ಪ್ರತ್ಯೇಕವಾಗಿ(ಸೂಳೆಗೇರಿ) ಇರಿಸಿದ್ದೇಕೆ? ಇದೆಲ್ಲ ಆರ್ಥಿಕ ಪ್ರಭುತ್ವವಾದಿಗಳು ತಮ್ಮ ಸ್ವಾರ್ಥಕ್ಕೆ ಮಾಡಿಕೊಂಡ ನಿಯಮಗಳು.

ದೇವಾಲಯಗಳಿಗೆ ತಮ್ಮ ಜೀವವನ್ನು ಮುಡುಪಾಗಿಟ್ಟ ವೇಶ್ಯೆಯರಿಗೆ ಕೌಟುಂಬಿಕ ಬಂಧನಗಳು ಇರದೇ ಹೋದರೂ ಸಾಮಾಜಿಕ ಬಂಧನಕ್ಕೆ ಒಳಗಾಗಿದ್ದರು. ಅವರು ಮಾಡುವ ಸೇವಾವೃತ್ತಿಗೆ ಸಂಬಳವಿರದೇ ಹೋದರೂ ದಾನದ ರೂಪದಲ್ಲಿ ಇಂತಿಷ್ಟೆಂದು ಕೊಡಲಾಗುತ್ತಿತ್ತು. ಕೊಟ್ಟಿದ್ದು ದಾನವಾದರೂ ಅದರ ಮೇಲೆ ಅಧಿಕಾರ ಹೊಂದಿದ್ದರು. ತಾವು ನೀಡಿದ ದಾನಕ್ಕೆ ಸೇವೆ ಕಡ್ಡಾಯವಾಗಿ ಬಯಸುತ್ತಿದ್ದರು. ಕಳ್ಳಿಹಾಳ ಶಾಸನ ಬನವಾಸಿ ೧೨೦೦೦ ಆಳುತ್ತಿದ್ದ ಕುಂದರಾಜನ ಪತ್ನಿ ಜೋಗಬ್ಬೆ ಸಹದೇವೇಶ್ವರ ದೇವರಿಗೆ ಗದ್ದೆ ತೋಟ ಬಿಡುತ್ತಾಳೆ. ಅದೇ ಶಾಸನದಲ್ಲಿ ಸಹದೇವಯ್ಯನು ದೇವಸ್ಥಾನಕ್ಕೆ ನಾಲ್ಕು ಜನ ಸೂಳೆಯರನ್ನು ಬಿಟ್ಟು ಅವರಿಗೆ ದತ್ತಿ ಕೊಟ್ಟು 'ಅವರಿಗೆ ಎಲ್ಲಿಗೂ ಪೋಗಲಾಗದು' ಎಂದು ಕರಾರು ಹಾಕಿದ್ದಾನೆ. ಅಂದು ಕೊಟ್ಟ ದಾನಕ್ಕೆ ಅವರು ಕಡ್ಡಾಯವಾಗಿ ಸೇವೆ ಸಲ್ಲಿಸಬೇಕಿತ್ತು. ಹಾಗಾದರೆ ಈ ವೃತ್ತಿವಿರೋಧಿಸುವ ಧ್ವನಿ ಆ ಕಾಲಕ್ಕಿತ್ತೆನ್ನಬಹುದು.

ಕಳ್ಳಿಹಾಳ ಶಾಸನದಲ್ಲಿ ಧರ್ಮಾಮನೋ ಹಲೆಯಾ[ಯೊ]ಬ್ಬೆ ಯೊಕ್ಕಲು ರಾಜಂಬೆಯೊಕ್ಕಲು ಕಾದಂಬೆಯೊಕ್ಕಲು ಇನ್ತೀ ನಾಲ್ವರ್ ಸೂಳೆಯರು ಮೆಲ್ಲಿ[ಗಂ] ಪೋಗಲಾಗದು ಅದಾ ಪದ್ಧತಿ ಕಾಳಬ್ಬೆಗೆ(SII. XVIII, 44). ಈ ಶಾಸನವನ್ನು ಅಧ್ಯಯನ ಮಾಡಿದಾಗ ಎಲ್ಲೋ ಒಂದು ಕಡೆ ಮಹಿಳೆಯರಿಗೆ ವೇಶ್ಯೆಯರಾಗುವುದಕ್ಕೆ ವಿರೋಧವಿತ್ತೆನಿಸುತ್ತದೆ. ಸುಂದರವಾಗಿರುವ ಕಾರಣಕ್ಕೆ ಒತ್ತಾಯದಿಂದ ಅವರನ್ನು ವೇಶ್ಯೆಯರನ್ನಾಗಿ ಮಾಡಿದ್ದರೆ, ಅವರಿಗೆ ಇಚ್ಛೆಯಿಲ್ಲದಿರುವುದರಿಂದ ಒಂದು ವೇಳೆ ತಪ್ಪಿಸಿಕೊಂಡು ಅಲ್ಲಿಂದ ಹೋಗಬಹುದು ಎಂಬ ಕಾರಣದಿಂದ 'ಪೋಗಲಾಗದು' ಎಂದು ಕರಾರು ಹಾಕಿದಂತಿದೆ. ಎಲ್ಲರೂ ವೇಶ್ಯೆ ವೃತ್ತಿ ಮಾಡುವುದಕ್ಕೆ ತಮ್ಮಿಚ್ಛೆಯಿಂದ ಒಪ್ಪುತ್ತಿರಲಿಲ್ಲವೆನಿಸುತ್ತದೆ. ಈ ಪದ್ಧತಿ ಕುರಿತು ಎಲ್ಲೋ ಒಂದು ಕಡೆ ಪ್ರತಿಭಟನಾತ್ಮಕ ಧೋರಣೆ ತಲೆ ಎತ್ತಿರಬಹುದು ಎಂದೆನಿಸದೆ ಇರದು. ಬಲವಂತವಾಗಿಯೂ ವೇಶ್ಯೆಯರನ್ನಾಗಿ ಮಾಡುತ್ತಿರಬಹುದೆನಿಸುತ್ತದೆ. ಯಾವುದೇ ಮಹಿಳೆಗಾಗಲಿ ಅವಳಿಗೆ ತನ್ನದೊಂದು ಗುರುತಿಸುವಿಕೆ ಬೇಕೆನಿಸದೆ ಇರದು. ಅವಳು ಸಮಾಜದಲ್ಲಿ ಎಲ್ಲ ಗೃಹಸ್ಥೆಯಂತೆ ಗೌರವಯುತವಾಗಿ ಬದುಕಬೇಕೆಂಬುದು ಸ್ತ್ರೀ ಸಹಜಗುಣವಾಗಿರುತ್ತದೆ.

ರಾಜರು ವೇಶ್ಯೆಯರೊಂದಿಗೆ ಸಂಬಂಧ ಹೊಂದಿದ್ದರು. ರಾಜನದು ವಿವಾಹಬಾಹಿರ ಸಂಬಂಧವಾದರೂ ವೇಶ್ಯೆಯರು ಅವರೊಂದಿಗೆ ಮಾತ್ರ ನಿಷ್ಠೆಯಿಂದ ಕೊನೆಯವರೆಗೂ ಇರುತ್ತಿದ್ದರು. ಅವರದು ಸತಿಯ ಸ್ಥಾನವಲ್ಲ. ಆದರೂ ಸತಿಧರ್ಮ ನಿಭಾಯಿಸುತ್ತಿದ್ದರೆನ್ನುವುದು ಅವರ ಬಗ್ಗೆ ಹೆಗ್ಗಳಿಕೆ ಅನಿಸುತ್ತದೆ. ಅನೇಕ ದೊರೆಗಳು ವೇಶ್ಯೆಯರನ್ನು ಹೊಂದಿರಬಹುದು. ಆದರೆ ಶಾಸನದಲ್ಲಿ ಉಲ್ಲೇಖಿಸಲಾಗಿರುವುದು ಕೆಲವರನ್ನು ಮಾತ್ರ. ರಾಜರು ವೇಶ್ಯೆಯರೊಂದಿಗೆ ಹೊಂದಿದ್ದ ಸಂಬಂಧವನ್ನು ಬಹಿರಂಗವಾಗಿ ಉಲ್ಲೇಖಿಸುವಂತಿಲ್ಲವಾದ್ದರಿಂದ ಅವು ಬೆಳಕಿಗೆ ಬಂದಿಲ್ಲವೆನ್ನಬಹುದು. ಹಾಗೆ ದೊರೆತ ಶಾಸನಗಳು ವಿರಳ. ಕ್ರಿ.ಶ. ೬೫೫–೬೫೯ರಲ್ಲಿ

ಎರಡನೇ ಪುಲಿಕೇಶಿಯ ಹಿರಿಯ ಮಗ ಚಂದ್ರಾದಿತ್ಯನ ಕೊಚ್ರೆ ತಾಮ್ರಪಟ "ಚಂದ್ರಾದಿತ್ಯ ಪೃಥ್ವಿವಲ್ಲಭ ಮಹರಾಜಾಧಿರಾಜಸ್ಯ ಪ್ರಯಮಹಿಷಿ ಶ್ರೀವಿಜಯಾಮಹಾದೇವಿ ಬೊಡ್ಡಿ" ಎಂಬ ಉಲ್ಲೇಖ ಆಕೆಯ ಗುಣ ಸೌಂದರ್ಯ ಮೆಚ್ಚಿ ಚಂದ್ರಾದಿತ್ಯ ಮದುವೆಯಾಗಿರಬಹುದು. ಅಲ್ಲದೆ ಆಕೆ ಪ್ರಿಯಮಹಿಷಿ ಆಗಿದ್ದಳೆಂದು ಹೇಳಲಾಗಿದೆ(ಚೆನ್ನಕ್ಕ ಎಲಿಗಾರ; ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪುಟ ೪೯).

ಮಹಾಕೂಟ ಶಾಸನ ಕ್ರಿ.ಶ. ೭೩೩ರ "ವಿನಯಾದಿತ್ಯ ಸತ್ಯಾಶ್ರಯ ಶ್ರೀ ಪೃಥ್ವಿವಲ್ಲಭ, ಮಹಾರಾಜಾಧಿರಾಜ, ರಾಜ ಪರಮೇಶ್ವರ, ಭಟ್ಟಾರರ ಪ್ರಾಣವಲ್ಲಭೆ ವಿನಾಪೊಟಿಗೆಳೆನ್ನೊವರು ಸೂಳೆಯರು(ಕ.ವಿ.ಶಾ. ಸಂಪುಟ–೯, ಬಾದಾಮಿ, ೯೮). ಈ ಶಾಸನದಲ್ಲಿ ಈಕೆ ತನ್ನ ಪೂರ್ವಜರು ಸೂಳೆಯರಾಗಿದ್ದರೆಂದು ಹೇಳಿಕೊಂಡಿದ್ದಾಳೆ. ತಾಯಿ ಕುಚಿಪೊಟಿ, ಅಜ್ಜಿ ರೇವಮಞ್ಚ, ವಿನ್‌ಪೊಟಿಯ ತಾಯಿ ಮತ್ತು ಅಜ್ಜಿಯರಿಬ್ಬರು ರಾಜ್ಯ ವೇಶ್ಯೆಯರು ಆಗಿದ್ದರೇ ಇಲ್ಲವೇ? ಎಂಬುದು ಉಲ್ಲೇಖವಿಲ್ಲ. ತಾವು ವೇಶ್ಯೆಯರೆಂದು ಶಾಸನಗಳಲ್ಲಿ ದಾಖಲಿಸುವಲ್ಲಿ ಅವರಿಗೆ ಅಗೌರವವೆನಿಸಿಲ್ಲ. ಸಾಮಾಜಿಕವಾಗಿ ತಮ್ಮನ್ನು ಗುರುತಿಸಿಕೊಂಡಿದ್ದಾಳೆ. ವೇಶ್ಯೆಯರು ರಾಜರ ಅತ್ಯಂತ ಖಾಸಗಿ ವಿಚಾರವಾಗಿರುತ್ತಾರೆ. ಆಕೆ ತನ್ನ ವಂಶದವರ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡಿದ್ದಾಳೆ. ಆ ಕಾಲಕ್ಕೆ ವೇಶ್ಯೆಯರ ಬಗ್ಗೆ ಗೌರವವಿತ್ತೆಂದು ತೋರುತ್ತದೆ. ವಿನಾಪೊಟಿ ಒಬ್ಬಳೇ ರಾಜಮನೆತನಕ್ಕೆ ಸಂಬಂಧಿಸಿದ ಸೂಳೆಯಾಗಿದ್ದರೆ ರಾಜವೇಶ್ಯೆ ಎಂಬ ವಂಶಪಾರಂಪರಿಕ ಹೆಸರು ಬಂದಂತೆ ಬರುತ್ತಿರಲಿಲ್ಲ. ಇವರೆಲ್ಲ ರಾಜಮನೆತನಕ್ಕೆ ಮಾತ್ರ ಮೀಸಲಾದವರಾಗಿರಬಹುದು.

ಕ್ರಿ.ಶ. ೮೪೬ರ ನೀತಿಮಾರ್ಗ ಪೆರ್ಮಾಡಿಗಳ ಸೂಳೆ ಜೋಗಬ್ಬೆಯ ಉಲ್ಲೇಖ ಚಾಮರಾಜನಗರ ತಾಲೂಕಿನ ಹಗ್ಗೋಟ ಗ್ರಾಮದ ಶಾಸನದಲ್ಲಿದೆ(ಚೆನ್ನಕ್ಕ ಪಾವಟೆ; ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪುಟ ೫೦) ಕ್ರಿ.ಶ. ೮೮೮ರ ಶಾಸನ ಮಯ್ದುಮರಸನ ಸೂಳೆ ಕಾಡಬ್ಬೆಯ ವಂಶಸ್ಥನಾದ ಪರಕಯ್ಯನ್ನನ್ನು ಉಲ್ಲೇಖಿಸುತ್ತದೆ. 'ಮಯ್ದುಮರಸನ ಸೂಳೆ ಕಾಡಬ್ಬೆ, ಕಡಬ್ಬೆಯ ಮಗಳಯ್ವಬ್ಬೆ, ಅಯ್ವಬ್ಬೆಯ ಮಗಳ್ ಕಳಿಂಗಬ್ಬೆ, ಕಳಿಂಗಬ್ಬೆಗಳಯ್ಯ ಪಲ್ಲಹಾರತಿ ಪರಕಿಯ ಮಗಳ್ ಕಳಿಂಗಬ್ಬೆ ಕಳಿಂಗಬ್ಬೆಯ ಮಗಂ ಪರಕಯ್ಯನಿತ್ತು ವಂಶಪರಂಪರ್ಯಾಯೆಮೆಡವರಿಯದೆ ಬನ್ದ ಧರ್ಮಸನ್ತತಿ,(E.C. XI (ರೈ), ದಾವಣಗೆರೆ ೧೭). ಇವರು ವಂಶಪರಂಪರೆಯಾಗಿ ತಮ್ಮ ವಂಶವನ್ನು ಹೇಳಿಕೊಂಡಿದ್ದಾರೆ. ರಾಜವೇಶ್ಯೆಯರಿಗೆ ಹೆಣ್ಣುಮಕ್ಕಳು ಜನಿಸಿದರೆ ಅದೇ ವೃತ್ತಿಯನ್ನು ಮುಂದುವರಿಸುತ್ತಾರೆ. ಒಂದು ವೇಳೆ ಗಂಡುಮಗು ಜನಿಸಿದರೆ ರಾಜರು ರಾಜ್ಯದ ಸೈನ್ಯದಲ್ಲಿ ಸೈನಿಕ ಅಥವಾ ಇನ್ನಾವುದಾದರೂ ಹುದ್ದೆಯನ್ನು ಕೊಡುತ್ತಿದ್ದರು. ೯ನೇ ಶತಮಾನದ ಬೇವಿನಕುಪ್ಪೆ ಶಾಸನದಲ್ಲಿ ಈ ಬಗ್ಗೆ ಉಲ್ಲೇಖವಿದೆ. ಪೃಥ್ವುವೀ ಗಂಗನ ಸೂಳೆ ಬೀರಕ್ಕನ ಮಗ ಎಱಕಳಿಂಗನ ನೆನಪಿಗೆ ನಿರ್ಮಿಸಿದ ವೀರಗಲ್ಲು (E.C. III, ಫ್ರೆಂಚ್‌ರಾಕ್ಸ್ ೨೫೩). ಎರೆಕಳಿಂಗನು ಸೈನ್ಯದಲ್ಲಿ ಯೋಧನಾಗಿರಬೇಕು. ಯಾವುದೋ

ಯುದ್ಧದಲ್ಲಿ ಮಡಿದಾಗ ಆತನ ನೆನಪಿಗೆ ವೀರಗಲ್ಲು ಇರಿಸಲಾಗಿದೆ. ಅಂದರೆ ಹತ್ತನೇ ಶತಮಾನಕ್ಕಿಂತ ಮೊದಲು ವೇಶ್ಯೆಯರನ್ನು ಅಲ್ಲ, ಅವರ ಮಕ್ಕಳನ್ನು ಗೌರವಿಸುತ್ತಿದ್ದರು. ಸಮಾಜದಲ್ಲಿ ವೇಶ್ಯೆಯರನ್ನಾಗಲಿ ಅವರ ಮಕ್ಕಳನ್ನಾಗಲಿ ಕುರಿತು ಹೀನ ಎಂಬ ಭಾವನೆ ತಳೆಯುವಷ್ಟು ಕೀಳುಮಟ್ಟಕ್ಕೆ ಅವರ ಸ್ಥಾನ ಕುಸಿದಿರಲಿಲ್ಲ.

**ವೇಶ್ಯೆಯರ ಸ್ಥಾನ ಕುಸಿದದ್ದು**

ಹನ್ನೆರಡನೇ ಶತಮಾನದಿಂದ ಮುಂದೆ ಬರುವ ಕಾಲಾವಧಿಯಲ್ಲಿ ನಮಗೆ ರಾಜವೇಶ್ಯೆಯರ ಬಗ್ಗೆ ಅಷ್ಟಾಗಿ ಮಾಹಿತಿ ದೊರೆತಿಲ್ಲ. ಅವರು ನೀಡಿದ ದಾನಗಳ ಬಗ್ಗೆ ಹಿಂದಿನವರು ಹೇಳಿಕೊಂಡಂತೆ ಹೇಳಿಕೊಂಡಿಲ್ಲ. ಹಾಗೆಂದು ಮುಂದೆ ಬರುವ ರಾಜರು ವೇಶ್ಯೆಯರನ್ನು ಹೊಂದಿರಲಿಲ್ಲವೆಂದಲ್ಲ. ದಾಖಲಿಸುವಷ್ಟು ಅವರ ಸಂಬಂಧಗಳು ಪವಿತ್ರವಾಗಿ ಉಳಿದಿರಲಿಲ್ಲವೆನ್ನಬಹುದು. ಮುಖ್ಯವಾದುದು ಮಾತ್ರ ದಾಖಲೆಯಾಗುತ್ತದೆ. ವೇಶ್ಯೆಯರ ಸಂಖ್ಯೆ ಹೆಚ್ಚಿದಂತೆಲ್ಲ ಅವರ ಸ್ಥಾನ ಕುಸಿದು ಪ್ರಾಮುಖ್ಯತೆಯನ್ನು ಕಳೆದುಕೊಂಡು ಅವರು ಸಮಾಜದಿಂದ ತಿರಸ್ಕೃತರಾಗಿ ಮರೆಯಲ್ಲಿ ಬದುಕಬೇಕಾಯಿತು. ರಾಜ್ಯದಲ್ಲಿ ಪ್ರಮುಖ ದೇವಾಲಯಗಳಿರುವೆಡೆಯೆಲ್ಲ ವೇಶ್ಯೆಯರಿಂದ ತುಂಬಿದ ಕೇರಿಗಳು ನಿರ್ಮಾಣವಾದವು. ದೇವಾಲಯದ ಗೋಡೆಗಳು, ಕಂಬಗಳು, ಎಲ್ಲೆಲ್ಲೂ ಪಾತರದವರು, ಸೂಳೆಯರಿಂದ ಅಲಂಕೃತಗೊಂಡವು. ಹೀಗಿರುವಾಗ ವೇಶ್ಯೆಯರನ್ನು ಹೊಂದುವುದು ಗುಪ್ತವಾಗಿ ಉಳಿದಿರಬಹುದು. ೧೫ನೇ ಶತಮಾನದಲ್ಲಿ ಕೃಷ್ಣದೇವರಾಯ ವೇಶ್ಯೆಯೊಬ್ಬಳನ್ನು ಪ್ರೀತಿಸಿದ್ದನೆಂದು ಹೇಳಲಾಗುತ್ತದೆಯಾದರೂ ಶಾಸನಗಳಲ್ಲಿ ಉಲ್ಲೇಖವಾಗಿಲ್ಲ. ಇದು ವಿದೇಶಿ ಬರಹಗಾರರಿಂದ ತಿಳಿದುಬರುತ್ತದೆ. 'ರಾಜನು ಯುವಕನಾಗಿದ್ದಾಗ ಒಬ್ಬ ವೇಶ್ಯೆಯ ಸಂಗ ಮಾಡಿದ್ದ (ಚಿನ್ನಾದೇವಿ). ಮದುವೆಯಾಗುವುದಾಗಿ ವಾಗ್ದಾದ ಮಾಡಿ ಅದರಂತೆ ಮದುವೆಯಾಗಿದ್ದ'(ನಾಗೇಗೌಡ ಎಚ್. ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೩೩೬). ನೂನಿಜ್ ತನ್ನ ವರದಿಯಲ್ಲಿ ಕೃಷ್ಣದೇವರಾಯನ ಬಗ್ಗೆ ಹೀಗೆ ಹೇಳಿದ್ದಾನೆ 'ದೊರೆಯಾಗುವುದಕ್ಕಿಂತ ಮುಂಚೆ ಚಿನ್ನಾದೇವಿ(ವೇಶ್ಯೆ)ಯನ್ನು ಮದುವೆ ವಾಗ್ದಾನ ಮಾಡಿದ್ದ. ರಾಜನಾದ ಮೇಲೆ ಪಾಲಿಸುವುದು ಕಷ್ಟವಾಯಿತು. ನಂತರ ಸಾಳುವ ತಿಮ್ಮ, ನರಸಿಂಗ ರಾಜ್ಯದ ಸುಂದರಿಯೊಂದಿಗೆ ಮದುವೆ ಮಾಡಿದ. ಆಕೆಯನ್ನು ಒಂದು ಮನೆಯಲ್ಲಿಟ್ಟ. ಆ ಮನೆಗೆ ಸೇರಿದಂತೆ ಎತ್ತರವಾದ ದೊಡ್ಡದಾದ ಗೋಪುರ ಕಟ್ಟಿಸಿ ಅದರಲ್ಲಿ ಈ ವೇಶ್ಯೆಯನ್ನಿಟ್ಟ. ಆ ಮೇಲೆ ರಾಜ ಅನೇಕ ರಾಜಕುಮಾರಿಯರನ್ನು ಮದುವೆಯಾದ'(ನಾಗೇಗೌಡ ಎಚ್.ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೩೮೦). ವಿದೇಶಿ ಪ್ರವಾಸಿಗರು ಕೃಷ್ಣದೇವರಾಯನ ಬಗ್ಗೆ ಪ್ರತ್ಯಕ್ಷವಾಗಿ ಕಂಡಂತೆ ವರದಿ ನೀಡಿದ್ದಾರೆ. ಆದರೆ ಇಡೀ ವರದಿಯನ್ನೇ ಬುಡಮೇಲು ಮಾಡುವಂತೆ ಶಾಸನೋಕ್ತ ವರದಿ ಉಲ್ಲೇಖವಾಗಿದೆ. ಕಾಮಿಡಿಹಳ್ಳಿ ಶಾಸನದ ಪ್ರಕಾರ ರಾಣಿ ಚಿನ್ನಾದೇವಿ ವೀರಪ್ಪೊಡೆಯರ್ ಮಗಳೆಂದು ಚಿಕ್ಕನಾಯಕರ ಮೊಮ್ಮಗಳೆಂದು

ತಿಳಿದುಬರುತ್ತದೆ. ವೀರಪ್ಪೊಡೆಯರ್ ನಾಗಮಂಗಲ ಸ್ಥಳವನ್ನು ಆಳುತ್ತಿದ್ದು ಈ ಮಾಹಿತಿಯನ್ವಯ ಈಕೆ ಮೂಲತಹ ವೇಶ್ಯೆಯರ ಕುಟುಂಬಕ್ಕೆ ಸೇರಿದವಳಲ್ಲವೆಂದು ಹೇಳಬಹುದಾಗಿದೆ (ಪರಮಶಿವಮೂರ್ತಿ ಡಿ. ವಿ.; ಕೃಷ್ಣದೇವರಾಯನ ಶಾಸನಗಳು, ಪುಟ ೨೩).

ಕ್ರಿ.ಶ. ಏಳು ಮತ್ತು ಎಂಟನೇ ಶತಮಾನದಲ್ಲಿ ರಾಜವೇಶ್ಯೆಯರೆಂದು ರಾಜರೊಂದಿಗೆ ಗುರುತಿಸಿಕೊಂಡಿದ್ದ ಮತ್ತು ಸುಂದರ ಮತ್ತು ವೈಭವೋಪೇತ ಕೇರಿಗಳಲ್ಲಿ ಗೌರವದೊಂದಿಗೆ ಜೀವಿಸುತ್ತಿದ್ದ ವೇಶ್ಯೆಯರಿಗೆ ಹದಿನೈದನೇ ಶತಮಾನದ ಹೊತ್ತಿಗೆ ವಿಜಯನಗರ ಸಾಮ್ರಾಜ್ಯದ ಆಳ್ವಿಕೆ ಅವಧಿಗೆ ಮನೆಯನ್ನು ತೊರೆದು ಬೀದಿಗೆ ಬರುವಂತಾಯಿತು. ದೇವದಾಸಿಯರು, ಪಾತರದವರು, ಸೂಳೆಯರು. ರಾಜವೇಶ್ಯೆಯರು, ವಾರಾಂಗನೆಯರು, ಎಲ್ಲಮ್ಮ, ಹುಲಿಗೆಮ್ಮನ ಸಂಪ್ರದಾಯದವರಲ್ಲಿ ಜೋಗತಿಯರು, ಹನುಮಂತ ದೇವರ ಆರಾಧಕರಲ್ಲಿ ಬಸವಿಯರು, (ಊರಿನ ಮುಖಂಡರಿಗೆ) ನಾಯಕಸಾನಿಯರು, ಇವರನ್ನು ಮತ್ತೊಂದು ವಿಶೇಷವಾದ ಹೆಸರಿನಿಂದ ಕರೆಯುತ್ತಾರೆ. ನಿತ್ಯಸುಮಂಗಲಿಯರೆಂದು ಇವರ ವಿವಾಹ ದೇವರ ಹೆಸರಿನಲ್ಲಿ ದೇವರ ದಾಸಿ ಅಂದರೆ ಪತ್ನಿಯ ನಂತರದ ಸ್ಥಾನ ಇವರಿಗೆ ದೊರೆತಿರುವುದರಿಂದ ಅವರು ಎರಡನೇ ಹೆಂಡತಿ ಸ್ಥಾನದಲ್ಲಿರುತ್ತಾರೆ. ಆದರೆ ಹೆಂಡತಿ ಎಂಬ ಪದ ಬಳಕೆ ಮಾಡುವಂತಿಲ್ಲ. ದೇವರ ಮತ್ತು ಪೂಜಾರಿಗಳ ಸಮ್ಮುಖದಲ್ಲಿ ನಡೆದಿರುತ್ತದೆ. ಅವರ ಸಮುದಾಯದ ಹೆಂಗಸರೇ ದೇವರ ಹೆಸರಿನಲ್ಲಿ ತಾಳಿ ಕಟ್ಟಿರುತ್ತಾರೆ. ಈ ಕಾರಣಕ್ಕೆ ಅವರು ತಾವು ಸಾಯುವವರೆಗೂ ಸುಮಂಗಲಿಯರಾಗೇ ಇರುತ್ತಾರೆ. ಪತಿ ಇರುವ ಸ್ತ್ರೀಯರನ್ನು ಸುಮಂಗಲಿಯರು ಎಂದು ಕರೆಯುತ್ತಾರೆ. ಇವರ ಪೋಷಕರು ಮೇಲ್ವರ್ಗದವರೇ ಆಗಿರುತ್ತಾರೆ ಮತ್ತು ಅವರೊಂದಿಗೆ ಮಾತ್ರ ಜೀವಿತದ ಕೊನೆವರೆಗೂ ಸಂಬಂಧವನ್ನು ಹೊಂದಿರುತ್ತಾರೆ. ಅವರ ಜೀವನದ ಜವಾಬ್ದಾರಿ ಪೋಷಕನದೇ ಆಗಿರುತ್ತದೆ.

ಹೀಗೆ ಇವರ ಪೀಳಿಗೆ ಬೆಳೆಯುತ್ತ ಹೋದಂತೆ ಇವರ ಸ್ಥಾನ ನೀಚಸ್ಥಾನಕ್ಕೆ ಬಂದಿತು. "ನೈವೇದ್ಯ ಮಾಡುವಾಗ ದೇವಸ್ಥಾನಕ್ಕೆ ಸೇರಿದ ದೇವದಾಸಿಯರು ನೃತ್ಯ ಮಾಡುತ್ತಾರೆ. ಈ ದೇವದಾಸಿಯರಿಗೆ ಹುಟ್ಟಿದ ಮಕ್ಕಳೆಲ್ಲ ದೇವಸ್ಥಾನಕ್ಕೆ ಸೇರಿದವರಾಗಿರುತ್ತಾರೆ. ಈ ದೇವದಾಸಿಯರು ಸೂಳೆಗಾರಿಕೆ ಮಾಡುತ್ತ ಊರಿನ ಅತ್ಯುತ್ತಮವಾದ ಬೀದಿಗಳಲ್ಲಿ ವಾಸ ಮಾಡುತ್ತಾರೆ. ಎಲ್ಲ ಊರುಗಳಲ್ಲಿಯೂ ಇದೇ ರೀತಿ ಅವರಿರುವ ಬೀದಿಗಳಲ್ಲಿ ಒಳ್ಳೆಯ ಮನೆಗಳಿರುತ್ತವೆ. ಇವರ ಬಗ್ಗೆ ಜನ ಬಹಳ ಗೌರವ ತೋರಿಸುತ್ತಾರೆ. ದಳಪತಿಗಳ ನಾಯಕಸಾನಿ ಎನಿಸಿಕೊಂಡವಳಿಗೆ ಮತ್ತಷ್ಟು ಗೌರವವಿರುತ್ತದೆ. ಎಂತಹ ಗೌರವಸ್ಥನಾದರೂ ಇವರ ಯಾವ ದೂಷಣೆಗೂ ಒಳಗಾಗದೆ ಹೋಗಬಹುದು. ಈ ಸ್ತ್ರೀಯರು ರಾಜನ ಅಂತಃಪುರದ ಸ್ತ್ರೀಯರ ಬಳಿಗೆ ಹೋಗಬಹುದಲ್ಲದೆ ಅವರೊಡನೆ ಕುಳಿತು ಎಲೆ ಅಡಿಕೆ ಸೇವಿಸಬಹುದು"( ನಾಗೇಗೌಡ ಎಚ್.ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೩೩೩). ವಿಜಯನಗರ ಸಾಮ್ರಾಜ್ಯದಲ್ಲಿ ಒಂದು ಸಣ್ಣ ಸೈನ್ಯದ ತುಕಡಿ ಹೊಂದಿದ್ದ ದಳಪತಿಗಳು ಇದ್ದರು ಇವರು ನಾಯಕಸಾನಿಗಳೊಂದಿಗೆ ಇದ್ದರು. ನಾಯಕಸಾನಿಗಳು ಇವರ ಕಾಲದಲ್ಲಿ ಆರಂಭವಾಗಿರಬೇಕು.

ಮುಂದೆ ಪಾತರದ ಸಂಪ್ರದಾಯದವರು ಅಲ್ಪಮಟ್ಟಿಗೆ ಮರೆಯಾಗಿ ನಾಯಕಸಾನಿಗಳು ಹಾಡು ಮತ್ತು ನೃತ್ಯ ಸಂಪ್ರದಾಯವನ್ನು ಮುಂದುವರಿಸಿರಬೇಕು. ಈ ನಾಯಕಸಾನಿಗಳು ಹದಿನೆಂಟು ಹತ್ತೊಂಬತ್ತನೇ ಶತಮಾನದವರೆಗೂ ತಮ್ಮ ಸೇವೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಇವರು ಹಾಡು ಮತ್ತು ನೃತ್ಯ ಎರಡರನ್ನೂ ಬಲ್ಲವರಾಗಿದ್ದರು.

ಅಬ್ದುಲ್ ರಜಾಕ್ ವಿಜಯನಗರ ಸಾಮ್ರಾಜ್ಯದಲ್ಲಿ ವೇಶ್ಯೆಯರ ಬೀದಿಗಳನ್ನು ಹೀಗೆ ವಿವರಿಸುತ್ತಾನೆ. "ಮುನ್ನೂರು ಗಜಕ್ಕಿಂತಲೂ ಹೆಚ್ಚು ಉದ್ದವಾದ, ಇಪ್ಪತ್ತು ಗಜಕ್ಕಿಂತಲೂ ಅಗಲವಾದ ಒಂದು ತರಹ ಅಂಗಡಿ ಬೀದಿ. ಅಲ್ಲಿ ಸಿಂಹಾಸನದಂತೆ ಶಿಲೆಗಳಿಂದ ಕಟ್ಟಿದ ಪೀಠ. ಮಧ್ಯಾಹ್ನವಾದ ಮೇಲೆ ಭವ್ಯವಾಗಿ ಸಿಂಗರಿಸಿದ ಈ ಗೃಹಗಳ ಮುಂದೆ ವೇಶ್ಯಾಂಗನೆಯರು ಮೇಲೆ ತಿಳಿಸಿದ ಪೀಠಗಳ ಮೇಲೆ ಕುಳಿತುಕೊಳ್ಳುತ್ತಾರೆ. ಪ್ರತಿಯೊಬ್ಬ ವೇಶ್ಯೆಯ ಬಳಿ ಇಬ್ಬರು ದಾಸಿಯರು ಇದ್ದು ಮನರಂಜನೆ ಉಂಟು ಮಾಡುತ್ತಾರೆ. ಯಾರು ಬೇಕಾದರೂ ಈ ಬೀದಿಗೆ ಬಂದು ತನಗೆ ಮೆಚ್ಚಿಗೆಯಾದ ವೇಶ್ಯೆಯನ್ನು ಆರಿಸಿಕೊಂಡು ಅವಳೊಡನೆ ಕಾಲ ಕಳೆಯಬಹುದು. ನಗರದ ಏಳು ಕೋಟೆಗಳಲ್ಲಿಯೂ ಈ ತರಹದ ಅನೇಕ ವೇಶ್ಯಾ ಗೃಹಗಳಿವೆ, ಇವರ ಗೃಹಗಳ ಮೇಲೆ ಹಾಕಿದ ಆದಾಯ ಹನ್ನೆರಡು ಫನಂ. ಇದು ಪಹರೆಯವರಿಗೆ ಸಂಬಳ. ದರಬ್‌ಖಾನೆ ಎದುರು ರಾಜ್ಯಪಾಲರ ಮನೆ. ಇಲ್ಲಿ ಹನ್ನೆರಡು ಸಾವಿರ ಸೈನಿಕರು ಕಾವಲು ಇರುತ್ತಿದ್ದರು. ಅವರಿಗೆ ಒಂದು ಫನಂ ಸಂಬಳ, ಇದು ವೇಶ್ಯಾಗೃಹಗಳ ಮೇಲೆ ವಿಧಿಸಿದ ಭತ್ಯೆಯಾಗಿದೆ"(ನಾಗೇಗೌಡ ಎಚ್.ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೧೪೬).

ವಿಜಯನಗರ ಸಾಮ್ರಾಜ್ಯದ ಆಳ್ವಿಕೆವರೆಗೂ ನಾವು ಎಲ್ಲ ವೃತ್ತಿಯವರ ಮೇಲೂ ವೃತ್ತಿ ತೆರಿಗೆಗಳನ್ನು ವಿಧಿಸಿರುವುದನ್ನು ನೋಡುತ್ತೇವೆ. ಅಂದರೆ ವೃತ್ತಿಗಳು ಲಾಭದಾಯಕವಾಗಿದ್ದವು. ಕೃಷಿ ಆಗ ಅಭಿವೃದ್ಧಿಯ ಹಂತದಲ್ಲಿತ್ತು. ಕೆರೆಗಳು ಮಳೆಯನ್ನೇ ಅವಲಂಬಿಸಿದ್ದರಿಂದ ಕೃಷಿ ಬೆಳವಣಿಗೆ ಹಂತದಲ್ಲಿತ್ತು. ಆದರೆ ವಿಜಯನಗರ ಸಾಮ್ರಾಜ್ಯದ ವೇಳೆಗೆ ನೀರಾವರಿ ಕಾಲುವೆಗಳು ನಿರ್ಮಾಣವಾಗಿ ಕೃಷಿ ತುಂಬ ಬಲಿಷ್ಠವಾಯಿತು. ಇಲ್ಲಿಯ ವ್ಯಾಪಾರ, ವ್ಯವಹಾರವನ್ನು ಅಧ್ಯಯನ ಮಾಡಿದರೆ ಜನರಲ್ಲಿ ಹಣ ಮತ್ತು ಸಂಪತ್ತು ಹೇರಳವಾಗಿತ್ತು. ಅಧಿಕ ಹಣ ಬಂದಂತೆ ಮಾನವ ಸಹಜವಾಗಿ ವಿಲಾಸಿಜೀವನದತ್ತ ವಾಲಿದ ಅದರ ಪರಿಣಾಮವೇ ಸೂಳೆಯರ ಸಮಾಜ ನಿರ್ಮಾಣವಾಯಿತೆನ್ನಬಹುದು. ಅಬ್ದುಲ್ ರಜಾಕ್ ಭಾರತಕ್ಕೆ ಭೇಟಿ ಕೊಟ್ಟಿದ್ದು ಕ್ರಿ.ಶ. ೧೪೪೨ರಲ್ಲಿ ಅಂದರೆ ೧೫ನೇ ಶತಮಾನದ ಹೊತ್ತಿಗೆ ವೇಶ್ಯೆಯರು ಹಣ ಸಂಪಾದನೆಗೋಸ್ಕರ ಈ ವೃತ್ತಿಗಿಳಿದಿರಬೇಕು. ವಿಜಯನಗರ ಆ ಕಾಲಕ್ಕೆ ಬೃಹತ್ ಶ್ರೀಮಂತ ರಾಜ್ಯವಾಗಿತ್ತು. ಪ್ರಾಕೃತಿಕವಾಗಿ ಅನುಕೂಲವಾಗಿದ್ದುದರಿಂದ ಉತ್ತಮ ಫಸಲಿನಿಂದಾಗಿ ರಾಜ್ಯ ಸಂಪತ್ತಿನಿಂದ ಸಮೃದ್ಧವಾಗಿತ್ತು. ಪ್ರಜೆಗಳಲ್ಲಿ ಹಣ ಮತ್ತು ಸಂಪತ್ತು ಅಗತ್ಯಕ್ಕಿಂತಲೂ ಹೆಚ್ಚು ಕೇಂದ್ರೀಕರಣವಾಗಿ ಅದನ್ನು ವೇಶ್ಯಾಗೃಹಗಳಲ್ಲಿ ವ್ಯಯ ಮಾಡಲಾರಂಭಿಸಿದರು. ಹಾಗಾಗಿ ವೇಶ್ಯೆಯರಲ್ಲಿ ಹಣ ಗಳಿಕೆ ಹೆಚ್ಚಾಯಿತು. ಇವರಿಗೆ ಹಣ ಹರಿದು ಬಂದಿದ್ದು ಪ್ರಜೆಗಳಿಂದಲೇ.

ಅವರಲ್ಲಿರುವ ಅಧಿಕ ಸಂಪತ್ತು ರಾಜ್ಯ ಹಿತಾಸಕ್ತಿಗೆ ಧಕ್ಕೆಯಾಗುತ್ತದೆ ಎಂದು ರಾಜ್ಯ ಕಾನೂನು ಅವರ ಮೇಲೆ ಈ ರೀತಿ ತೆರಿಗೆಯ ರೂಪದಲ್ಲಿ ಹಣ ವಾಪಸು ಪಡೆಯುತ್ತಿದ್ದರು. ವಿಜಯನಗರ ಸಾಮ್ರಾಜ್ಯದಲ್ಲಿ ರಾಜ್ಯಬೊಕ್ಕಸದಲ್ಲಿ ಹಣದ ಕೊರತೆ ಕಂಡುಬಂದಿದೆ. ಬಾರ್ಬೋಸಾ ಪ್ರಕಾರ ರಾಜರಿಗೆ ವೇಶ್ಯೆಯರು ಹಣಕಾಸಿನ ನೆರವು ನೀಡುವಷ್ಟು ಶ್ರೀಮಂತರಾಗಿರುತ್ತಿದ್ದರು. ಅರಸನಿಗೆ ಎಪ್ಪತ್ತು ಸಾವಿರ ಪಾರ್ದೋಗಳನ್ನು ಬಿಟ್ಟುಕೊಟ್ಟಿದ್ದನ್ನು ಅವನೇ ಸ್ವತಃ ಕಂಡಿದ್ದನ್ನು ಹೇಳಿಕೊಂಡಿದ್ದಾನೆ. 'ಇವರನ್ನು ಸಾಕಷ್ಟು ಬಲ್ಲ ನನಗೆ ಈ ಮಾತಿನಲ್ಲಿ ನಂಬಿಕೆ ಇದೆ' ಎಂದು ಸಮರ್ಥಿಸಿಕೊಂಡಿರುವನು.

ಅಂದರೆ ರಾಜ್ಯಕ್ಕೆ ಆದಾಯ ಸರಿಯಾಗಿ ತಲುಪುತ್ತಿರಲಿಲ್ಲವೆನಿಸುತ್ತದೆ. ಅಧಿಕಾರಿಗಳು ಭ್ರಷ್ಟರಿರುವುದು ಇದಕ್ಕೆ ಕಾರಣವಾಗಿರಬಹುದು. ರಾಜರು ರಾಜ್ಯದ ಕಾನೂನು ವ್ಯವಸ್ಥೆಯ ಕಡೆಗೆ ಗಮನ ಕೊಡದೆ ಇರುವುದು ಇದಕ್ಕೆ ಕಾರಣವಿರಬಹುದು. ಸ್ವತಃ ರಾಜರೇ ವೇಶ್ಯೆಯರ ಸಂಗ ಮಾಡಿಕೊಂಡು ವಿಲಾಸಿಜೀವನದಲ್ಲಿ ಮುಳುಗಿದ್ದರೆ ಪ್ರಜೆಗಳು ತಮ್ಮ ಬಗ್ಗೆ ಸಮರ್ಥಿಸಿಕೊಳ್ಳುವುದರಲ್ಲಿ ಯಾವುದೇ ಭಯವಿರುವುದಿಲ್ಲ. ಯಥಾ ರಾಜಾ ತಥಾ ಪ್ರಜಾ ಎಂಬ ಮಾತು ಪ್ರಚಲಿತದಲ್ಲಿರುವುದು ಎಷ್ಟು ಸತ್ಯವೋ ವ್ಯವಸ್ಥೆ ಕೂಡ ಹಾಗೆಯೇ ಇರುವುದು ಅಷ್ಟೇ ಸತ್ಯವಾಗಿರುತ್ತದೆ. ವಿಜಯನಗರ ಸಾಮ್ರಾಜ್ಯದ ರಾಜರ ಅರಮನೆ ವೈಭೋಗ, ವಿಲಾಸಿ ಜೀವನ, ನೃತ್ಯ, ಸಂಗೀತ, ಎಲ್ಲವೂ ಇಲ್ಲಿ ಕಾಲಗತಿಗೆ ಸಿಲುಕಿಕೊಂಡು ವಿಭಿನ್ನ ರೂಪಗಳಲ್ಲಿ ಅಗತ್ಯಕ್ಕಿಂತ ಹೆಚ್ಚು ಬಳಕೆಯಾದವು. ಮೇಲಿಂದ ಮೇಲೆ ಸಂಭವಿಸುವ ಯುದ್ಧಗಳು ರಾಜಬೊಕ್ಕಸ ಖಾಲಿಯಾಗುವಂತೆ ಮಾಡುತ್ತಿರಬೇಕು. ಇವೆಲ್ಲ ಹಿಂದೆ ಇರಲಿಲ್ಲವೆಂದಲ್ಲ. ಆದರೆ ಅವೆಲ್ಲವೂ ಒಂದು ಮಿತಿಯಲ್ಲಿ ಇದ್ದವೆನ್ನಬಹುದು. ಆದರೆ ಈ ಕಾಲಾವಧಿಯಲ್ಲಿ ಅವೆಲ್ಲ ತುಂಬಾ ಕೀಳುಪ್ರವೃತ್ತಿಗಿಳಿದವು ಎಷ್ಟು ವ್ಯವಸ್ಥೆ ಹದಗೆಡಲು ಸಾಧ್ಯವೋ ಅಷ್ಟು ಹಾಳಾಯಿತೆನ್ನಬಹುದು. ಇದರಿಂದ ಸ್ತ್ರೀಯರ ಸ್ಥಾನಗಳು ತುಂಬಾ ಕೀಳು ಹಂತವನ್ನು ತಲುಪಿತು.

"ರಾಜನ ಅಶ್ವದಳ ಕಾಲ್ದಳ ಸೇರಿ ಹತ್ತು ಲಕ್ಷ ಸೈನಿಕರು ಐದಾರು ಸಾವಿರ ಸ್ತ್ರೀಯರು ಇದ್ದರು. ಇವರಿಗೂ ಸಂಬಳವಿತ್ತು ಯುದ್ಧಕ್ಕೆ ಹೋದಾಗ ಸೈನಿಕರು ಸಂಖ್ಯೆಗನುಗುಣವಾಗಿ ಸ್ತ್ರೀಯರನ್ನು ಕಳುಹಿಸುತ್ತಾರೆ. ಇವರಿಲ್ಲದೆ ಸೈನಿಕರು ಯುದ್ಧ ಮಾಡಲಾರರು, ಸೈನಿಕರು ಒಮ್ಮತದಿಂದಿರಲಾರರು. ಈ ಸ್ತ್ರೀಯರು ಬಹು ಸೊಗಸುಗಾರ್ತಿಯರು; ನೃತ್ಯ, ಗೀತ, ಗಾಯನ ದೊಂಬರಾಟಗಳಲ್ಲಿ ನುರಿತ ಚದುರೆಯರು." ಸೈನ್ಯದಲ್ಲಿ ಕಳುಹಿಸಿಕೊಡಲಾಗುತ್ತಿದ್ದ ಸ್ತ್ರೀಯರೆಲ್ಲರೂ ವೇಶ್ಯೆಯರೇ ಆಗಿರುತ್ತಿದ್ದರು.

ಕ್ರಿ.ಶ. ೬-೭ನೇ ಶತಮಾನದಲ್ಲಿ ವೇಶ್ಯಾವೃತ್ತಿ ಒಂದು ಗೌರವದಿಂದ ಆರಂಭವಾದ ಪದ್ಧತಿಯಾಗಿತ್ತು. ಈ ಪದ್ಧತಿ ೧೫ನೇ ಶತಮಾನದ ವೇಳೆಗೆ ಬೀದಿಗೆ ಬಿತ್ತು. ಹೀನಾಯಪದ್ಧತಿಯಾಗಿ ಇಡೀ ಸಮಾಜವನ್ನೇ ಕಲುಷಿತ ಮಾಡಿತು, ಮನುಷ್ಯನ ಅನುಕೂಲತೆಗಳು ಹೆಚ್ಚಾದಂತೆ ಮೋಜಿನತ್ತ ಸಾಗುವುದು ಸಹಜ. ಮನಸ್ಸು ದುರ್ಬಲವಾಗಿ ಇಂತಹ ಚಟುವಟಿಕೆಗಳತ್ತ ತಿರುಗುತ್ತದೆ. ಅದರ ಪರಿಣಾಮವಾಗಿಯೇ ಸಮಾಜವಲ್ಲಿ

ಕೆಟ್ಟಪದ್ಧತಿಗಳನ್ನು ಹುಟ್ಟುಹಾಕುತ್ತಾ ಹೋಗಲಾಗುತ್ತದೆ. ಆರ್ಥಿಕ ತೊಂದರೆ ಇದ್ದಾಗ ಬರೀ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವತ್ತ ಚಿಂತಿಸಲಾಗುತ್ತದೆ. ದೇಶಾದ್ಯಂತ ಭೇಟಿಕೊಟ್ಟ ವಿದೇಶಿ ಬರಹಗಾರರು ವಿಜಯನಗರ ಸಾಮ್ರಾಜ್ಯದ ಬಗ್ಗೆ ಮಾತ್ರ ಈ ರೀತಿ ಬರೆಯಲು ಹೇಗೆ ಸಾಧ್ಯ. ವೇಶ್ಯಾಗಾರಿಕೆ ಇಲ್ಲಿ ತುಂಬಾ ವ್ಯಾಪಕವಾಗಿರುವುದರಿಂದ ಮಾತ್ರ ಎನ್ನಬಹುದು. ಇದೆಲ್ಲಕ್ಕೂ ಇಲ್ಲಿನ ಜನರ ಶ್ರೀಮಂತಿಕೆಯೇ ಕಾರಣ.

ಜಗತ್ತಿನ ಎಲ್ಲ ಕ್ಷೇತ್ರಗಳು ಅರ್ಥವ್ಯವಸ್ಥೆಯ ಹಿಡಿತದಲ್ಲೇ ಇರುತ್ತವೆ. ಇವತ್ತು ಅದೊಂದು ದುಷ್ಟಪದ್ಧತಿಯಾಗಿ ಸಮಾಜದಲ್ಲಿ ಮುಂದುವರಿದುಕೊಂಡು ಬಂದಿದೆ ಎಂದರೆ ಅದಕ್ಕೆ ಅರ್ಥವ್ಯವಸ್ಥೆಯೇ ಕಾರಣ. ಆ ಕಾಲದಲ್ಲಿ ಅಷ್ಟೊಂದು ವ್ಯಾಪಕವಾಗಿ ಬೆಳೆದುಬಂದ ಈ ಪದ್ಧತಿ ತನ್ನ ಕರಾಳಛಾಯೆಯನ್ನು ಇಂದಿಗೂ ಸಮಾಜದಲ್ಲಿ ಹರಡಿದೆ. ಸರಕಾರ ಮತ್ತು ಕಾನೂನು ಎಷ್ಟು ಪ್ರಯತ್ನಪಟ್ಟರೂ ಅದನ್ನು ನಿರ್ಮೂಲನೆ ಮಾಡಲಾಗುತ್ತಿಲ್ಲ. ಅಷ್ಟು ಸುಲಭವಾಗಿ ಈ ಸಮಸ್ಯೆ ಅಳಿಯಲು ಸಾಧ್ಯವಿಲ್ಲ. ಏಕೆಂದರೆ ಅದಕ್ಕಿರುವ ಇತಿಹಾಸ ಗಣನೆಗೂ ಸಿಗದಷ್ಟು ಪ್ರಾಚೀನವಾದುದು. ಆ ಪದ್ಧತಿ ನಿಷೇಧಕ್ಕೆ ಒಂದು ಕಾನೂನು ತಂದರೆ ಅದು ಅಷ್ಟೇ. ಸುಲಭವಾಗಿ ಮತ್ತೊಂದು ರೂಪದಲ್ಲಿ ತಲೆ ಎತ್ತುತ್ತದೆ. ಬಹುವೇಗದಲ್ಲಿರುವ ಇಂದಿನ ಜಗತ್ತು ನಡೆಯತ್ತಿಲ್ಲ, ಓಡುತ್ತಿದೆ. ಅಷ್ಟೇ ವೇಗವಾಗಿ ಇಂಥ ಪದ್ಧತಿಗಳು ಹರಡಿಕೊಳ್ಳುತ್ತಿವೆ. ಕಳ್ಳತನದ ಮೂಲಕ ದೊಡ್ಡ, ದೊಡ್ಡ ನಗರ ಮತ್ತು ವಿದೇಶಗಳಿಗೆ ಹೆಣ್ಣುಮಕ್ಕಳನ್ನು ಸಾಗಿಸುವ ದಂಧೆ ನಡೆಯುತ್ತಿದೆ. ವೇಶ್ಯಗಾರಿಕೆ ಅಂತರ್ಜಾಲದ ಮೂಲಕವೇ ಇಂದು ತನ್ನ ರೂಪ ಬದಲಾಯಿಸಿಕೊಂಡು ತನ್ನ ವ್ಯವಹಾರವನ್ನು ಗುಪ್ತವಾಗಿ ನಡೆಸುತ್ತದೆ. ಆದರೂ ಕೆಲವೊಮ್ಮೆ ಎಷ್ಟು ಪ್ರಯತ್ನಪಟ್ಟರೂ ಬಹಿರಂಗಗೊಳ್ಳುತ್ತದೆ ಮತ್ತೆ ಗೌಪ್ಯತೆಯನ್ನು ಕಾಪಾಡಿಕೊಳ್ಳುತ್ತದೆ. ಎಲ್ಲಿಯವರೆಗೆ ಎಲ್ಲವೂ ಅರ್ಥವ್ಯವಸ್ಥೆಯ ಹಿಡಿತದಲ್ಲಿರುತ್ತವೆಯೋ ಅಲ್ಲಿಯವರೆಗೂ ಇಂತಹ ದುಷ್ಟಪದ್ಧತಿಗಳು ತೊಲಗುವುದಿಲ್ಲ.

**೫. ೩. ಸತಿಪದ್ಧತಿ**

**ಅ) ಅರ್ಥ ಮತ್ತು ಬೆಳವಣಿಗೆ**

ಸತಿಪದ್ಧತಿ ಆಚರಣೆಗೆ ಬರುವುದಕ್ಕಿಂತ ಮೊದಲು ಮದುವೆಯಾದ ಹೆಣ್ಣಿಗೆ 'ಸತಿ' ಎಂದು ಕರೆಯುವುದು ರೂಢಿಯಾಗಿತ್ತು. ಮದುವೆಯ ನಂತರ ಹೆಣ್ಣನ್ನು ಇಂಥವರ ಸತಿ ಎಂದು ಗಂಡನ ಹೆಸರಿನೊಂದಿಗೆ ಗುರುತಿಸುವುದು ವಾಡಿಕೆಯಾಗಿದೆ. ಹೆಂಡತಿ ಪದಕ್ಕೆ ಸಮಾನ ಅರ್ಥದಲ್ಲಿ ಸತಿ, ಪತ್ನಿ ಎಂದು ಸಂಬೋಧಿಸಲಾಗುತ್ತದೆ. ಆದರೆ ನಾವು ಇಲ್ಲಿ ಸತಿಪದ್ಧತಿಯಲ್ಲಿ ಸತಿ ಎಂದ ತಕ್ಷಣ ಪರಿಮಿತ ಅರ್ಥದಲ್ಲಿ ಪತಿಯ ಶವ ಉರಿಯುವ ಚಿತೆಯಲ್ಲಿ ಸತಿ ಧುಮುಕಿ ಸಾಯುವ ಕಲ್ಪನೆಯ ಚಿತ್ರ ನಮ್ಮ ಕಣ್ಣ ಮುಂದೆ ಬರುತ್ತದೆ. ಪ್ರಸ್ತುತ ಜಗತ್ತಿನಲ್ಲಿ ಜೀವಿಸುತ್ತಿರುವ ನಾವು ಸತಿ ಹೋಗುವುದನ್ನು ಕಣ್ಣಾರೆ ವೀಕ್ಷಿಸಿಲ್ಲ. ಆದರೂ 'ಸತಿ' ಎನ್ನುವ ಮೂಲ ಪದದ ಅರ್ಥ ನಮ್ಮ ಕಣ್ಣ ಮುಂದೆ ಬರುವುದೇ ಇಲ್ಲ.

ಅಷ್ಟೊಂದು ವೈಭವಯುತವಾಗಿ ನಡೆದಿದೆ ಭಾರತದಲ್ಲಿ ಸತಿಪದ್ಧತಿ. ಇಡೀ ಭಾರತಕ್ಕೆ ಹೋಲಿಸಿಕೊಂಡಾಗ ಕರ್ನಾಟಕದಲ್ಲಿ ಸತಿ ಘಟನೆಗಳು ಕಡಿಮೆ ಎಂದು ಹೇಳಲಾಗುತ್ತದೆ. ಗಂಡನು ಯಾವುದೇ ಕಾರಣದಿಂದ ಮರಣ ಹೊಂದಿದರೂ ಸತಿ, ಪತಿಯ ಮರಣದ ನಂತರ ತಾನೂ ಅವನ ಜೊತೆ ಮರಣ ಹೊಂದುವುದಾಗಿದೆ.

ಸತಿಪದ್ಧತಿ ಇಂದಿನ ಜನಾಂಗಕ್ಕೆ ಕ್ರೂರ ಎನಿಸುತ್ತದೆ. ಆದರೆ ಇತಿಹಾಸದಲ್ಲಿ ಮಹಿಳೆ ಇದನ್ನು ವೈಭವಪೂರ್ಣವಾಗಿ, ತನಗೆ ದೊರೆತ ಸೌಭಾಗ್ಯವೆಂದು, ಪೂಜನೀಯವಾಗಿ ಭಾವಿಸಿ ಸಂತೋಷದಿಂದ ಸ್ವೀಕರಿಸಿದ್ದಾಳೆ. ಸತಿಪದ್ಧತಿ ಒಮ್ಮೆಲೆ ಹುಟ್ಟಿ, ತನ್ನ ಸ್ವರೂಪವನ್ನು ಜಗತ್ತಿನಾದ್ಯಂತ ಒಮ್ಮೆಲೆ ಹರಡಿಕೊಂಡಿದ್ದಲ್ಲ. ಯಾವುದೋ ಒಂದು ಜನಾಂಗದಲ್ಲಿ ಯಾವುದೋ ಕಾರಣಾಂತರಗಳಿಂದ ಸತಿ ಪತಿಯ ಜೊತೆ ಮರಣಿಸಿರಬಹುದು. ಅಂತಹ ಕೆಲವು ಆಧಾರಗಳನ್ನಿಟ್ಟುಕೊಂಡು ನಾವು ಅದರ ಪ್ರಾಚೀನತೆ ಗುರುತಿಸುವುದು ತಪ್ಪಾಗುತ್ತದೆ. ವೇದಗಳ ಕಾಲದಲ್ಲಾಗಲಿ, ಅಷ್ಟೊಂದು ಕಟ್ಟುಪಾಡುಗಳನ್ನು ಸೃಷ್ಟಿಸಿದ ಸ್ಮೃತಿಕಾರರ ಕಾಲದಲ್ಲಾಗಲಿ ಸತಿ ಹೋಗುವುದರ ಬಗ್ಗೆಯಾಗಲಿ, ಸತಿ ಹೋಗಬೇಕೆಂದಾಗಲೀ ಎಲ್ಲೂ ಉಲ್ಲೇಖಿಸಿಲ್ಲ ಮೇಲೆ ಅದರ ಬಗ್ಗೆ ಅಷ್ಟೊಂದು ಪ್ರಾಚೀನತೆಯನ್ನು ಗುರುತಿಸುವ ಅಗತ್ಯವಿಲ್ಲ. ಇದು ಹುಟ್ಟಿದ್ದೇ ವಿಭಿನ್ನ ಸಂಸ್ಕೃತಿಯವರು ದಾಳಿಯಿಟ್ಟು ಸಂಸ್ಕೃತಿ ಪಲ್ಲಟವಾದಾಗ ಮತ್ತು ಪಿತೃಪ್ರಧಾನ ವ್ಯವಸ್ಥೆಯ ಔನ್ನತ್ಯದಲ್ಲಿ ಎಂದು ಹೇಳಬಹುದು.

ಶಾತವಾಹನರ ಕಾಲಘಟ್ಟದಲ್ಲಿ ಗುರುತಿಸದ ಸತಿಪದ್ಧತಿಯನ್ನು ಕ್ರಿ.ಶ. ೫ನೇ ಶತಮಾನದ ಕದಂಬರ ರವಿವರ್ಮನ ಹೆಂಡತಿಯ ಮರಣವನ್ನು ನಾವು ಖಚಿತವಾಗಿ ಅದು ಸತಿಘಟನೆ ಎಂದು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಅದಾದ ನಂತರ ನಮಗೆ ಕ್ರಿ.ಶ. ೯ನೇ ಶತಮಾನದವರೆಗೆ ಸತಿ ಹೋದವರ ಶಾಸನೋಕ್ತ ಮಾಹಿತಿ ದೊರೆತಿಲ್ಲ. ಆ ೩೦೦ ವರ್ಷಗಳ ಮಧ್ಯಾಂತರದ ಅವಧಿಯಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಮತ್ತು ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಹಲವಾರು ಶಾಸನೋಕ್ತ ಮಾಹಿತಿಗಳು ನಮಗೆ ಸಾಕಷ್ಟು ದೊರೆಯುತ್ತವೆ. ಆದರೆ ಸತಿ ಹೋದವರ ಬಗ್ಗೆ ಏಕೆ ದೊರೆತಿಲ್ಲವೆಂಬುದು ಒಂದು ಪ್ರಶ್ನೆಯಾಗಿ ಉಳಿದಿದೆ. ಶಾತವಾಹನ ಕಾಲಘಟ್ಟದಲ್ಲಿ ಗುರುತಿಸಿದ ಮಾತೃಪ್ರಧಾನ ಅಂಶಗಳನ್ನು ನಾವು ಅಧ್ಯಯನ ಮಾಡಿದರೆ ಭೂಮಿ ಮತ್ತು ಆಸ್ತಿ ಒಡೆತನ, ತಾಯಿಯಿಂದ ಗುರುತಿಸುವುವಿಕೆ, ಇವೆಲ್ಲ ಪಿತೃ ಪ್ರಧಾನ ಪೂರ್ಣವ್ಯವಸ್ಥೆಯನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡಿರಲಿಲ್ಲವೆಂಬ ನಿಲುವಿಗೆ ಬರಬಹುದು. ಅದಾದ ನಂತರ ಕದಂಬ, ಬಾದಾಮಿ ಚಾಲುಕ್ಯರ ಕಾಲದವರೆಗೂ ಸಪ್ತ ಮಾತೃಕೆಯರ ಆರಾಧನೆ, ಲಜ್ಜಾಗೌರಿ ಆರಾಧನೆ ಅಸ್ತಿತ್ವದಲ್ಲಿತ್ತೆಂಬುದು ಮೂರ್ತಿಶಿಲ್ಪಗಳಿಂದ ನಮಗೆ ತಿಳಿದುಬರುತ್ತದೆ. ಇವೆಲ್ಲ ಅಂಶಗಳನ್ನು ನಾವು ನೋಡಿದರೆ ಉತ್ತರ ಭಾರತದಂತೆ ದಕ್ಷಿಣದಲ್ಲಿ

ದ್ರಾವಿಡರಾದ ನಮ್ಮಲ್ಲಿ ಸ್ತ್ರೀಯರನ್ನು ಅಷ್ಟೊಂದು ಕ್ರೂರವಾಗಿ ಹಿಂಸಿಸಿ ಸಾಯಿಸುವ ಪದ್ಧತಿಗಳು ವೇಗವಾಗಿ ಆಚರಣೆಗೆ ಬಂದಿರಲಿಕ್ಕಿಲ್ಲವೆಂದು ಅಭಿಪ್ರಾಯಪಡಬಹುದು.

ಗಂಗ ಮತ್ತು ರಾಷ್ಟ್ರಕೂಟರ ಆಳ್ವಿಕೆ ಅವಧಿಗೆ ಸ್ತ್ರೀ ಪೂರ್ಣವಾಗಿ ಹಿಂದೆ ಸರಿದು ಇಡೀ ವ್ಯವಸ್ಥೆ ಪುರುಷನ ಯಾಜಮಾನ್ಯವನ್ನು ಒಪ್ಪಿಕೊಂಡಾಗಿತ್ತು. ಆಗ ಸತಿಧರ್ಮ ಎಂಬ ಒಂದೇ ಒಂದು ಕಾರ್ಯಕಾರಣ ನಿಯಮದಿಂದ ಸ್ತ್ರೀಯರನ್ನು ತನ್ನ ಮರಣದ ಜೊತೆ ತನ್ನ ಸತಿಯೂ ಬರುವಂತೆ ಮಾಡಿದ. ಆದರೆ ಅದರ ಹಿಂದಿರುವ ಕಾರಣಗಳು ಹಲವಾರು. ಅವುಗಳನ್ನು ಮುಂದೆ ಚರ್ಚಿಸಲಾಗುವುದು. ಎಂಟನೇ ಶತಮಾನದ ನಂತರ ಸತಿ ಹೋಗಲು ನಮಗೆ ಮತ್ತೊಂದು ಬಲವಾದ ಕಾರಣ ದೊರೆಯುತ್ತದೆ. ಅದು ವಿದೇಶಿ ಸಂಸ್ಕೃತಿಯವರ ದಾಳಿಗಳಿಂದ ಆಗ ಬಲವಂತವಾಗಿ ನಡೆದ ಸಾಂಸ್ಕೃತಿಕ ಸಂಘರ್ಷಗಳು ಪುರುಷರಲ್ಲಿ ಭೀತಿ ಹುಟ್ಟಿಸಿದವು. ತಾವು ನಂಬಿದ ಸಂಸ್ಕೃತಿ ಮತ್ತು ತಮ್ಮ ಪತ್ನಿ ತಮ್ಮವರಾಗಿಯೇ ಕೊನೆಯವರೆಗೂ ಅಂದರೆ ತಮ್ಮ ಮರಣದ ನಂತರವೂ ಉಳಿಯಬೇಕೆಂದರೆ ತಮ್ಮ ಜೊತೆ ತಮ್ಮ ಪತ್ನಿಯರನ್ನು ಕರೆದೊಯ್ಯಬೇಕೆಂದು ಹೀಗೆ ಮಾಡಿದ್ದು ಒಂದು ಬಲವಾದ ಕಾರಣವಾಗಿದೆ ಎನ್ನಬಹುದು.

**ಆ) ಸತಿಸ್ಮಾರಕಗಳು**

ಮೊಟ್ಟಮೊದಲು ಸತಿಹೋದ ಶಾಸನೋಕ್ತ ಆಧಾರ ಕ್ರಿ.ಶ. ಸುಮಾರು ೪೦೦ರ ಸೊರಬ ಶಾಸನದಲ್ಲಿ ಕದಂಬ ದೊರೆ ರವಿವರ್ಮನೊಡನೆ ರಾಣಿ ಸತಿ ಹೋದಂತೆ ಉಲ್ಲೇಖವಿದೆ. ಆದರೆ ಇದನ್ನು ಸತಿಸ್ಮಾರಕವೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಇದೇ ಈ ವಿಷಯದ ಮೊದಲನೆಯ ಶಾಸನವಾಗಿದೆ. ಈ ಅವಧಿಯಲ್ಲಿ ಇದೊಂದನ್ನು ಬಿಟ್ಟು ಬೇರೆ ಯಾವ ಆಧಾರಗಳೂ ನಮಗೆ ದೊರಕುವುದಿಲ್ಲ. ಪತಿಯೊಂದಿಗಿನ ಯಾವುದೋ ಒಂದು ಅವ್ಯಕ್ತ ಸೆಳೆತ ಪತಿಯನ್ನು ಸಾವಿನಲ್ಲೂ ಅನುಸರಿಸುವಂತೆ ಮಾಡಿರಬಹುದು. ಹಾಗಾದರೂ ಅದು ಸತಿ ಘಟನೆಯೇ ಎನಿಸಿಕೊಳ್ಳುತ್ತದೆ. ಸತಿ ಪತಿಯನ್ನು ಎಲ್ಲ ವಿಷಯದಲ್ಲೂ ಅನುಸರಿಸಬೇಕೆನ್ನುವುದು ಮತ್ತು ಅದಕ್ಕೆ ಅವಳು ಬದ್ಧಳಾಗಿರುವುದು ಕಾರಣವಾಗಿರಬಹುದು. ಅವನಿಗಿಲ್ಲದ ಸೌಕರ್ಯವಾಗಲಿ, ಜೀವನವಾಗಲೀ ತನಗೂ ಬೇಡವೆಂದು ಭಾವಿಸಿರಬಹುದು. ಹಾಗಾಗಿಯೇ ಗಾಂಧಾರಿ ಪತಿ ಅಂಧನಾಗಿದ್ದ ಕಾರಣಕ್ಕೆ ತಾನೂ ಕಣ್ಣಿಗೆ ಬಟ್ಟೆ ಕಟ್ಟಿಕೊಂಡಿರಬೇಕು. ನಂತರ ನಮಗೆ ಸ್ಪಷ್ಟ ಶಾಸನೋಕ್ತ ಆಧಾರ ರಾಷ್ಟ್ರಕೂಟರ ಕಾಲಕ್ಕೆ ದೊರೆಯುತ್ತದೆ. ಬೆನ್ನೂರಿನ ಕ್ರಿ.ಶ. ೯೭೨ರಲ್ಲಿ ನಾಲ್ಕನೇ ಅಮೋಘವರ್ಷನ ಕಾಲದಲ್ಲಿ ಕಾಳಗವೊಂದರಲ್ಲಿ ಸತ್ತವೀರನ ಜೊತೆ ಆತನ ಹೆಂಡತಿ ಜಕ್ಕಬ್ಬೆ ಸಾಯುತ್ತಾಳೆ(E.C. VIII (ರೈ), ಸೊರಬ, ೪೫೭). ನಂತರ ಅಲ್ಪಕಾಲಾವಧಿ ಸತಿ ಸ್ಮಾರಕಗಳು ದೊರೆತಿಲ್ಲವೆಂದ ಮಾತ್ರಕ್ಕೆ ಸತಿಪದ್ಧತಿ ಆ ಅವಧಿಯಲ್ಲಿ

ಇರಲಿಲ್ಲವೆಂದರೆ ತಪ್ಪಾಗುತ್ತದೆ. ನಮಗೆ ಆಧಾರಗಳು ದೊರೆತಿಲ್ಲವಷ್ಟೆ. ಹತ್ತನೇ ಶತಮಾನದ ಈಚೆಗೆ ತೀವ್ರಗತಿಯಲ್ಲಿ ಸಾಗಿ ಕೊನೆಗೆ ದಾಖಲಿಸುವುದೇ ಅಸಾಧ್ಯವಾಯಿತೆನ್ನಬಹುದು.

ಬಾರ್ಬೋಸಾ ಸತಿ ಹೋಗುವುದರ ಬಗ್ಗೆ ಹೀಗೆ ಹೇಳುತ್ತಾನೆ. "ರಾಜ ಸತ್ತರೆ ನಾನೂರು ಐನೂರು ಸ್ತ್ರೀಯರು ಸಹಗಮನ ಮಾಡುತ್ತಾರೆ. ಅಷ್ಟೊಂದು ಸ್ತ್ರೀಯರು ಚಿತೆಗೆ ಬೀಳಲು ಅನುಕೂಲಕ್ಕೆ ದೊಡ್ಡ ಗುಂಡಿಯನ್ನು ಅದಕ್ಕೆ ತಕ್ಕಂತೆ ಚಿತಾಗ್ನಿ ದೊಡ್ಡದು ಮಾಡುತ್ತಿದ್ದರು. ಇದರಲ್ಲಿ ನಾ ಮುಂದು ತಾ ಮುಂದು ಎಂದು ಬೀಳುತ್ತಾರೆ, ಅದೊಂದು ಅಪೂರ್ವವಾದ ದೃಶ್ಯ ಎಂದು ದಾಖಲಿಸಿದ್ದಾರೆ (ನಾಗೇಗೌಡ ಎಚ್. ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೨೭೪). ಹೀಗೆ ಅಸಂಖ್ಯಾತ ಸ್ತ್ರೀಯರು ಒಟ್ಟಿಗೆ ಹೋದಾಗ ದಾಖಲಿಸುವುದು ಕಷ್ಟವಾಗುತ್ತದೆ.

ಸತಿ ಹೋಗಲಿಚ್ಛಿಸುವ ಹೆಣ್ಣುಮಕ್ಕಳು ಸಾಮಾನ್ಯ ವರ್ಗದವರಾಗಿದ್ದರೆ ಯಾವುದೇ ಆಡಂಬರವಿಲ್ಲದೆ ಪತಿ ಮರಣ ಹೊಂದಿದ ವಿಷಯ ಕೇಳಿ ಆತನಿಗೆ ಸಿದ್ಧಮಾಡಿದ ಚಿತೆಯಲ್ಲಿ ತಾವು ಹೋಗಿ ಬೀಳುತ್ತಿದ್ದರು. 'ಉನ್ನತವರ್ಗದ ಮಹಿಳೆಯಾಗಿದ್ದರೆ ಕುದುರೆ ಏರಿ ಬಂಧು ಬಾಂಧವರೊಂದಿಗೆ, ಊರಿನ ಸಮಸ್ತರ ಸಮಕ್ಷಮದಲ್ಲಿ, ವಾದ್ಯಮೇಳ ಸಮೇತ ಮೆರವಣಿಗೆಯೊಂದಿಗೆ ಹೊಂಡದ ಕಡೆ ಹೋಗುತ್ತಿದ್ದರು(ನಾಗೇಗೌಡ ಎಚ್. ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೬೮). ಕರ್ನಾಟಕದ ಹೆಗ್ಗಡದೇವನಕೋಟೆ ಬೆಳತೂರಿನ ಶಾಸನಶಿಲ್ಪದಲ್ಲಿ ದೇಕಬ್ಬೆ ಊರಿನ ಪ್ರಮುಖ ಬಂಧುಬಾಂಧವರ ಜೊತೆ ಮೆರವಣಿಗೆ ಸಮೇತ ಅಗ್ನಿಕುಂಡಕ್ಕೆ ಬರುವ ದೃಶ್ಯವಿದೆ. ದೇಕಬ್ಬೆ ಪತಿ ಏಚನು ದೊರೆಯ ಕಡೆಯವರು ಮತ್ತು ತನಗೆ ದಾಯಾದಿಗಳಾಗಿದ್ದವರನ್ನು ಕೊಂದ ನಿಮಿತ್ತ ಏಚನನ್ನು ಕರೆಸಿ ಕೊಲ್ಲುತ್ತಾರೆ. ಆ ವಿಷಯ ಕೇಳಿದ ದೇಕಬ್ಬೆ ತನ್ನ ಪತಿಯ ಊರಾದ ಪೆರ್ವಯಲ್ಲಿ ಸಹಗಮನ ಮಾಡಿದಳು. (E.C. III, ಹೆಗ್ಗಡದೇವನಕೋಟೆ, ೬೦). ಈ ರೀತಿ ಪತಿಯು ದೂರದ ಊರಿನಲ್ಲೆಲ್ಲೋ ಸತ್ತಾಗ ಆತನ ಶವವಿಲ್ಲದಿದ್ದರೂ ಪತಿಯ ಮರಣದ ವಾರ್ತೆ ಕೇಳಿ ತಾವು ಇದ್ದಲ್ಲೇ ಚಿತೆ ಏರುವುದಕ್ಕೆ 'ಅನುಗಮನ' ಪದ್ಧತಿ ಎನ್ನುತ್ತಾರೆ(ಶೇಠಿ ಬಿ. ಎಸ್.; ಕರ್ನಾಟಕದಲ್ಲಿ ಸತಿ ಪದ್ಧತಿ, ಪುಟ ೧೨೧). ಹತ್ತನೇ ಶತಮಾನದಲ್ಲಿ ಲೋಕವಿದ್ಯಾಧರನ ಹೆಂಡತಿ ಸಾವಿಯಬ್ಬೆ ಬಾಗಿಯೂರಿನಲ್ಲಿ ಸತಿಹೋದಳು(E.C. II, ಶ್ರವಣಬೆಳಗೊಳ, ೧೭೨). ಚಿಕ್ಕೆರೆಹಳ್ಳಿ ಸ್ಮಾರಕದಲ್ಲಿ ಪೆರ್ಮಾಡಿ ಗಾವುಂಡನು ಕಾಳಗದಲ್ಲಿ ಮಡಿದಾಗ ಆತನ ಸತಿ ಸಹಗಮನ ಮಾಡಿ ಸ್ವರ್ಗಕ್ಕೆ ಹೋದಳು(E.C. XII, ಕಡೂರು, ೯೯). ಒಂಬತ್ತು ಮತ್ತು ಹತ್ತನೇ ಶತಮಾನದಲ್ಲಿ ನಮಗೆ ಸತಿ ಸ್ಮಾರಕಗಳು ದೊರೆಯುವುದು ವರ್ಷಕ್ಕೆ ಒಂದು ಅಥವಾ ಎರಡು ಅಂದರೆ ಸತಿ ಪದ್ಧತಿ ಇನ್ನೂ ತೀವ್ರಸ್ವರೂಪ ತಳೆದಿರಲಿಲ್ಲ. ಇದು ಆರಂಭಿಕ ಹಂತ ಎಂದು ಹೇಳಬಹುದು. ಮೇಲ್ವರ್ಗದವರು ಸತಿ ಹೋದಾಗ ಸ್ಮಾರಕ ರೂಪದಲ್ಲಿ ದಾಖಲಾಗುತ್ತವೆ. ಕೆಳವರ್ಗದವರಲ್ಲಿ ಸತಿ ಹೋದವರು ಕೆಲವೇ ಬೆರಳೆಣಿಕೆಯಷ್ಟಿರಬಹುದು. ಮುಂದೆ ಹನ್ನೊಂದನೇ ಶತಮಾನದಲ್ಲಿ

ಸತಿ ಘಟನೆಗಳು ಅಂತಹ ತೀವ್ರ ಬೆಳವಣಿಗೆಯನ್ನು ಕಾಣುವುದಿಲ್ಲ. ಕ್ರಿ.ಶ. ೧೦೫೭ರಲ್ಲಿ ನಡೆದ ಬೆಳತೂರಿನ ದೇಕಬ್ಬೆ ಸತಿ ಹೋದದ್ದು ಒಂದು ಮಹತ್ವದ ದಾಖಲೆಯಾಗಿ ಉಳಿದೆ. ಇಷ್ಟೊಂದು ವಿವರಣಾತ್ಮಕವಾಗಿ ಸತಿ ಘಟನೆಯನ್ನು ಯಾವ ಸತಿ ಸ್ಮಾರಕ ಶಾಸನವೂ ನೀಡುವುದಿಲ್ಲ. ಈ ಶಾಸನ ಸತಿಪದ್ಧತಿಯನ್ನು ಸಕಾರಾತ್ಮಕವಾದ ಕಾರಣವನ್ನಾಗಿ ತೋರಿಸಿಕೊಟ್ಟಿದೆ. ಎಲ್ಲೂ ಇದೊಂದು ಒತ್ತಡದಿಂದ ನಡೆಯುತ್ತಿದ್ದ ಪದ್ಧತಿ ಎಂದು ತೋರಗೊಡದಂತೆ ಶಾಸನ ಮಾಹಿತಿಯನ್ನು ಒಳಗೊಂಡಿದೆ(E.C. III, ಹೆಗ್ಗಡದೇವನಕೋಟೆ ೬೦). ಈ ಕಾಲಾವಧಿಯಲ್ಲಿ ಸತಿ ಪದ್ಧತಿ ಎಲ್ಲೋ ಒಂದು ಘಟನೆಯಾಗಿ ನಮಗೆ ತೋರುತ್ತದೆ. ಇದಿನ್ನೂ ಆರಂಭಿಕ ಹಂತವೆಂದು ಹೇಳಬಹುದು. ಮುಂದಿನ ಐದು ಶತಮಾನಕ್ಕೆ ಇದು ಎಲ್ಲರೂ ಸಾರ್ವತ್ರಿಕವಾಗಿ ಅನುಸರಿಸುವ ಪದ್ಧತಿ ಸ್ವರೂಪವನ್ನು ಪಡೆದುಕೊಂಡಿತು. ಅಂದರೆ ಇದಕ್ಕೆ ಅಂತಹ ಪುರಾತನ ಇತಿಹಾಸವೇನೂ ಇಲ್ಲವೆನ್ನಬಹುದು.

ಕ್ರಿ.ಶ. ೧೧೪೯ರ ಕೋಟೆವೂರ ಶಾಸನದಲ್ಲಿ ತಳಿಯ ಕುನ್ದದ ಬೀಡಿನಹಟ್ಟಿ ಗೊರವೆನಾಯಕ ಮದವಳಿಗೆ ಬಮ್ಮಕ್ಕ ಸತ್ತು ಸುರಲೋಕ ಪ್ರಾಪ್ತಳಾದಳು(E.C. XI, ಚಿಕ್ಕಮಗಳೂರು, ೧೪೫). ಕ್ರಿ.ಶ. ೧೧೨೭ರಲ್ಲಿ ದೊಡ್ಡ ಮುದ್ದಣ್ಣನು ಕಳ್ಳನ ಜೊತೆ ಹೋರಾಡಿ ಮರಣ ಹೊಂದಿದಾಗ ಆತನ ಹೆಂಡತಿ ಮಾಲವ್ವೆ ಸತಿ ಹೋದಳು(E.C. IX, ಬೇಲೂರು, ೧೮೫). ಕ್ರಿ.ಶ. ೧೧೩೪ರ ಹುತ್ತ ಗ್ರಾಮದ ಶಾಸನದಲ್ಲಿ ವೀರನೊಬ್ಬ ಸೂರ್ಯಲೋಕ ಪ್ರಾಪ್ತನಾದ ಸಂದರ್ಭದಲ್ಲಿ ಆತನ ಹೆಂಡತಿ ಪುರುಷವ್ರತವನ್ನು ಕೈಗೊಂಡು ಉತ್ತಮ ಗ್ರಾಮದಲ್ಲಿ ಮರಣ ಹೊಂದಿದಳು(E.C. XIII, ಶಿವಮೊಗ್ಗ, ೩೮). ಪುರುಷವ್ರತ ಗಂಡನ ಸಾವಿನೊಂದಿಗೆ ತಾವು ಸಹಗಮನ ಮಾಡುವುದಾಗಿ ಮೊದಲೇ ತೀರ್ಮಾನಿಸಿಕೊಂಡಿರುವುದಕ್ಕೆ ಮತ್ತು ವ್ರತದಂತೆ ಪಾಲಿಸುವುದಕ್ಕೆ ಹೀಗೆ ಉಲ್ಲೇಖಿಸಿರಬಹುದು. ಕ್ರಿ.ಶ. ೧೧೮೧ರ ಶಾಸನವು ಸತಿ ಹೋದವಳನ್ನು ಶಿವಪಾದ ಶೇಖರ ಶಿವಕಥಾಳಾಪೆ ಎಂದು ಉಲ್ಲೇಖಿಸಿದೆ(E.C. IV, ನಾಗಮಂಗಲ, ೮೭). ಹನ್ನೊಂದನೇ ಶತಮಾನದಲ್ಲೂ ಹಿಂದೆ ನಡೆದಷ್ಟೇ ಅಂದರೆ ಸತಿ ಘಟನೆಗಳು ಕಡಿಮೆ ಎಂದೇ ಹೇಳಬಹುದು. ೧೧ನೇ ಶತಮಾನದಲ್ಲಿ ನಡೆದ ಸತಿ ಘಟನೆಗಳು ಕಡಿಮೆ ಸಂಖ್ಯೆಯಲ್ಲಿವೆ. ಮತ್ತೆ ನಾವು ಈ ಘಟನೆಗಳನ್ನು ಗುರುತಿಸುವುದಾದರೆ ಕರಾವಳಿ ಕರ್ನಾಟಕದ ಭಾಗಗಳಲ್ಲೇ ಗುರುತಿಸಬೇಕು. ಉತ್ತರ ಕರ್ನಾಟಕಕ್ಕೆ ಬಂದರೆ ಸತಿ ಹೋದ ಆಧಾರವೇ ನಮಗೆ ದೊರೆಯುವುದಿಲ್ಲ. ಕಾರಣ ಇಲ್ಲಿ ಶರಣರ ಸಮಾಜ ಸುಧಾರಣೆ ಕಾಲ ಆರಂಭವಾಗಿತ್ತು. ಅದರ ಪ್ರಭಾವದಿಂದ ಈ ಭಾಗದಲ್ಲಿ ಸತಿ ಹೋಗುವುದಕ್ಕೆ ಅವಕಾಶ ದೊರೆತಿಲ್ಲ. ಮುಂದಿನ ಕಾಲಘಟ್ಟದಲ್ಲೂ ಶರಣರ ಪ್ರಭಾವವಿರುವ ಮತ್ತು ಶರಣರ ನೆಲೆವೀಡುಗಳಲ್ಲಿ ಸತಿ ಘಟನೆಗಳು ಸಿಗುವುದು ಅಪರೂಪವೆಂದೇ ಹೇಳಬಹುದು. ಅಂದರೆ ಅದೊಂದು ತಡೆಗಟ್ಟಬಹುದಾದ ಪದ್ಧತಿಯಾಗಿತ್ತು ಎಂದು ಇದರಿಂದ ಅರ್ಥವಾಗುತ್ತದೆ. ಅಂತಹ ಪ್ರಯತ್ನವನ್ನು ಬೇರೆ ಕಡೆ

ಯಾರೂ ಮಾಡಲಿಲ್ಲ. ಸತಿಪದ್ಧತಿ ತಡೆಯುವುದು ಅವರಿಗೆ ಬೇಕಿರಲಿಲ್ಲ. ಏಕೆಂದರೆ ಇದೊಂದು ಪ್ರಯುತ್ನಪೂರ್ವಕವಾಗಿ ರೂಪಿಸಿದ ಪದ್ಧತಿಯಾಗಿದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೨೮೬ರ ಬೆಳಗಾವಿ ಶಾಸನದಲ್ಲಿ ಗಣೇಶ್ವರ ಮತ್ತು ಆತನ ಪತ್ನಿ ಜೊಂಮ್ಮಾಯಿ ಪತಿವ್ರತಾಗುಣದಿಂದ ಯುದ್ಧಭೂಮಿಯಲ್ಲಿಯೇ ಅಗ್ನಿಪ್ರವೇಶ ಮಾಡಿ ಸ್ವರ್ಗಪ್ರಾಪ್ತರಾದರು (E.C. VII (I) (ರೈ), ಶಿಕಾರಿಪುರ ೧೪೧). ಪತಿ ಯುದ್ಧಭೂಮಿಯಲ್ಲಿ ಮಡಿದ ವಿಷಯ ಕೇಳಿ ಅಲ್ಲಿಯೇ ಅಗ್ನಿಕುಂಡ ಸಿದ್ಧತೆ ಮಾಡಿ ಚಿತೆ ಪ್ರವೇಶ ಮಾಡಿರಬಹುದಾಗಿದೆ. ಈ ಕಾಲಾವಧಿಯಲ್ಲಾಗಲೇ ಸ್ವಲ್ಪ ತೀವ್ರ ಸ್ವರೂಪವನ್ನು ಪಡೆದುಕೊಂಡಿತೆನ್ನಬಹುದು. ಇಲ್ಲಿ ಮರಣದ ವಾರ್ತೆ ಕೇಳಿ ಆವೇಶದಿಂದ ಚಿತೆಗೆ ಅರ್ಪಿಸಿಕೊಳ್ಳಲಾಗಿದೆ. ಕ್ರಿ.ಶ. ೧೨೮೭ರ ಹಾರೋಬೆನವಳ್ಳಿ ಸ್ಮಾರಕದಲ್ಲಿ ತುರುಕಾಳಗದಲ್ಲಿ ಬೊಮ್ಮನಾಯಕ ಮೃತಪಟ್ಟಾಗ ಆತನ ಹೆಂಡತಿ ತನ್ನ ತೋಳು ಕೈಗೊಟ್ಟು ಸ್ವರ್ಗಪ್ರಾಪ್ತಳಾದಳು(E.C. XIII, ಶಿವಮೊಗ್ಗ ೧೦೮). ಕ್ರಿ. ಶ. ೧೨೯೯ರ ಹೊಸನಗರ ಶಾಸನದಲ್ಲಿ ಸೇಣಿಗೆ ಬೊಮ್ಮೆಯ ನಾಯಕನು ಮಡಿದಾಗ ಆತನ ಹೆಂಡತಿ ಬಾಸೆಯ ಬೊಮ್ಮಕ್ಕ ಕಿಚ್ಚು ಹಾಯ್ದಳು(E.C. XV ಸಾಗರ, ೨೦೫). ಕ್ರಿ.ಶ. ೧೩೮೬ರಲ್ಲಿ ಮಲೆಯಂದೂರ ಬಯಿಚಿಸೆಟ್ಟಿ ತೀರಿದಲ್ಲಿ ಆತನ ಹೆಂಡತಿ ಬೊಂಮಕ್ಕ ಮಹಾಸತಿಯಾದಳು(E.C. XV ಸಾಗರ ೧೭೦). ಸಿಡೆನೂರು ಶಾಸನದಲ್ಲಿ ಚೆನ್ನಪ್ಪನ ಪತ್ನಿಯು ಸತಿ ಹೋದ ಮಾಹಿತಿ ಇದೆ(SII. XX, 356). ಹನ್ನೆರಡನೇ ಶತಮಾನದಲ್ಲಿ ಸತಿ ಹೋದ ಶಾಸನಗಳು ನಮಗೆ ಸಾಲು ಸಾಲಾಗಿ ದೊರೆಯುತ್ತವೆ. ಈ ಪದ್ಧತಿ ೯ನೇ ಶತಮಾನದಿಂದ ಆಚರಣೆಯಲ್ಲಿ ಏರಿಕೆ ಕ್ರಮದಲ್ಲಿ ಸಾಗಿದೆ. ಹೊಯ್ಸಳ ಅಧಿಕಾರ ಅವಧಿಯಲ್ಲಿ ಜಾರಿಯಲ್ಲಿದ್ದರೂ ನಿಗದಿತವಾಗಿ ಒಂದು ಗತಿಯಲ್ಲಿ ಆಚರಣೆಯಲ್ಲಿತ್ತು. ಅದು ತನ್ನ ಔನ್ನತ್ಯವನ್ನು ಮುಟ್ಟಿದ್ದು ವಿಜಯನಗರ ಸಾಮ್ರಾಜ್ಯದ ಕಾಲಕ್ಕೆ. ಇಲ್ಲಿ ದಾಖಲೆ ಸಿಗದಷ್ಟು ಸತಿಯರು ಸಹಗಮನ ಮಾಡಿದರು.

ಕ್ರಿ.ಶ. ೧೪೦೮ರಲ್ಲಿ ತಿರುಕಗೌಡ ವೈರಿಗಳ ಜೊತೆ ಹೋರಾಡಿ ಮರಣ ಹೊಂದಿದಾಗ ಆತನ ಮದವಳಿಗೆ ಸಹಗಮನ ಮಾಡಿ ದಂಪತಿಗಳು ಸಹಿತ ದೇವಲೋಕ ಪ್ರಾಪ್ತರಾದರು(E.C. XV, ಹೊಸನಗರ, ೭೨). ಕ್ರಿ.ಶ. ೧೪೧೭ರ ಹಾಡ್ಲೆಯ ಪುರದ ಮಾರಭಕ್ತನ ಮಗಭ[ಕ್ತ] ಭಕ್ತನು ಸ್ವರ್ಗಸ್ಥನಾದಾಗ ಆತನ ಹೆಂಡತಿಯರು ಮೂವರು ತೋಳಕಯಿ ಕೊಟ್ಟ ಕಂಬ(E.C. VII, ಮಂಡ್ಯ, ೭೩). ಹತ್ತನೇ ಶತಮಾನದಿಂದ, ಕ್ರಿ.ಶ. ೧೪೨೦ರಲ್ಲಿ ಹೊಸಮನೆ ಶಾಸನ ಬೀರಗೌಡನು ತುರುಗಳನ್ನು ಸೆರೆಯಿಂದ ಬಿಡಿಸಿ ತರುವಾಗ ಮಡಿದನು. ಆತನ ಸತಿ ಗೌರಾಯಿ ಸಹಗಮನ ಮಾಡಿದಳು(E.C. XV, ಸಾಗರ ೨೫೨) ಕ್ರಿ.ಶ. ೧೪೧೧ರ ಮರೂರು ಶಾಸನದಲ್ಲಿ ಮಾದಪ್ಪನು ಸ್ವರ್ಗಸ್ಥನಾದಾಗ ಹೆಂಡತಿ ಮಸಣಕ್ಕ ಸಹಗಮನವಾದಳು(E.C. XV, ಸಾಗರ ೧೬೫). ಹದಿನಾಲ್ಕನೇ ಶತಮಾನದ ಮಲ್ಲಂದೂರು ಶಾಸನದಲ್ಲಿ ಮಾದರಕಾಳ ಬೇಡರ ಹುಯಿಲಲ್ಲಿ ಮರಣ ಹೊಂದಿದಾಗ ಆತನ ಸತಿ ಬೊಮ್ಮಾಂಬೆ ಕಾದಿ ಪರಮ ಪದವಿ

ಹೊಂದಿದಳು. ಬೊಮ್ಮಾಂಬೆ ಪತಿಯ ಜೊತೆ ತಾನು ಹೋರಾಟ ಮಾಡಿ ಪತಿ ಮರಣ ಹೊಂದಿದಾಗ ತಾನೂ ಸಹಗಮನ ಮಾಡಿರಬಹುದಾದ ಸಾಧ್ಯತೆ ಇದೆ(E.C. XV, ಸಾಗರ, ೧೭೨). ಹದಿನೈದನೇ ಶತಮಾನದವರೆಗೆ ಕ್ರಮವಾಗಿ ಸತಿಹೋದ ಘಟನೆಗಳು ಸಾಕಷ್ಟು ಲಭ್ಯವಾಗಿವೆ. ಕ್ರಿ.ಶ. ೧೫೦೬ರ ಉದ್ರಿಗ್ರಾಮದ ಮಲ್ಲಗೌಡನ ಮಗನ ಮರಣವನ್ನು ತಿಳಿಸುತ್ತದೆ. ಈ ಸ್ಮಾರಕ ಶಿಲೆಯು ಮಾಸ್ತಿ ಶಿಲ್ಪವಾಗಿದ್ದು ಹಾಗಾಗಿ ಇಲ್ಲಿ ಮಲ್ಲಗೌಡನ ಪತ್ನಿ ಸತಿ ಹೋಗಿದ್ದು ಸ್ಪಷ್ಟವಾಗುತ್ತದೆ(E.C. VIII (ರೈ), ಸೊರಬ ೧೫೫) ಕ್ರಿ.ಶ. ೧೫೮೯ರ ಹರೂರು ಶಾಸನ ಬೊಮ್ಮಗೌಡ ಸ್ವರ್ಗಸ್ಥನಾದಾಗ ಆತನ ಸತಿ ಬೊಮ್ಮಿಗೌಡಿ ಸಮಾಧಿ ಕುಳಿತು ಸ್ವರ್ಗಸ್ಥಳಾದಳು(E.C. VIII (ರೈ), ಸೊರಬ ೧೬೫). ಕ್ರಿ.ಶ. ೧೬೮೯ರ ಕೆಳದಿ ಶಾಸನ ದೇವರಾಯ ಒಡೆಯರ ಆಳ್ವಿಕೆಯ ಕಾಲದಲ್ಲಿ ಕೆಳದಿಯ ಕರಿಯ ತಿಮ್ಮೇಗೌಡನು ಸ್ವರ್ಗಸ್ಥನಾದಾಗ ಆತನ ಮದವಳಿಗೆ ರಾಮಕ್ಕನು ಮಹಾಸತಿಯಾದಳು(E.C. VIII, (ರೈ) ಸಾಗರ ತಾಲೂಕು ೩೫).

**ಇ) ಸತಿಹೋಗುವ ಸಂದರ್ಭ**

ಕ್ರಿ.ಶ. ಒಂಬತ್ತನೇ ಶತಮಾನದಲ್ಲಿ ಸತಿ ಹೋದವರ ನಿದರ್ಶನಗಳು ವಿರಳವಾಗಿ ಗೋಚರಿಸುತ್ತವೆಯಾದರೂ ಹತ್ತನೇ ಶತಮಾನದಿಂದೀಚೆಗೆ ಹೆಚ್ಚು ಪ್ರಚಲಿತವಾಯಿತು. ಸತಿ ಹೋಗುವವರು ಇಂಥದ್ದೇ ವರ್ಗ ಸಮುದಾಯಕ್ಕೆ ಸೇರಿದವರಲ್ಲ. ಎಲ್ಲ ವರ್ಗದ ಮಹಿಳೆಯರು ಸತಿ ಹೋಗುತ್ತಿದ್ದರು. ಸತಿ ಶಿಲ್ಪಗಳನ್ನು ನಾವು ಗಮನಿಸುವುದಾದರೆ ಅವರ ಅಲಂಕಾರ, ಕೇಶವಿನ್ಯಾಸ, ಉಡುಗೆ, ಧರಿಸಿದ ಆಭರಣಗಳನ್ನು ಗಮನಿಸಿದಾಗ ಅವರಾರು ಉನ್ನತ ವರ್ಗದ ಮಹಿಳೆಯರು ಧರಿಸುವಂತಹವಾಗಿರಲಿ, ಕೇಶಾಲಂಕಾರಕ್ಕೆ ಬಳಸಿದ್ದು ಸಾಮಾನ್ಯ ಮಹಿಳೆಯರು ಪ್ರತಿನಿತ್ಯ ಮುಡಿಯುವ ಹೂವು ಅದರಲ್ಲೂ ಕೇದಗೆ, ಸೇವಂತಿಗೆಯಂತಹ ದೊಡ್ಡ ಹೂವುಗಳನ್ನು ವಿಭಿನ್ನವಾಗಿ ಅಲಂಕರಿಸಿಕೊಂಡಿರುವರು. ಅದಕ್ಕೆ ಬೆಂಡಿನಂತಹ ವಸ್ತುವನ್ನು ವೃತ್ತಾಕಾರಕ್ಕೆ ಬಳಸಿಕೊಂಡಿದ್ದಾರೆ. ಕೇದಗೆ ಕೂಡ ಹೂವಿನಂತೆ ಮುತ್ತೈದೆ ತನದ ಸಂಕೇತ. ಅಲ್ಲದೆ ಇದನ್ನು ಸಾಮಾನ್ಯ ವರ್ಗದ ಮಹಿಳೆಯರು ಹೆಚ್ಚಾಗಿ ಬಳಕೆ ಮಾಡುತ್ತಾರೆ. ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಹಬ್ಬದ ದಿನಗಳಲ್ಲಿ ವಿಶೇಷವಾಗಿ ತಮ್ಮ ಉದ್ದದ ಜಡೆಗೆ ಹೆಣೆಯುತ್ತಾರೆ. ಸತಿ ಶಿಲ್ಪದಲ್ಲಿ ಹೂವಿನ ಆಕಾರದಲ್ಲಿ ಹೆಣೆದು ತುರುಬಿಗೆ ಮುಡಿದಂತೆ ಮುಡಿಯುತ್ತಾರೆ. ಮೇಲ್ವರ್ಗದ ಮಹಿಳೆಯರು ಕೇಶಕ್ಕೆ ಬಂಗಾರ, ಬೆಲೆಬಾಳುವ ಮುತ್ತು, ಹರಳಿನ ಆಭರಣಗಳನ್ನು ಸಿಂಗರಿಸಿಕೊಳ್ಳುತ್ತಾರೆ. ಆದರೆ ಅಂದು ಮುತ್ತೈದೆತನದ ಸಂಕೇತವಾಗಿ ಹೆಣ್ಣು ಮುಡಿಯುವುದು ವಿಶೇಷವಾಗಿತ್ತು. ಹಾಗಾಗಿ ಸತಿ ಶಿಲ್ಪಗಳಲ್ಲಿ ಸತಿಹೋಗುವವರು ಕೇದಗೆಯನ್ನು ಮುಡಿಯುತ್ತಿದ್ದರು. ಒಂದು ಕೈಯಲ್ಲಿ ನಿಂಬೆಹಣ್ಣು(ಕೆಲವು ಕಡೆ ತೆಂಗಿನಕಾಯಿ ಹಿಡಿದಿರುತ್ತಾರೆ). ಮತ್ತೊಂದು ಕೈಯಲ್ಲಿ ಕನ್ನಡಿ ಹಿಡಿದಿರುತ್ತಾಳೆ.

ನಿಂಬೆಹಣ್ಣನ್ನು ಪೂಜೆಯ ಶುಭ ಸಂದರ್ಭದಲ್ಲಿ ತಪ್ಪದೆ ಬಳಕೆ ಮಾಡಲಾಗುತ್ತದೆ. ಮದುವೆ ಹೆಣ್ಣಿನ ಕೈಯಲ್ಲಿ ನಿಂಬೆಹಣ್ಣು ಇರುತ್ತದೆ. ಸತಿ ಹೋಗುವವಳು ಮದುವೆ ಹೆಣ್ಣಿನ ಹಾಗೆಯೇ ಇರುತ್ತಾನೆ. ಅದಕ್ಕೆ ಕೈಯಲ್ಲಿ ನಿಂಬೆಹಣ್ಣು ಹಿಡಿದಿರುತ್ತಾಳೆ. ತನ್ನ ಅಲಂಕಾರವನ್ನು ಅಂತಿಮವಾಗಿ ಕಣ್ತುಂಬ ನೋಡುವ ಉದ್ದೇಶದಿಂದ ಕನ್ನಡಿಯನ್ನು ಹಿಡಿದಿರುತ್ತಾಳೆ. ಮರಣ ಹೊಂದಿದ ಪತಿಯನ್ನು ಅಪ್ಸರೆಯರು ಕರೆದೊಯ್ಯುತ್ತಾರೆ. ಅಪ್ಸರೆಯರಿಗಿಂತಲೂ ಸುಂದರವಾಗಿ ಕಾಣಲು ಸತಿ ಹೋಗುವಾಗ ಅಂತಿಮ ಅಲಂಕಾರ ಮಾಡಿಕೊಂಡಿರುತ್ತಾರೆಂದು ಹೇಳಬಹುದು. ಈ ಅಲಂಕಾರದ ಪದ್ಧತಿ ಈಗಲೂ ಮುಂದುವರಿದಿದೆ. ಪತಿ ಮರಣ ಹೊಂದಿದಾಗ ಆತನ ಸತಿಗೆ ಹೊಸ ಉಡುಗೆ ತೊಡಿಸಿ ಹೂವು ಕುಂಕುಮದಿಂದ ಅಲಂಕಾರ ಮಾಡಿ ಸತ್ತ ಪತಿಯ ಪಕ್ಕದಲ್ಲಿ ಕೂಡಿಸಿ ಇಬ್ಬರಿಗೂ ಆರತಿ ಎತ್ತುತ್ತಾರೆ. ಈ ಸಂಪ್ರದಾಯವನ್ನು ಪತಿ ಮೊದಲು ಮರಣಿಸಿದ ಪ್ರತಿಯೊಬ್ಬ ಸ್ತ್ರೀಯರಿಗೂ ಮಾಡಲಾಗುತ್ತದೆ. ಪತಿಯನ್ನು ಸಂಸ್ಕಾರ ಮಾಡುವಾಗ ಅವನ ಎದುರಿನಲ್ಲಿ ಅವಳ ಅಲಂಕಾರವನ್ನೆಲ್ಲ ಕಳಚುತ್ತಾರೆ.)

ಸತಿ ಹೋಗುವ ಶಾಸನಶಿಲ್ಪ ಕೈಯಲ್ಲಿ ಗಿಂಡಿ ಹಿಡಿದಿರುವುದನ್ನು ನೋಡಬಹುದು. ಇದು ವಿದೇಶಿ ಬರಹಗಾರರ ಪ್ರಕಾರ ಎಣ್ಣೆ ತುಂಬಿದ ಗಿಂಡಿ(ನಾಗೇಗೌಡ ಎಚ್.ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೨೭೩). ಇದು ಚಿತೆಗೆ ಧುಮುಕಿದ ತಕ್ಷಣ ಒಮ್ಮೆಲೇ ಬೆಂಕಿ ಹೊತ್ತಿಕೊಳ್ಳಲಿ ಎಂಬ ಕಾರಣಕ್ಕೆ. "ಅನುಕೂಲಸ್ಥಳಾದವಳು ಚಿತೆಗೆ ಬೀಳುವ ಮುನ್ನ ನೆಂಟರಿಷ್ಟರನೆಲ್ಲಾ ಸೇರಿಸಿ ಊಟೋಪಚಾರ ಮಾಡಿ ಕುದುರೆ ಮೇಲೆ ಮೆರವಣಿಗೆ ಹೊರಡುತ್ತಾಳೆ. ಕುದುರೆ ಬಿಳಿ ಇಲ್ಲವೇ ಬೂದು ಬಣ್ಣದ್ದಿರಬೇಕು. ಚಿತೆ ಬಳಿಗೆ ಬಂದು ಪೂರ್ವಾಭಿಮುಖವಾಗಿ ನಿಂತು ಮೂರು ಸಲ ನಮಸ್ಕಾರ ಮಾಡಿ ತೊಟ್ಟ ಆಭರಣಗಳನ್ನೆಲ್ಲಾ ನೆಂಟರಿಷ್ಟರಿಗೆ ಹಂಚಿ ಸೇರಿದ ಜನಕ್ಕೆ ಹೀಗೆ ಹೇಳುತ್ತಾಳೆ. "ನೋಡಿ ಗಂಡನೊಡನೆ ಸಾಯುವ ಹೆಂಗಸಿಗೆ ನೀವೆಷ್ಟು ಕೃತಜ್ಞರಾಗಿರಬೇಕೆಂಬುದನ್ನು ಎಂದು ಹೇಳಿ" ಹೆಂಗಸರ ಕುರಿತು "ನಿಮ್ಮ ಪತಿಭಕ್ತಿ ಎಷ್ಟಿರಬೇಕೆಂಬುದನ್ನು ನೆನೆಸಿಕೊಳ್ಳಿ, ನನ್ನಂತೆ ನೀವು ನಿಮ್ಮ ಪತಿಯರನ್ನು ಅನುಸರಿಸಬೇಕು" ಎನ್ನುತ್ತಾಳೆ. ಕೈಯಲ್ಲಿ ಎಣ್ಣೆ ಗಡಿಗೆ ತಲೆಮೇಲಿಟ್ಟು ಪ್ರಾರ್ಥನೆ ಮಾಡಿ ಮೂರುಸಲ ಚಿತೆಗೆ ಪ್ರದಕ್ಷಿಣೆ ಮಾಡಿ ಉರಿಯುವ ಚಿತೆಗೆ ಎಣ್ಣೆಗಡಿಗೆ ಎಸೆದು ಅಗ್ನಿಕುಂಡದಲ್ಲಿ ಧುಮುಕುತ್ತಾಳೆ. ಆಕೆ ಮೇಲೆ ಎಣ್ಣೆ, ತುಪ್ಪ, ಒಣ ಸೌದೆ ಹಾಕುತ್ತಾರೆ"(ನಾಗೇಗೌಡ ಎಚ್.ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೨೭೩). ಚಿತೆ ಹಾಯುವ ಕೊನೆ ಘಳಿಗೆಯಲ್ಲೂ ಅವಳಿಂದ ಸತಿಹೋಗುವುದಕ್ಕೆ ಪುಷ್ಟಿದಾಯಕ ಮಾತುಗಳನ್ನಾಡಿಸಲಾಗಿದೆ. ತುಂಬಾ ಪರಿಣಾಮಕಾರಿಯಾಗಿರುತ್ತದೆ ಎನ್ನುವ ಕಾರಣಕ್ಕಿರಬೇಕು.

ಸತಿಹೋಗುವ ಸಂದರ್ಭವನ್ನು ಕಣ್ಣಾರೆ ಕಂಡ ವಿದೇಶಿ ಪ್ರವಾಸಿಗರ ಬರವಣಿಗೆ ಮತ್ತು ಶಾಸನಶಿಲ್ಪ ನೋಡಿದಾಗ ಸತಿಹೋಗುವ ಪದ್ಧತಿ ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ಹೀಗೆ ಇರಬಹುದೆನಿಸುತ್ತದೆ. ಸತಿಹೋಗುವ ಮಹಿಳೆಗೆ ಎಲ್ಲೂ ವಿರೋಧಿ ಭಾವವಿರಲಿಲ್ಲವೆಂಬ

ಅಂಶವನ್ನು ವಿದೇಶಿ ಬರಹಗಾರರು ವ್ಯಕ್ತಪಡಿಸಿಲ್ಲ. ಯಾವ ಮಹಿಳೆಯೂ ಸತಿಹೋಗುವುದಕ್ಕೆ ಬಹಿರಂಗವಾಗಿ ವಿರೋಧಿಸಿಲ್ಲ. ಅವರ ಸಮ್ಮತಿಯ ಹಿಂದೆ ಸಮಾಜದ ಒತ್ತಡವಿದೆ ಎನ್ನುವುದನ್ನು ಕಾರಣಗಳಲ್ಲೇ ನೋಡಲಾಗಿದೆ. ಸ್ವಂತ ಇಚ್ಛೆಯಿಂದ ಸಹಗಮನ ಮಾಡುವ ಹೆಣ್ಣುಮಗಳು ದೇಹಕ್ಕಾಗುವ ನೋವನ್ನು ಸಹಿಸಲಾಗದೆ ಭಯದಿಂದ ಹಿಂದೆ ಸರಿಯುವುದಿಲ್ಲ. ಆದರೆ ಈ ರೀತಿ ಹಿಂದೆ ಸರಿಯುವ ಸಾಧ್ಯತೆ ಇದ್ದ ಕಾರಣಕ್ಕೆ ಅವರು ಭಯಂಕರವಾಗಿ ಉರಿಯುವ ಬೆಂಕಿಯನ್ನು ನೋಡಬಾರದೆಂದು ಅವರಿಗೂ ಬೆಂಕಿಗೂ ಮಧ್ಯೆ ಗಂಡಸರು ಒಂದು ಪರದೆ ಹಿಡಿದು ನಿಂತಿರುತ್ತಿದ್ದರು ಎನ್ನಲಾಗುತ್ತದೆ(ನಾಗೇಗೌಡ ಎಚ್. ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೬೮). ಚಿತೆಯನ್ನು ತಗ್ಗಾದ ಗುಂಡಿಯನ್ನು ತೆಗೆದು ಮಾಡುತ್ತಿದ್ದರಂತೆ. ಬೆಂಕಿ ಎತ್ತರವಾಗಿ ಕಾಣದಿರಲೆಂದು, ಚಿತೆಗೆ ಧುಮುಕಿದ ತಕ್ಷಣ ಎಣ್ಣೆ ತುಪ್ಪದಂಥ ಪದಾರ್ಥ ಹಾಕಿ ಒಣ ಸೌದೆಯನ್ನು ಹಾಕುತ್ತಿದ್ದುದು ಅವಳು ಜೀವ ಉಳಿಸಿಕೊಳ್ಳುವ ಆಸೆಯಿಂದ ಹೊರಗೆ ಎದ್ದು ಬರದಿರಲೆಂದಾಗಿದೆ. ಸಾಯಲು ಬಯಸುವವರು ಹೀಗೆ ಮಾಡಲು ಸಾಧ್ಯವಿಲ್ಲ. ಅಂತಹ ಪ್ರಸಂಗಗಳು ನಡೆದಿರುತ್ತವೆ, ಆ ಕಾರಣಕ್ಕೆ ಕೊನೆ ಘಳಿಗೆಯಲ್ಲೂ ಒತ್ತಡ ಹಾಕಲಾಗಿರುತ್ತದೆ. ಉರಿಯುವ ಬೆಂಕಿಗೆ ಭಯಪಟ್ಟು ಸಾವಿನ ನಿರ್ಧಾರದಿಂದ ಹಿಂದೆ ಸರಿಯಬಹುದೆಂಬ ಕಾರಣಕ್ಕೆ ಹೀಗೆಲ್ಲಾ ಮಾಡುತ್ತಿದ್ದರು. ಅವಳ ಆಹ್ವಾನಕ್ಕಾಗಿ ಮುಂದೆ ಧಗಧಗಿಸುವ ಬೆಂಕಿ ಹಿಂದೆ ಸರಿಯಬೇಕೆಂದು ಅಪೇಕ್ಷಿಸಿದರೂ ಅವಳ ಸಾವನ್ನು ಬಯಸುವ ಮನುಸ್ಸುಗಳು ಮುಂದೆ ತಳ್ಳುತ್ತಿರುತ್ತವೆ. ಮುಂದೆ ಬೆಂಕಿಯಲ್ಲಿ ಹೋಗಲೇಬೇಕು. ಹಿಂದೆ ಸರಿದರೆ ಅವಳಿಗೆ ಜೀವನಕ್ಕೆ ಅವಕಾಶವೇ ಇಲ್ಲ. ಅವಳ ಮುಂದಿರುವ ಬೆಂಕಿಗಿಂತಲೂ ಈ ಸಮಾಜ ಭಯಂಕರವಾಗಿದೆ ಅವಳ ಪಾಲಿಗೆ.

**ಈ) ಸತಿಹೋಗದ ಮಹಿಳೆಯರ ಜೀವನ**

ಪತಿಯ ಜೊತೆ ಸಹಗಮನ ಮಾಡದೆ ಸಮಾಜದ ಮಾನ್ಯತೆ ಪಡೆದು ಜೀವನ ನಡೆಸುತ್ತಿರುವ ಮಹಿಳೆಯರು ತಮ್ಮ ಜೀವನ ವಿಧಾನವನ್ನು ಹೇಗೆ ಬದಲಾಯಿಸಿಕೊಳ್ಳಬೇಕಿತ್ತು? ಪತಿ ಇದ್ದಾಗಿನ ಜೀವನದಂತೆ ಅವರ ಜೀವನ ಇರುತ್ತಿರಲಿಲ್ಲ ಆದರೆ ಅವರು ಯಾವ ವರ್ಗದ ಮಹಿಳೆಯರು ಎಂಬುದು ಇಲ್ಲಿ ಮುಖ್ಯ. ಚಿಕ್ಕ ಮಕ್ಕಳಿದ್ದರೆ ಅವರು ಸತಿಹೋಗುವುದರಿಂದ ವಿನಾಯಿತಿ ಪಡೆದಿದ್ದರು. ಮಹಾಭಾರತದಲ್ಲಿ ಮೊದಲು ನಮಗೆ ಸತಿಹೋದ ಸಾಹಿತ್ಯಕ ಆಧಾರ ದೊರೆತಿದೆ. ಅದರಲ್ಲಿ ಮಾದ್ರಿ ಕುಂತಿಗೆ ಹೀಗೆ ಹೇಳುತ್ತಾಳೆ. "ನೀನೀ ಕೂಸುಗಳಂ ಕಯ್ಕೊಂಡು ನಡುಪು, ನಲ್ಲನ್ ಎನಗೊಪ್ಪಿಸು"(ಪಂಪ; ಪಂಪಭಾರತ, ಬಸವರಾಜು ಎಲ್.(ಸಂ); ಪುಟ ೬೮). ನೀನು ಈ ಮಕ್ಕಳನ್ನು ನೋಡಿಕೋ ನಾನು ಪತಿಯ ಜೊತೆ ಸಹಗಮನ ಮಾಡುವುದಾಗಿ ಹೇಳುತ್ತಾಳೆ. ಒಬ್ಬಳೇ ಸತಿ ಇದ್ದಾಗಲೂ ಚಿಕ್ಕ ಮಕ್ಕಳಿದ್ದರೆ ಅಂಥವರು ಸಹಗಮನ ಮಾಡುವಂತಿರಲಿಲ್ಲ. ಒಂದು ವೇಳೆ ಮಕ್ಕಳಿಲ್ಲವೆಂದರೆ ಅಂಥವರು ಈ ಪದ್ಧತಿಯಿಂದ ಹಿಂದೆ ಸರಿಯುವಂತಿರಲಿಲ್ಲ. ಗುಂಡಮಬ್ಬೆ ವಿಚಾರದಲ್ಲಿ

ಹೀಗೆಯೇ ಆಗಿದೆ. ಗುಂಡಮಬ್ಬೆ ಅಕ್ಕ ಅತ್ತಿಮಬ್ಬೆಗೆ ಹೀಗೆಯೇ ಹೇಳುತ್ತಾಳೆ. 'ನಿನಗೆಮಗಂ ಜಗತ್ತಿಲಕ ನಿರ್ದಪನಕ್ಕ ಮಗಂ ಸಮರ್ಥನಪ್ಪಿನಮಿರು ನಾಗದೇವನೊಡನಾಂ ಬೆಸಕೀಳ್ದಪನೆಂದು ಬೇಡಿಕೊಂಡಿನಿಯನಪ್ಪಿಕೊಂಡು ಚಿತಮಾಗೆ ಚಿತಾಗ್ನಿಯೊಳಣ್ಮಿ ಸತ್ತ'(ರನ್ನ; ಅಜಿತ ತೀರ್ಥಂಕರ ಪುರಾಣ ಚರಿತ, ಹಂಪ ನಾಗರಾಜಯ್ಯ(ಸಂ); ರನ್ನಸಂಪುಟ, ಪುಟ ೧೧). ಜೈನಧರ್ಮವು ಇದಕ್ಕೆ ಹೊರತಾಗಿಲ್ಲ. ಸತಿಹೋಗದೆ ಉಳಿಯಬೇಕಾದರೆ ಜೀವನಪರ್ಯಂತ ಕಠಿಣ ತಪಸ್ಸು ವ್ರತಾಚರಣೆಯಲ್ಲೇ ಕಳೆಯಬೇಕು. ಅದು ಸಾಧ್ಯವಾಗದಿದ್ದರೆ ಸಹಗಮನ ಮಾಡಬೇಕು. ಗುಂಡಮಬ್ಬೆಗೆ ಸಹಗಮನ ಅನಿವಾರ್ಯವಾದರೆ, ಅತ್ತಿಮಬ್ಬೆಗೆ ಕಠಿಣ ವ್ರತಾಚರಣೆಯ ಜೀವನ ಅನಿವಾರ್ಯವಾಗಿತ್ತು. ಮಗ ಚಿಕ್ಕವನಿದ್ದುದು ಒಂದು ಕಾರಣವಷ್ಟೇ ಆಕೆ ಸಹಜ ಬದುಕು ನಡೆಸುವಂತಿರಲಿಲ್ಲ, ಯಾವ ಧರ್ಮದಲ್ಲೂ ವ್ಯವಸ್ಥೆ ಮಹಿಳೆಯ ಪರವಾಗಿ ನಿಂತಿಲ್ಲವೆನ್ನಬಹುದು. ಸಾವಿಗಿಂತ ಸನ್ಯಾಸ ಮೇಲು ಎಂಬುದೊಂದು ಸಣ್ಣ ಅವಕಾಶವಷ್ಟೆ. ಸನ್ಯಾಸಕ್ಕಿಂಥ ಜೀವನ ದೊಡ್ಡದು ಎಂದು ಯಾವ ಧರ್ಮವೂ ಹೇಳಲಿಲ್ಲ. ಗರ್ಭಿಣಿಯರಿಗೆ, ಚಿಕ್ಕಮಕ್ಕಳಿರುವ ತಾಯಂದಿರಿಗೆ ಸಹಗಮನವನ್ನು ಸ್ಮೃತಿಗಳು ನಿಷೇಧಿಸಿವೆ(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೩೪೯).

ಜೈನಧರ್ಮ ಬದುಕಿದರೆ ಹೀಗೇ ಬದುಕಬೇಕು, ಇಲ್ಲ ಎನ್ನುವುದಾದರೆ ಸಾಯಲೇಬೇಕು ಎನ್ನುವಂತಿದೆ ಅದರ ಧರ್ಮನೀತಿ. ರನ್ನ ಜೈನ ಧರ್ಮದ ಕಟ್ಟಳೆಯನ್ನು ಗುಂಡಮಬ್ಬೆಯಿಂದ ಹೇಳಿಸುತ್ತಾನೆ. 'ಕುಲವಧುವಾದವಳು ಪತಿಯ ಪರೋಕ್ಷದಲಿ ಮಾಡಬೇಕಾದ ಕರ್ತವ್ಯ, "ಜಿನದೀಕ್ಷಾಚರಣಂ" ಅಥವಾ "ಶುಭಚರಿತದೆ ಮರಣಂ". ಗಂಡನ ಸಾವಿನ ನಂತರ ಭೋಗಜೀವನ ನಡೆಸುವುದು ಪಾಪಕರ(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೩೪೯). ಅತ್ತಿಮಬ್ಬೆ ಸತಿ ಹೋಗದಿದ್ದರೂ ಮಹಾಸತಿ ಎಂದು ಹೊಗಳಿಸಿಕೊಂಡಳು. ಆಕೆ ಜೈನಧರ್ಮಕ್ಕಾಗಿಯೇ ತನ್ನ ಜೀವನವನ್ನು ಮುಡಿಪಾಗಿಟ್ಟಿದ್ದೇ ಇದಕ್ಕೆ ಕಾರಣ. ಇದಕ್ಕೆ ಆಕೆಯ ಆರ್ಥಿಕ ಹಿನ್ನೆಲೆಯೂ ಕಾರಣವಾಯಿತು. ಆ ಕಾಲದಲ್ಲಿ ಜೈನಧರ್ಮವನ್ನು ಅನ್ಯಧರ್ಮಗಳಿಂದ ಕಾಪಾಡುವುದು ಅಗತ್ಯವಾಗಿತ್ತು. ಗುಂಡಮಬ್ಬೆ ಸತಿಹೋದುದ್ದನ್ನು ಹಿರಿದಾಗಿ ಭಾವಿಸುವಂತಿಲ್ಲ. ಇಂತಹ ಜೀವನವನ್ನೇ ಧಿಕ್ಕರಿಸಿ ಮರಣಕ್ಕೆ ಶರಣಾಗುವುದು ಎಂದರೆ ಸಾಮಾನ್ಯವಾದ ವಿಚಾರವಲ್ಲ. ಆದರೆ ಗುಂಡಮಬ್ಬೆ ಪತಿಯ ಜೊತೆ ಸಹಗಮನ ಮಾಡಿದರೂ ಆಕೆಯನ್ನು ಅತ್ತಿಮಬ್ಬೆಯನ್ನು ಹೊಗಳಿದಂತೆ ಮಹಾಸಾಧ್ವಿಯನ್ನಾಗಿ ಪರಿಗಣಿಸಲೇ ಇಲ್ಲ. ಆಕೆಯ ತ್ಯಾಗವನ್ನು ಅತ್ತಿಮಬ್ಬೆಯು ಜೈನಧರ್ಮಕ್ಕೆ ಮಾಡಿದ ಪೋಷಣೆಯಿಂದ ಮರೆಮಾಚಿದೆ. ಅದರ ಪ್ರಚಾರಕ್ಕೆ ಆರ್ಥಿಕ ಭದ್ರತೆ ಬೇಕಿತ್ತು. ಅಂತಹ ಆರ್ಥಿಕ ಹಿನ್ನೆಲೆ ಅತ್ತಿಮಬ್ಬೆಗಿತ್ತು. ಆಕೆ ಅದಕ್ಕೆ ಪೂರಕವಾಗಿ ನಿಂತಳು. ಆ ಎಲ್ಲ ಕಾರ್ಯಗಳನ್ನು ತನ್ನ ಮಗನ ಮೂಲಕ ಮಾಡಿಸಿದಳು. ಅದಕ್ಕಾಗಿ ಬಸದಿಗಳ ನಿರ್ಮಾಣಕ್ಕೆ ಜೈನಧರ್ಮ ಪ್ರಚಾರ ಏಳಿಗೆಗೆ ಸಾಕಷ್ಟು ಶ್ರಮಿಸಿದಳು. ಹಾಗಾಗಿ ಅತ್ತಿಮಬ್ಬೆಯನ್ನು ಜೈನ

ಧರ್ಮೀಯರು ಮಹಾನ್‌ಸಾಧ್ವಿ, ಪವಾಡ ಮಹಿಳೆಯನ್ನಾಗಿ ಬಿಂಬಿಸಿದರು. ಯಾವುದೇ ಧರ್ಮ ಸ್ತ್ರೀಯರನ್ನು ಅಷ್ಟು ಸುಲಭವಾಗಿ ಸ್ವೀಕರಿಸುವುದಿಲ್ಲ. ಹಾಗೆ ಆಕೆಯನ್ನು ಸ್ವೀಕರಿಸಿದೆಯೆಂದರೆ ಆಕೆಯಿಂದ ಧರ್ಮಕ್ಕಾದ ಲಾಭದಿಂದ ಎನ್ನಬಹುದು. ಎಂತಹ ಕಠಿಣ ವ್ರತಾಚರಣೆಗಳನ್ನು ಆಚರಿಸಿ ಧರ್ಮನಿಷ್ಠರಾಗಿ ಮಾಡಿದ ಮಹಿಳೆಯರಿದ್ದರೂ ಅವರನ್ನೆಲ್ಲ ಏಕೆ ಇಷ್ಟೊಂದು ಹಾಡಿ ಹೊಗಳಲಿಲ್ಲ. ಏಕೆಂದರೆ ಅವರಾರೂ ಜೈನಧರ್ಮಕ್ಕೆ ಇಷ್ಟೊಂದು ಆರ್ಥಿಕ ಸಹಾಯವನ್ನು ಮಾಡಲಿಲ್ಲ.

ಜೈನರಲ್ಲಿ ಸತಿ ಹೋಗುವುದು ನಿಷಿದ್ಧ. ಆದರೆ ಪಾಲನೆ ಕಡ್ಡಾಯವಾಗಿರಲಿಲ್ಲ. ಹೋದವರು ಇದ್ದಾರೆ. ಸತಿ ಹೋಗದೆ ಪತಿ ಮರಣ ಹೊಂದಿದ ತಕ್ಷಣ ಜಿನದೀಕ್ಷೆ ತೆಗೆದುಕೊಂಡು ಉಪವಾಸ ಕಠಿಣವ್ರತ ಆಚರಿಸಿ ದಿನದಿಂದ ದಿನಕ್ಕೆ ಸಾವನ್ನು ಹತ್ತಿರ ಮಾಡಿಕೊಳ್ಳುವವರಿದ್ದರು. ಸತಿ ಹೋಗುವುದರಿಂದ ಕ್ಷಣದಲ್ಲಿ ದೇಹ ನಾಶವಾದರೆ, ದೀಕ್ಷಾಮರಣ ನಿಧಾನವಾಗಿ ಸಾಗುವುದು. ಗಂಗಮಂಡಳದ ರಾಜಮಲ್ಲನ ಪತ್ನಿ ಕಂಚಿಯಬ್ಬೆ ತನ್ನ ಪತಿಯ ಮರಣದ ನಂತರ ಅಜಿತಸೇನಾಚಾರ್ಯರ ಬಳಿ ದೀಕ್ಷೆ ತೆಗೆದುಕೊಂಡು ಕುಪುಣ ತೀರ್ಥದಲ್ಲಿ ಸಮಾಧಿ ವಿಧಿಯಿಂದ ಮುಡುಪಿದಳು(ಕ.ವಿ.ಶಾ, ಸಂಪುಟ–೨, ಕೊಪ್ಪಳ, ೯೪).

ಜೈನಧರ್ಮ ತನ್ನದೇ ಆದ ಸಿದ್ಧಾಂತಗಳಿಂದ ತಾನು ಸ್ವತಂತ್ರ ಧರ್ಮ ಎಂದು ಪ್ರತ್ಯೇಕತೆಯನ್ನು ವ್ಯಕ್ತಪಡಿಸಿದರೂ, ಪುರಾತನ ವೈದಿಕ ಧರ್ಮದ ಆಚರಣೆಗಳಿಂದ ಮುಕ್ತವಾಗಿಲ್ಲ. ತಾನು ಪ್ರತ್ಯೇಕವಾಗಿ ಉಳಿಯಲು ಸಾಧ್ಯವಾಗಿಲ್ಲ. ಕಾರಣ ಜನಸಾಮಾನ್ಯರ ಜೀವನ ಸಿದ್ಧಾಂತಕ್ಕಿಂತ ಭಿನ್ನ. ಅದು ವೈದಿಕ ಧರ್ಮ ಹಾಕಿದ ತಳಪಾಯದ ಮೇಲೆ ಇದೆ. ವೈದಿಕ ಧರ್ಮ ಭಾರತದ ಮಣ್ಣಿನಲ್ಲಿ ಬೆರೆತು ಹೋಗಿದೆ. ಅದರಲ್ಲಿ ಮೊಳಕೆಯೊಡೆದು ಹೆಮ್ಮರವಾಗಿ ಬೆಳೆದರೂ ಅದು ಭೂಮಿಯ ಅಂಶವನ್ನು ಹೀರಿಕೊಂಡು ಬೆಳೆದಿರುವುದನ್ನು ಮರೆಯುವಂತಿಲ್ಲ. ವೈದಿಕ ಧರ್ಮದಲ್ಲಿರುವ ಶಿಷ್ಟ–ಅಶಿಷ್ಟಗಳು ಅಲ್ಲಿ ಮಿಳಿತವಾಗಿವೆ. ಅಶಿಷ್ಟಗಳಲ್ಲಿ ಸ್ತ್ರೀವಿರೋಧಿ ನೀತಿಗಳು ಜೈನರಲ್ಲೂ ಉಳಿದು ಬಂದಿರುವುದು ಸಹಜ. ಜೈನಧರ್ಮ ಸ್ತ್ರೀಯರ ಪ್ರವೇಶಕ್ಕೆ ಮುಕ್ತವಾಗಿತ್ತಾದರೂ ಸ್ತ್ರೀಯೆಂಬ ಬೇಧವನ್ನು ಹೊಂದಿಯೇ ಇತ್ತು. ಸನ್ಯಾಸಿಗಳಿಗೆ ದೊರೆತ ಪ್ರಾತಿನಿಧ್ಯ ಸನ್ಯಾಸಿನಿಯರಿಗೆ ಸಿಗಲಿಲ್ಲ. ಅವರು ಎಷ್ಟು ಕಠಿಣ ವ್ರತಾಚರಣೆ ಮಾಡಿದರೂ ಅವರಿಗೆ ಮೋಕ್ಷವಿಲ್ಲವೆಂದರು. ಸ್ತ್ರೀಯರ ಬಗ್ಗೆ ಎಲ್ಲ ಧರ್ಮಗಳು ತಳೆದಿರುವ ನಿಲುವು ಒಂದೇ.

**ಉ) ಜನಪದರಲ್ಲಿ ಸತಿ ನಂಬಿಕೆ**

ಜನಪದ ಸಾಹಿತ್ಯ ಜನಪದರ ಜೀವನದ ಪ್ರತಿಬಿಂಬ, ಅವರ ಜೀವನದ ನೋವು ನಲಿವು, ಸುಖ ದುಃಖ ಎಲ್ಲವನ್ನೂ ಸಾಹಿತ್ಯದಲ್ಲಿ ಅಳವಡಿಸಿಕೊಂಡಿದ್ದಾರೆ. ಅಲ್ಲಿ ದೊರೆಯುವುದು ಶುದ್ಧ ಜನಜೀವನ. ಜನಪದ ಸಾಹಿತ್ಯದಲ್ಲಿ ಹೆಣ್ಣುಮಕ್ಕಳಿಗೆ ಮುತ್ತೈದೆತನ, ಪಾತಿವ್ರತ್ಯದ ಬಗ್ಗೆ ಇದ್ದ ಧೋರಣೆ ಹಾಗೆ ಸತಿಪದ್ಧತಿ ಸ್ವೀಕರಿಸಿದ್ದರೆ ಎಂಬುದರ ಬಗ್ಗೆ ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಪತಿರಹಿತ ಜೀವನವನ್ನು ತಿರಸ್ಕರಿಸುವುದಕ್ಕೆ, ಮತ್ತು

ಸತಿ ಹೋಗಲು ವಿರೋಧ ವ್ಯಕ್ತಪಡಿಸದಿರುವುದಕ್ಕೆ ಕಾರಣವಿದೆ. ಪತಿಯ ಮರಣದ ನಂತರ ಸಮಾಜದಲ್ಲಿ ಅವರನ್ನು ನೋಡುವ ದೃಷ್ಟಿಕೋನವೇ ಬದಲಾಗುತ್ತದೆ. ಗಂಡನಿಲ್ಲದ ಸ್ತ್ರೀಯರನ್ನು ಬಲವಂತವಾಗಿ ವಶ ಮಾಡಿಕೊಳ್ಳುವ ಕಾಮುಕರು ಸಮಾಜದಲ್ಲಿದ್ದುದರಿಂದ ಅಂಥವರಿಂದ ತಪ್ಪಿಸಿಕೊಳ್ಳಲು ಅನಿವಾರ್ಯವಾಗಿ ಸತಿ ಹೋಗುತ್ತಿದ್ದರು. ಆ ಧ್ವನಿ ಜನಪದದಲ್ಲಿ ವ್ಯಕ್ತವಾಗಿದೆ.

ಸರ್ವಸಂಪದ ನಿರುತ ಬೇಡಿ
ಜೋಡಿ ವೋದ ಮೇಲೆ ನಾ ಕುಲಗೇಡಿ

(ಸಿದ್ಧಲಿಂಗಯ್ಯ ಡಿ.(ಸಂ); ಜನಪದ ಸಂಕೀರ್ಣ ಗೀತೆಗಳು, ಮುತ್ತೈದೆ ಹಾಡು, ಪುಟ ೨೪). ನಾಕುಲಗೇಡಿ ಎಂಬ ಪದ ಇಡೀ ತನ್ನ ಪರಿಸ್ಥಿತಿಯನ್ನೇ ನಮ್ಮ ಮುಂದಿಟ್ಟಿದ್ದಾಳೆ. ವ್ಯವಸ್ಥೆ ಅವಳನ್ನು ನಡೆಸಿಕೊಳ್ಳುವ ರೀತಿಯನ್ನೇ ಇದು ಹೇಳುತ್ತದೆ. ಮತ್ತೊಂದು ಪದ್ಯದಲ್ಲಿ ಹೀಗೆ ತನ್ನ ಭಯವನ್ನು ವ್ಯಕ್ತಪಡಿಸಿದ್ದಾಳೆ. ಗಂಡ ಸತ್ತ ಮೇಲೆ ತಾನು ಸತಿಹೋಗದೆ ಇದ್ದರೆ 'ಆಕಾಸಕ್ಕಬ್ಬಿ ಕುಡಿ ಒಡೆದು ಹೂ ಬಿಟ್ಟ, ಬೇಕಾದ ದೋರೆಗೋಳು ಮುಡಿದಾರು(ಹಲಸಂಗಿ ಗೆಳೆಯರು(ಸಂ); ಹಲಸಂಗಿ ಹಾಡು, ಪುಟ ೭೩). ಪತಿ ಇಲ್ಲದೆ ಇದ್ದರೆ ತಮ್ಮನ್ನು ಯಾರು ಬೇಕಾದರೂ ವಶ ಮಾಡಿಕೊಳ್ಳಬಹುದೆಂಬ ಆತಂಕ ಅವಳಲ್ಲಿದೆ.

ನಮ್ಮ ಜನಪದ ಕಾವ್ಯದಲ್ಲೂ ವೈಧವ್ಯವನ್ನು ತಿರಸ್ಕರಿಸಿದ್ದಾರೆ. ಜನಪದ ಖಂಡಕಾವ್ಯ ಈರೋಬಿಯಲ್ಲಿ ಅತ್ತೆಯು ಈರೋಬಿಗೆ ಹೀಗೆ ಸಮಾಧಾನಿಸುತ್ತಾಳೆ, 'ಗಂಡ ಸತ್ತೋರವರೆ ಮುಂಡೆರಾದೋರವರೆ.' ಅದಕ್ಕೆ ಈರೋಬಿ ಹೀಗೆ ಉತ್ತರಿಸುತ್ತಾಳೆ,

ಹೀನ ಬತ್ತಲ್ಲೆ ಕುಲಕೆಲ್ಲ ಸುವ್ವಿ ಅತ್ತ್ಯಮ್ಮ
ವಾರಗಿತ್ತಿಯರು ಆಡಕಾಯ್ತು ಅತ್ತ್ಯಮ್ಮ
ಮೈದಯ್ಯ ಮಾವದಿರು ನಗುತ್ತಾರೆ.

(ಪರಮಶಿವಯ್ಯ ಜೀ.ಶಂ.(ಸಂ); ಈರೋಬಿ, ಜನಪದ ಖಂಡಕಾವ್ಯ, ಪುಟ ೩೯೫). ತನ್ನ ಕುಟುಂಬದವರೇ ತನ್ನ ಬಗ್ಗೆ ತಳೆಯುವ ಭಾವನೆಯನ್ನು ಈರೋಬಿ ಇಲ್ಲಿ ವ್ಯಕ್ತಪಡಿಸಿದ್ದಾಳೆ. ಮತ್ತೊಂದು ಜನಪದ ಕಾವ್ಯದಲ್ಲಿ ವಿಧವೆಗೆ ಅಲಂಕಾರ ನಿಷಿದ್ಧವೆಂದು ಗಂಡನೇ ಇಲ್ಲದ ಮೇಲೆ ಸಿಂಗಾರವೇತಕೆ? ಅದು ವ್ಯರ್ಥವೆಂಬ ಭಾವನೆ ಇದೆ.

ಚಿಕ್ಕ ತಿಲಕ ಬಟ್ಟು ಇಕ್ಕದಿರು ಎಲೆಹೆಣ್ಣೆ
ಚಿಕ್ಕ ಪ್ರಾಯದಲ್ಲಿ ನಿನಗಂಡ ಹೋದ್ಮೇಲೆ
ಚಿಕ್ಕ ಬಟ್ಟಿಟ್ಟು ಫಲವೇನು?

(ಕರೀಂಖಾನ್ ಎಸ್. ಕೆ.(ಸಂ); ಕನ್ನಡ ಜನಪದ ಗೀತೆಗಳು, ಪುಟ ೮೯). ಈ ಜನಪದ ಕಾವ್ಯದಲ್ಲಿ ಹೇಳಿರುವಂತೆ ಇನ್ನೂ ಚಿಕ್ಕ ಪ್ರಾಯದ ಹುಡುಗಿಗೆ ನಿಷೇಧ ಹೇರಲಾಗಿದೆ. ಇದು ಕುಟುಂಬದ ನಿಯಮವೆನ್ನುವುದಕ್ಕಿಂತ ಸಮಾಜದ ಕಟ್ಟಳೆಯಾಗಿದೆ. ಮುಂದಿನ

ದೀರ್ಘಾವಧಿಯ ಜೀವನವನ್ನು ಪತಿಯಿಲ್ಲದೆ ಕಳೆಯುವುದು ತುಂಬಾ ಕಷ್ಟ. ಇದಕ್ಕಿಂತ ಸತಿ ಹೋಗುವುದೇ ಲೇಸು ಎಂದು ತೀರ್ಮಾನಿಸುವುದು ಸಹಜವೇ.

'ಕರಿಮಣಿ ಎಂಬುದು ವೊನ್ನಿನ ರಾಸಿ, ರಾಸಿ ಹೋದಮೇಲೆ ನಾ ಪರದೇಸಿ.' ಮತ್ತೊಂದು ಕಡೆ ಮುತ್ತೈದೆತನದ ಸಂಕೇತವಾದ ತಾಳಿಯ ಮಹತ್ವವನ್ನು ಕುರಿತು ಹೀಗೆ ಹೇಳುತ್ತಾಳೆ. 'ನಾ ಬೇಡಿಕೊಂಬುವೆ ಚಿನ್ನದ ತಾಲಿ, ತಾಲಿ ಎಂಬುದೇ ನನಗೆ ಬೇಲಿ' (ಸಿದ್ಧಲಿಂಗಯ್ಯ ಡಿ.(ಸಂ); ಜನಪದ ಸಂಕೀರ್ಣ ಗೀತೆಗಳು, ಮುತ್ತೈದೆ ಹಾಡು, ಪುಟ ೨೪). ಭಾರತದ ಸ್ತ್ರೀಯರಿಗೆ ಗಂಡನ ಬಗ್ಗೆ ದೈವವೆಂಬ ಭಾವನೆ ಹುಟ್ಟು ಹಾಕಿರುವುದರಿಂದ ಸದಾ ಅವರು ಮುತ್ತೈದೆತನಕ್ಕೆ ಹಂಬಲಿಸುತ್ತಿದ್ದರು. ಗಂಡ ಹೇಗಿದ್ದರೂ ಸರಿ ತಮಗೆ ಎಷ್ಟು ಕಷ್ಟ ಕೊಟ್ಟರೂ ಸರಿ ಆತನ ಶ್ರೇಯಸ್ಸೇ ಅವಳಿಗೆ ಮುಖ್ಯ. ಅವನ ನಂತರದ ಜೀವನ ಅವಳಿಗೆ ಬೇಡ ಎಂದು ತಿರಸ್ಕರಿಸಿದ್ದಾಳೆ. ಪತಿರಹಿತ ಜೀವನ ಸಮಾಜದಲ್ಲಿ ಸುರಕ್ಷತೆ ಕೊಡುವುದಿಲ್ಲವೆಂಬ ಭಯದಿಂದ ರಕ್ಷಣೆಯಿಲ್ಲದೆ ನಿಕೃಷ್ಟವಾಗಿ ಬದುಕಬೇಕಾಗುತ್ತದೆ. ಹಾಗೆ ನಿಕೃಷ್ಟವಾಗಿ ಜೀವಿಸುವುದಕ್ಕಿಂತ ಗಂಡನಿರುವಾಗಲೆ ಸತ್ತರೆ ಮುತ್ತೈದೆ ಸಾವೆಂದು, ಸಾವಿನಲ್ಲೂ ಗೌರವ ಸಿಗುತ್ತದೆ. ಪತಿಗಿಂತ ಮೊದಲೇ ಸತ್ತಾಗ ಆಚರಿಸುವ ಆಚರಣೆಗಳು, ವಿವಾಹದ ಸಂದರ್ಭದಲ್ಲಿ ಆಚರಣೆಗಳಂತೆ ಇರುತ್ತವೆ. ಪತಿಯ ನಂತರ ಸತ್ತರೆ ಅವು ಯಾವುವೂ ಇರುವುದಿಲ್ಲ. ಈ ಕಾರಣಗಳಿಂದ ಸದಾ ಪಾತಿವ್ರತ್ಯಕ್ಕೆ ಹಂಬಲಿಸುತ್ತಿದ್ದರು.

ನಮ್ಮ ದೇಶದ ಜನಪದ ಕಾವ್ಯದಲ್ಲೂ ಇಂತಹ ಒಂದು ಸಂಗತಿ ಇದೆ. ನಾಗಮ್ಮನ ಮದುವೆ ಆರಂಭಿಸಿದ್ದು ನಾಗಮ್ಮನ ಲಗ್ನವಾಗಬೇಕಿದ್ದ ಚಂದಯ್ಯ ಹೊಡೆದಾಟದಲ್ಲಿ ಮರಣ ಹೊಂದಿದ್ದ. ಲಗ್ನಕ್ಕೆ ಸಿದ್ಧವಾಗಿದ್ದ ನಾಗಮ್ಮ ಅದೇ ಅಲಂಕಾರದಲ್ಲಿ ಬೆಂಕಿಯಲ್ಲಿ ನಲುಗಿ ಹೋದಳು. ಮಾನಸಿಕವಾಗಿ ಅವಳು ಚಂದಯ್ಯನನ್ನು ಪತಿಯೆಂದುಕೊಂಡಿದ್ದಳು ಎನ್ನುವ ಕಾರಣ ಕೊಟ್ಟು ಪತಿಯ ಚಿತೆಯಲ್ಲಿ ಬಿದ್ದು ನಲುಗಿ ಹೋದ ಪ್ರಸಂಗವನ್ನು ಹೀಗೆ ಹೇಳಲಾಗುತ್ತದೆ.

ಹೆಣ್ಣಿಗೆ ಮಣ್ಣು ಬಿದ್ದೊ ಕಣ್ಣಿಗೆ ಸತ್ತ ಬಿದ್ದೊ
ಸಣ್ಣ ಸೀರೆ ಮ್ಯಾಲೆ ಕಿಡಿ ಬಿದ್ದೊ ನಾಗವ್ವ
ಹಣೆಗಂಟು ನಲುಗಿ ಉರ್‍ದೋದೋ

(ಪರಮಶಿವಯ್ಯ ಜೀ. ಶಂ.(ಸಂ); ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಪುಟ ೪೦೩). ನಮ್ಮ ಜನಪದರು ತಮಗೆ ಧರ್ಮಶಾಸ್ತ್ರದ ಅರಿವಿಲ್ಲದೆಯೇ ಹೀಗೆ ಧರ್ಮವನ್ನು ನಿಭಾಯಿಸಿರುವುದಾದರೂ ಹೇಗೆ? ತಮ್ಮ ಶಾಸ್ತ್ರದ ನಿಯಮವನ್ನು ಸಂಪ್ರದಾಯದ ಹೆಸರಿನಲ್ಲಿ ಹೇರಿದ್ದಾರೆ. ನಾವು ಯಾವುದಾದರೂ ಸಂಪ್ರದಾಯದ ಆಚರಣೆಯನ್ನು ನೋಡಬೇಕೆಂದರೆ ಮೊದಲು ಜನಪದ ಸಾಹಿತ್ಯದಲ್ಲಿ ಮಾಹಿತಿ ದೊರೆಯುತ್ತದೆ. ಜನಪದರಲ್ಲಿ ಮುತ್ತೈದೆತನ, ತಾಳಿ, ಪತಿವ್ರತಾಗುಣಗಳು, ತುಂಬಾ ಹೊಗಳಿಕೆ ಮೆಚ್ಚುಗೆಯನ್ನು ಪಡೆದುಕೊಂಡು

ಆಚರಣೆಯಲ್ಲಿವೆ. ಎಂಬುದು ನಮಗೆ ಈ ಪದ್ಯಗಳಿಂದಲೇ ತಿಳಿದುಬರುತ್ತದೆ. ಜನಪದರೂ ಕೂಡ ಸತಿಪದ್ಧತಿಯನ್ನು ಸ್ವೀಕರಿಸಿದ್ದರು.

**ಸತಿಪದ್ಧತಿಗೆ ಕಾರಣಗಳು**

ಒಂದು ಸಮಾಜದ ಸಂರಚನೆಯಲ್ಲಿ ಆ ದೇಶದ ಅರ್ಥವ್ಯವಸ್ಥೆ ಮತ್ತು ಆಚರಣೆಯಲ್ಲಿರುವ ಧರ್ಮ ತನ್ನ ಪ್ರಭಾವವನ್ನು ಸದಾ ಕಾಯ್ದುಕೊಂಡೇ ಬಂದಿರುತ್ತದೆ. ಅದರಿಂದಾಚೆ ಜೀವಿಸಲು ಅವಕಾಶ ಕೊಟ್ಟಿರುವುದಿಲ್ಲ. ಇದು ಈ ದೇಶದ ಅರ್ಥವ್ಯವಸ್ಥೆಯ ಬಗ್ಗೆ ಮಾತ್ರ ಹೇಳುವ ಮಾತಲ್ಲ. ಇಡೀ ಜಗತ್ತಿಗೆ ಸಂಬಂಧಿಸಿದ್ದು. ಎಲ್ಲ ದೇಶಗಳ ವ್ಯವಸ್ಥೆಗೂ ಅನ್ವಯವಾಗುವಂತಹದು. ಒಂದು ದೇಶದ ನೀತಿನಿಯಮ, ಕಾನೂನುಗಳು ಮನುಷ್ಯರ ಜೀವನಕ್ಕೆ ಸಾಧಕವಾಗಿದ್ದರೆ, ಸಾಧಕ ಪರಿಣಾಮವನ್ನೇ ಉಂಟುಮಾಡುತ್ತವೆ. ಬಾಧಕವಾಗಿದ್ದರೆ ಮಾರಕ ಪರಿಣಾಮವನ್ನೇ ಉಂಟು ಮಾಡುತ್ತವೆ. ಭಾರತ ಸೇರಿದಂತೆ ಇಡೀ ಜಗತ್ತಿನಲ್ಲೇ ಸ್ತ್ರೀಯರ ವಿಚಾರವಾಗಿ ಮಾಡಿರುವ ನೀತಿನಿಯಮಗಳು ಬಲಿಷ್ಠ ಹಿತಾಸಕ್ತಿಗಳ ಕೈಯಲ್ಲಿ ರಚನೆಯಾಗಿ ತುಂಬ ಕೆಟ್ಟ ಪರಿಣಾಮವನ್ನೇ ಬೀರಿವೆ. ಅದರಲ್ಲಿ ಸತಿಪದ್ಧತಿಯಂತಹ ಹಿಂಸಾತ್ಮಕ ಕೃತ್ಯದಂತಹ ಕೃತ್ಯ ಬೇರೊಂದಿಲ್ಲವೆನ್ನಬಹುದು. ಸತಿಧರ್ಮ ಎಂಬ ಹೆಸರಲ್ಲಿ ಸತಿಯಾದವಳು ಆಚರಿಸಬೇಕೆಂದು ಮಾಡಿದ ಇಂತಹ ನಿಯಮಗಳಲ್ಲಿ ಸಮಾಜ, ಅರ್ಥವ್ಯವಸ್ಥೆ, ಧರ್ಮ ಹೇಗೆ ಕಾರಣವಾಗಿದೆ ಎನ್ನುವುದನ್ನು ಚರ್ಚಿಸಲಾಗಿದೆ.

**೫. ೩. ೧. ಆರ್ಥಿಕ ಕಾರಣಗಳು**

ಅ) ಕೌಟುಂಬಿಕ ಆರ್ಥಿಕ ಭದ್ರತೆಯಿಲ್ಲ;

ಪುರುಷಪ್ರಧಾನ ವ್ಯವಸ್ಥೆಯಲ್ಲಿ ಕುಟುಂಬದ ಯಜಮಾನ ಗಂಡಸು. ಕುಟುಂಬದ ಸಂಪೂರ್ಣ ಹೊಣೆಗಾರಿಕೆ ಅವನ ಜವಾಬ್ದಾರಿಯಾಗಿರುತ್ತದೆ. ಶ್ರಮ ಹಂಚಿಕೆಯಾದರೂ ಆದಾಯದ ಕೇಂದ್ರೀಕರಣ ಮಾತ್ರ ಪುರುಷನ ಕೈಯಲ್ಲಿರುತ್ತದೆ. ಸ್ತ್ರೀಯರಿಗೆ ಅಡುಗೆ ಕೋಣೆಯ ಆಚೆ ಯಾವ ಅಧಿಕಾರವೂ ಇರುವುದಿಲ್ಲ. ಪ್ರತಿಯೊಂದಕ್ಕೂ ಆಕೆ ಮನೆಯ ಯಜಮಾನನನ್ನೇ ಅವಲಂಬಿಸಿರುತ್ತಾಳೆ. ಆತನು ತನ್ನ ಸ್ಥಾನ ಹಾಗೆ ಕಾಯ್ದುಕೊಂಡಿರುತ್ತಾನೆ. ಆತನ ನಿರ್ಧಾರಗಳೇ ಅಂತಿಮವಾಗಿರುತ್ತವೆ. ಸ್ತ್ರೀಯರು ಕೂಡ ಅಷ್ಟೇ ಮಹಿಳೆ ತನ್ನ ಮಿತಿ ಇಷ್ಟೇ ಎಂದು ಕೊಂಡಿರುತ್ತಾಳೆ. ಅನ್ಯಥಾ ಯೋಚಿಸುವುದೆಂದರೆ ತನಗೆ ಸಂಬಂಧಿಸಿದ ಕ್ಷೇತ್ರವಲ್ಲ ಎಂಬ ಭಾವನೆ ಅವಳಲ್ಲಿ ಬೆಳೆದಿರುತ್ತದೆ. ಹೊಣೆಗಾರಿಕೆ ತನ್ನ ಶಕ್ತಿಗೆ ಮೀರಿದ್ದು ಎಂದು ತನಗೆ ತಾನೇ ಅಂದುಕೊಳ್ಳುವಂತೆ ಮಾಡಲಾಗಿತ್ತು. ಹೊರಗಿನ ವಿಚಾರಗಳು ಅವಳಿಗೆ ಪುರುಷನ ಮೂಲಕವೇ ತಲುಪಬೇಕಿತ್ತು. ತಲುಪಿಸುವ ರೀತಿಯಲ್ಲಿ ಪುರುಷರು ತಮ್ಮ ಹಿತಾಸಕ್ತಿಗೆ ಧಕ್ಕೆ ಬರದಂತೆ ತಮಗೆ ಪೂರಕವಾಗುವಂತೆ ಬಹು ಜಾಣತನದಿಂದ ವಿವರಿಸಿದರು. ಒಂದು ಕುಟುಂಬ ಸತಿಹೋಗುವುದಕ್ಕೆ ಹೇಗೆ ಕಾರಣವಾಯಿತು ಎಂದರೆ ಅವಳಿಗೆ ಕೌಟುಂಬಿಕ

ಭದ್ರತೆಯನ್ನು ಕಿತ್ತುಕೊಳ್ಳುವುದರೊಂದಿಗೆ, ಅವಳ ಯೋಚನಾ ಸಾಮರ್ಥ್ಯವನ್ನು ನಿಷ್ಕ್ರಿಯಗೊಳಿಸುವುದರೊಂದಿಗೆ, ಅವಳ ಜೀವನಾಧಾರಕ್ಕೆ ಯಾವುದೇ ಆರ್ಥಿಕ ಭದ್ರತೆಯನ್ನು ಕೊಡಲಿಲ್ಲ. ಚಿಕ್ಕ ಮಗುವಿದ್ದರೆ ಮಾತ್ರ ಅವಳು ಸತಿಹೋಗುವುದರಿಂದ ತಪ್ಪಿಸಿಕೊಳ್ಳಬಹುದಿತ್ತು. ಮಗುವಿನ ಲಾಲನೆ ಪಾಲನೆ ಎಂಬುದು ಹೊರಜಗತ್ತಿಗೆ, ನಿಜವಾಗಿ ಅವಳ ಪಾಲಿನ ಆಸ್ತಿಗೆ ವಾರಸುದಾರನಾಗಿ ಬರುವ ಮಗು ಇರುವುದರಿಂದ ಸತಿಹೋಗುವ ಅವಶ್ಯಕತೆ ಇರಲಿಲ್ಲ. ಅತ್ತಿಮಬ್ಬೆ ವಿಚಾರದಲ್ಲಾದ್ದದ್ದೂ ಹೀಗೆ ಗುಂಡಮಬ್ಬೆ ಅತ್ತಿಮಬ್ಬೆಗೆ ಹೀಗೆ ಹೇಳುತ್ತಾಳೆ 'ನಿನಗೆ ಮಗಂ ಜಗತ್ತಿಲಕನಿರ್ದಪನಕ್ಕ'(ರನ್ನ; ಅಜಿತ ತೀರ್ಥಂಕರ ಪುರಾಣ ಚರಿತ, ಹಂಪ ನಾಗರಾಜಯ್ಯ(ಸಂ); ರನ್ನ ಸಂಪುಟ, ಪುಟ ೨೧೨). ಮಗುವನ್ನು ಸಾಕಿ ಬೆಳೆಸುವುದರಲ್ಲೇ ಅವಳ ಜೀವನದ ಗುರಿ ಇರುತ್ತದೆ. ಅನ್ಯಥಾಃ ಅವಳ ಯೋಚನೆ ಬೇರೆ ಕಡೆ ಇರುವುದಿಲ್ಲ. ಒಂದು ವೇಳೆ ಮಕ್ಕಳಿಲ್ಲದೆ ಹೋದರೆ ಅಂಥವರು ಯೌವನಪೂರ್ತಿ ಕುಟುಂಬದಲ್ಲಿ ಒಂಟಿಯಾಗಿ ಜೀವನ ಕಳೆಯುವುದು ಮನೆಯ ಯಜಮಾನನಿಗೆ ಒಪ್ಪಿಗೆ ಇರುವುದಿಲ್ಲದಿದುರಿಂದ ದೇಕಬ್ಬೆ ಮಕ್ಕಳಿಲ್ಲದ ಯೌವನಾವಸ್ಥೆಯಲ್ಲಿರುವ ಹೆಣ್ಣು ಜೀವನಪರ್ಯಂತ ಆಕೆಗೆ ಆಶ್ರಯ ದೊರೆಯುತ್ತದೆ. ವಿವಾಹವಾದ ಹೆಣ್ಣು ತಂದೆಯ ಮನೆಯಲ್ಲಿ ಇರುವಂತಿಲ್ಲ. ಗಂಡನ ಮನೆಯಲ್ಲಿ ಆಶ್ರಯ ಕೊಡಬೇಕಾದ ಪತಿ ಜೀವಿಸಿಲ್ಲ. ಇಂಥ ಸ್ಥಿತಿಯಲ್ಲಿರುವ ಹೆಣ್ಣು ಸತಿ ಹೋಗಲೇಬೇಕಾಗುತ್ತದೆ. ಮಕ್ಕಳಿಲ್ಲದ ಹೆಣ್ಣು ಪತಿಯ ಆಸ್ತಿಯಲ್ಲಿ ಪಾಲುದಾರಳಾಗುತ್ತಾಳೆ. ಅವಳ ಜೀವನಾಂಶಕ್ಕೆ ಇದರ ಅವಶ್ಯಕತೆ ಇದ್ದೇ ಇರುತ್ತದೆ. ಆದರೆ ಅದನ್ನು ಕೊಡುವುದಕ್ಕೆ ಸಾಧ್ಯವಿಲ್ಲದೆ, ಅವಳಿಗೆ ಯಾವುದೇ ರೀತಿಯ ಕೌಟುಂಬಿಕ ಭದ್ರತೆ ಇಲ್ಲದೆ ಅನಿವಾರ್ಯವಾಗಿ ಪತಿಯ ಜೊತೆ ಸತಿ ಹೋಗಲೇಬೇಕಾಗುತ್ತದೆ.

**ಆ) ಆಸ್ತಿಯ ಒಡೆತನ ಇಲ್ಲದಿರುವುದು**

ಪಿತೃಪ್ರಧಾನತೆ ಇರುವುದರಿಂದ ತಂದೆಯಿಂದ ಆಸ್ತಿಯ ಹಕ್ಕು ಗಂಡುಮಕ್ಕಳಿಗೆ ಬರುತ್ತದೆ. ಹೆಣ್ಣುಮಕ್ಕಳಿಗೆ ಆಸ್ತಿಯ ಹಕ್ಕಿರುವುದಿಲ್ಲ. ಬಂದರೂ ಅದು ಅವರ ಪ್ರೀತಿಯ ಉಡುಗೊರೆಯಾಗಿರುತ್ತದೆ. ಅದು ಹಕ್ಕಿನ ರೂಪದಲ್ಲಿರುವುದಿಲ್ಲ. ಅವಳಿಗೆ ತವರಿನಿಂದಲೂ ಆಸ್ತಿಯ ಒಡೆತನವಿರುವುದಿಲ್ಲ. ಗಂಡನ ಮನೆಯಲ್ಲಿ ಆಸ್ತಿಯ ಹಕ್ಕಿದ್ದರೂ ಅದು ಅವಳ ಗಂಡನಿಗೆ ಮತ್ತು ತಮಗೆ ಜನಿಸಿದ ಗಂಡುಮಕ್ಕಳಿಗಿರುತ್ತದೆ. ಹೀಗಿರುವಾಗ ಅವಳಿಗೆ ಎರಡೂ ಕಡೆಯಿಂದ ಆಸ್ತಿಯಲ್ಲಿ ಒಡೆತನ ಸಾಧಿಸಿರುವುದಿಲ್ಲ. ಈ ಕಾರಣಕ್ಕೆ ಅವಳು ಯಾವುದೇ ನಿರ್ಧಾರ ತೆಗೆದುಕೊಳ್ಳುವುದಕ್ಕೂ ಸ್ವಾತಂತ್ರ್ಯವಿರುವುದಿಲ್ಲ. ಆದ್ದರಿಂದ ಅವಳೊಂದು ಹೊರೆಯಾಗಿ ಪರಿಣಮಿಸಿತ್ತಾಳೆ. ಆರ್ಥಿಕವಾಗಿ ಬಲಹೀನರಾದವರ ಮೇಲೆಯೇ ಯಾವಾಗಲೂ ಅಧಿಕಾರ ಚಲಾಯಿಸುವುದು ಸಹಜ. ಅವಳಿಗೆ ಒಡೆತನ ದೊರೆತದ್ದೇ ಆಗಿದ್ದರೆ ಅವಳು ತನ್ನ ಮೇಲೆ ಎಲ್ಲಿ ಹಿಡಿತ ಸಾಧಿಸಲು ಪ್ರಯತ್ನಿಸುವಳೋ ಎಂದು ಹಣದ ವ್ಯವಹಾರದಲ್ಲಿ ಸ್ತ್ರೀಯರನ್ನು ದೂರವಿರಿಸಿದರು. 'ಸಲಹೇಷು ಮಂತ್ರಿ' ಎಂದರೇ ಹೊರತು ಅಧಿಕಾರ ಪಡೆದು ಪ್ರಭುವಾಗು

ಎನ್ನಲಿಲ್ಲ. ಹಾಗೆಂದರೆ ಪುರುಷಪ್ರಪಂಚಕ್ಕೆ ಧಕ್ಕೆಯಾಗುತ್ತದೆಂಬ ಕಾರಣಕ್ಕೆ ಕೌಟುಂಬಿಕ ಹಂತದಲ್ಲೇ ಸ್ತ್ರೀಯರನ್ನು ಹತ್ತಿಕ್ಕುವ ಪ್ರಯತ್ನ ಮಾಡಿದರು.

**೫. ೩. ೨. ಸಾಮಾಜಿಕ ಕಾರಣಗಳು**

ಸ್ತ್ರೀಯರಿಗೆ ಸಮಾಜದ ಬಾಗಿಲು ಯಾವ ಕಾಲಕ್ಕೂ ತೆರೆದುಕೊಂಡಿಲ್ಲ. ಕುಟುಂಬದಾಚೆ ಪುರುಷನಂತೆ ತನಗೂ ಒಂದು ಜಗತ್ತಿದೆ ಎನ್ನುವುದು ಅವಳ ಪ್ರಜ್ಞೆಗೆ ತರಲು ಬಿಟ್ಟಿಲ್ಲ. ಒಂದು ವೇಳೆ ಪುರುಷ ಅವಳನ್ನು ತನ್ನಂತೆ ಸಮಾಜದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದೇ ಆಗಿದ್ದರೆ ಸತಿಪದ್ಧತಿಯಂತಹ ಜೀವನಾಂತ್ಯಗೊಳಿಸುವ ಪದ್ಧತಿಗೆ ಖಂಡಿತ ಶರಣಾಗುತ್ತಿರಲಿಲ್ಲ. ಅವಳಿಗಾಗಿ ಶಿಕ್ಷಣ, ಧರ್ಮ, ಆಡಳಿತ ಕ್ಷೇತ್ರಗಳಲ್ಲಿ ಭಾಗವಹಿಸುವಿಕೆಗೆ ಮುಕ್ತ ಅವಕಾಶ ಕೊಟ್ಟಿದ್ದೇ ಆಗಿದ್ದರೆ, ಅವಳ ಚಿಂತನೆಯಲ್ಲಿ ಅಂತರ್ಮುಖಿ ಸಂವಹನ ಕ್ರಿಯೆ ನಡೆಯುತ್ತಿತ್ತು. ತನ್ನನ್ನೇ ವಿಮರ್ಶೆಗೊಳಪಡಿಸಿಕೊಳ್ಳುತ್ತಿದ್ದಳು. ಸ್ವರ್ಗ, ನರಕ, ಪಾಪ, ಕರ್ಮ, ಪರಲೋಕ, ಮುಕ್ತಿ ಇವುಗಳ ಬಗ್ಗೆ ನೈಜತೆ ಅರಿವಾಗುತ್ತಿತ್ತು. ಆದರೆ ಹೆಣ್ಣಿಗೆ ಬೌದ್ಧಿಕ ಮತ್ತು ಧಾರ್ಮಿಕ ಎರಡೂ ಕ್ಷೇತ್ರಗಳನ್ನು ನಿಷಿದ್ಧ ಮಾಡಲಾಗಿತ್ತು. ಇಂಥ ಅಪರಿಚಿತ ಸಮಾಜದಲ್ಲಿ ತನ್ನ ಗುರುತಿಸುವಿಕೆ ಮತ್ತು ವೈಭವೀಕರಿಸುವಿಕೆ ನಡೆಯುತ್ತದೆ ಎಂದರೆ, ಆಕೆಯ ಪ್ರತಿನಿಧೀಕರಣ ಜೀವನದ ಸಾರ್ಥಕತೆ ಎಂದುಕೊಳ್ಳುತ್ತಾಳೆ. ಅದಕ್ಕೆ ಅವಳು ತನ್ನನ್ನು ಸಂತೋಷದಿಂದಲೇ ಅರ್ಪಿಸಿಕೊಳ್ಳುತಾಳೆ. ಅವಳಿಗಾಗಿ ನಿರ್ಮಾಣವಾದ ಸಾಮಾಜಿಕ ನಿಯಮಗಳಾವುವು ಎಂಬುದನ್ನು ನೋಡಬೇಕಿದೆ.

**ಅ) ಸಮಾಜದಲ್ಲಿ ಮಾನ್ಯತೆ ಇಲ್ಲದಿರುವುದು**

ದೇಕಬ್ಬೆ ಪತಿ ಮರಣ ಹೊಂದಿದ ವಿಷಯ ತಿಳಿದು ತಾನು ಸತಿಹೋಗಲು ತೀರ್ಮಾನಿಸುತ್ತಾಳೆ. ಸತಿಹೋಗುವ ವಿಷಯ ಕೇಳಿ ತಂದೆ ತಾಯಿ, ಬಂಧುಗಳು ಎಲ್ಲರೂ ಬೇಡವೆಂದು ಬೇಡಿಕೊಳ್ಳುತ್ತಾರೆ. ಆದರೆ ಆಕೆ ಅವರ ಬೇಡಿಕೆಗೆ ಮಣಿಯದೆ ತನ್ನ ದೃಢ ನಿರ್ಧಾರವನ್ನು ಬದಲಿಸುವುದಿಲ್ಲವೆಂದು ಹೇಳುತ್ತಾಳೆ. ದೇಕಬ್ಬೆಯ ನಿರ್ಧಾರದ ಹಿಂದಿದ್ದ ಒತ್ತಡಗಳು ವ್ಯಕ್ತವಾಗುವುದಿಲ್ಲ. ಇನ್ನು ಯೌವನದ ಹೊಸ್ತಿಲಿನಲ್ಲಿರುವ ದೇಕಬ್ಬೆ ಬದುಕಿನ ಬಗ್ಗೆ ಆಸೆ ತೊರೆದು ಸಾಯುವ ಕಠಿಣ ನಿರ್ಧಾರ ಮಾಡುತ್ತಾಳೆ. ಕೌಟುಂಬಿಕವಾಗಿಯೂ ಆಕೆಯ ಸಹಗಮನಕ್ಕೆ ಒಪ್ಪಿಗೆ ಇರುವುದಿಲ್ಲ. ಆದರೂ ದೇಕಬ್ಬೆ ಹಿಂತೆಗೆಯುವುದಿಲ್ಲ. ಎಲ್ಲದಕ್ಕಿಂತಲೂ ಸಮಾಜದ ಒಪ್ಪಿಗೆ ಮುಖ್ಯ. ನಾವು ಬದುಕುತ್ತಿರುವುದು ಸಮಾಜದಲ್ಲಿ. ಸಮಾಜದ ನೀತಿ ನಿಯಮಗಳಿಗೆ ಬದ್ಧರಾಗಿ ಜೀವನ ಮಾಡದೆ ಹೋದರೆ ನಮಗೆ ಸಮಾಜದಲ್ಲಿ ಮಾನ್ಯತೆ ಸಿಗುವುದಿಲ್ಲ. ತನಗೆ ಗೌರವ ಕೊಡದ ಸಮಾಜದಲ್ಲಿ ಅವಳು ಬದುಕುವುದಾದರೂ ಹೇಗೆ? ಪತಿಯನ್ನು ಅನುಸರಿಸದ ಪತ್ನಿ ಪತಿವ್ರತೆ ಹೇಗಾಗುತ್ತಾಳೆ ಎಂದು ಸಮಾಜ ಕೇಳುವ

ಪ್ರಶ್ನೆಗೆ ಉತ್ತರವಾಗುವುದು ದೇಕಬ್ಬೆಗೆ ಒಪ್ಪಿಗೆ ಇರುವುದಿಲ್ಲ. ಹಾಗಾಗಿ ತನ್ನ ಒಳಗುದಿಯನ್ನು ಸೂಕ್ಷ್ಮವಾಗಿ ಒಂದು ಕಡೆ ಹೇಳಿದ್ದಾಳೆ.

ನುಗುನಾಡಧಿಪತಿ ರವಿಗನ
ಮಗಳಾಗಿಯುಮಂತೆ ನವಿಲೆನಾಡಧಿಪತಿಗಾಂ
ನೆಗಟಿ ಸತಿಯಾಗಿ ಬಾಳ್ವುದು
ಬಗೆದರ್ಪೆನೆ ಕೊಟ್ಟ ಕೊಂಡ ಮನೆಯಸಮಳಿಯಲ್

(E. C. III, ಹೆಗ್ಗಡದೇವನಕೋಟೆ ೬೦), 'ಕೊಟ್ಟ ಕೊಂಡ ಮನೆಗೆ ಕೆಟ್ಟ ಹೆಸರು ತರುವುದಿಲ್ಲ' ತಾನು ಸತಿ ಹೋಗದೆ ಇದ್ದರೆ ತನ್ನಷ್ಟೇ ಅಲ್ಲ. ತಮ್ಮ ಮನೆತನವನ್ನು ಈ ಸಮಾಜ ಕೀಳು ದೃಷ್ಟಿಯಿಂದ ನೋಡುತ್ತದೆ ಎನ್ನುವುದು ದೇಕಬ್ಬೆಯ ಧ್ವನಿಯಾಗಿದೆ. ಸತಿ ಹೋದರೆ ಅಂಥವರನ್ನು ಸಮಾಜ ಹೊಗಳುತ್ತದೆ. ಇಲ್ಲದಿದ್ದರೆ ಕೀಳಾಗಿ ಕಾಣುತ್ತದೆ. ಮಹಾಭಾರತದಲ್ಲಿ ಮಾದ್ರಿ ಸತಿಹೋಗುವ ತೀರ್ಮಾನ ಕೇಳಿ "ತಪೋವನ ಮುನಿಜನಮುಂ, ವನದೇವತಾ ಜನಮುಂ ತನ್ನಣ್ಮಂ ಪೊಗಳೆ" ತಾನು ಸತಿಹೋಗುವುದರಿಂದ ಎಲ್ಲರಿಗೂ ಮಾನ್ಯತೆ ಇರುತ್ತದೆ. ಅಂತಹ ನಿರ್ಧಾರಕ್ಕೆ ಸಮಾನರಾದವರಾರು, ಅವಳಿಗೆ, ಅವಳ ಕುಲಕ್ಕೆ ಕುಂದಿಲ್ಲವೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ.

"ಕುಲದೊಳಂ ಚಲದೊಳಂಮಾವ ಕುಂದುಂವಿಲ್ಲದೆ ತನ್ನೋರೆಗಂ ದೊರೆಗಮ್ ಆರುಮಿಲ್ಲೆನಿಸಿದಾಗಳ್"(ಪಂಪ; ಪಂಪಭಾರತ, ಬಸವರಾಜು ಎಲ್.(ಸಂ); ಪುಟ ೬೮).

**ಆ) ಪತಿರಹಿತ ಜೀವನ ಅಸಾಧ್ಯ;**

ಪತಿ ಹೊರತಾಗಿ ಸತಿ ಜೀವನ ಅಸಾಧ್ಯವೆಂಬ ಅವಲಂಬನಾ ಪ್ರವೃತ್ತಿಯನ್ನು ಅವಳಲ್ಲಿ ಹುಟ್ಟು ಹಾಕಿದ್ದಾರೆ. ಹೆಣ್ಣು ಹುಟ್ಟಿನಿಂದ ಸಾಯುವವರೆಗೂ ಗಂಡಸಿನ ನೆರಳಲ್ಲೇ ಬದುಕಬೇಕು. ಅಲ್ಲೇ ಅವಳಿಗೆ ಸುರಕ್ಷತೆಯಿರುವುದು ಎಂದು ಅವಳಿಗೆ ಸ್ವಂತಿಕೆ ಇಲ್ಲದಂತೆ ಮಾಡಿದ್ದಾರೆ. ಪತಿಯೇ ತನ್ನ ಸರ್ವಸ್ವವೆಂದು ಭಾರತೀಯ ಹೆಣ್ಣುಮಕ್ಕಳು ಸದಾ ಅವನಿಗಾಗಿಯೇ ಜೀವಿಸುತ್ತಾರೆ. ಅವನಿಗಾಗಿಯೇ ಮರಣ ಹೊಂದುತ್ತಾರೆ. ಸತಿಯಾದವಳು ಗಂಡನ ಸುಖ–ದುಃಖ, ಕಷ್ಟ–ನಷ್ಟದಲ್ಲಿ ಭಾಗಿಗಳಾಗಿರಬೇಕೆಂದು ಜೀವನದ ಏಳುಬೀಳಿನಲ್ಲಿ ಜೊತೆಯಾಗಿದ್ದವರು ಪತಿ–ಪತ್ನಿಯರು. ಹೀಗಿರುವಾಗ ಪತಿಯ ಆಕಸ್ಮಿಕ ಮರಣ ಅವಳಿಗೆ ಬದುಕಿನ ಬಗ್ಗೆ ಜಿಗುಪ್ಸೆ ತರುವ ಸಂದರ್ಭ ಆಗಿರುತ್ತದೆ, ಅಂಥ ಸಂದರ್ಭದಲ್ಲಿ ಅವಳ ಮನಸ್ಥಿತಿ ಅವನ ಹೊರತಾಗಿ ಜೀವನ ಅಸಾಧ್ಯವೆಂದು ಯೋಚಿಸುವುದು ಸಹಜ. ಹಾಗೆಂದು ಆ ಕಾರಣಕ್ಕಾಗಿ ಅವಳು ಜೀವಂತ ಸಾವನ್ನು ಎದುರಿಸಲು ಖಂಡಿತಾ ಸಿದ್ಧಳಿರುವುದಿಲ್ಲ. ಪತಿ ಹೊರತಾಗಿ ಜೀವಿಸಲು ಅಸಾಧ್ಯವೆಂಬುದೇ ಆಗಿದ್ದರೆ, ಇಂದಿಗೂ ಎಂತಹ ಕಠಿಣ ಕಾನೂನು ಜಾರಿ ಮಾಡಿದರೂ ಸ್ತ್ರೀಯರು ಸತಿಹೋಗುವುದನ್ನು ನಿಲ್ಲಿಸುತ್ತಿರಲಿಲ್ಲ. ಆದರೆ ಅದು ಅವಳ ಇಷ್ಟವಲ್ಲ. ಸಮಾಜ ಅವಳ ಮೂಲಕ ತನ್ನ ಇಷ್ಟವನ್ನು ಹೇರಿದೆ. ಅವನ ಹೊರತಾಗಿ

ಅವಳಿಗೂ ಜೀವನವಿದೆ. ಏಕೆಂದರೆ ಅವಳದೂ ಒಂದು ಜೀವ. ಅದಕ್ಕೊಂದು ಅಸ್ತಿತ್ವವಿದೆ. ಅವಳೂ ಬದುಕಬೇಕು ಎಂಬ ಕನಿಷ್ಠ ಅವಕಾಶವನ್ನು ನಮ್ಮ ಪುರುಷಪ್ರಧಾನ ಸಮಾಜ ಅವಳಿಗೆ ದೊರಕಿಸಿಕೊಟ್ಟಿಲ್ಲ. ಪತ್ನಿ ಹೊರತಾಗಿ ಪತಿಗೆ ಜೀವನವಿದೆ ಅಂದ ಮೇಲೆ ಪತಿಯ ಹೊರತಾಗಿ ಪತ್ನಿಗೇಕಿಲ್ಲ? ಅವಳೂ ತನ್ನಂತೆಯೇ ಎಂದು, ಪುರುಷಸಮಾಜ ಎಂದೂ ಭಾವಿಸಿಲ್ಲ. ಅವಳಿಗಾಗಿ ಪ್ರತ್ಯೇಕ ನಿಯಮಗಳನ್ನು ರೂಪಿಸಿ ಸದಾ ಅವಳು ಅವುಗಳನ್ನು ಪಾಲಿಸುವತ್ತ ಕೇಂದ್ರೀಕರಿಸಿದ್ದಾನೆ. ಅವಳು ತನ್ನ ಅಧೀನದಲ್ಲೇ ಇರಬೇಕೆಂದು ಇಂತಹ ಪದ್ಧತಿಗಳನ್ನು ಹುಟ್ಟು ಹಾಕಿದೆ ನಮ್ಮ ಸಮಾಜ.

**ಇ) ವೈಧವ್ಯ ತಿರಸ್ಕರಿಸಿದ ಸಮಾಜ**

ಪಾತಿವ್ರತ್ಯಕ್ಕೆ ಪರಮೋಚ್ಚ ಸ್ಥಾನ ಕೊಟ್ಟಿರುವ ಸಮಾಜ ವೈಧವ್ಯಕ್ಕೆ ಅಷ್ಟೇ ನಿಕೃಷ್ಟ ಸ್ಥಾನ ಕೊಟ್ಟಿದೆ. ವಿಧುರನನ್ನು ಒಪ್ಪಿಕೊಂಡಿದೆ. ವಿಧವೆಯನ್ನು ತಿರಸ್ಕರಿಸಿದೆ. ಸಮಾಜದಲ್ಲಿ ಮಹಿಳೆಯ ಬದುಕನ್ನು ಸಮಾಜವೇ ಒಪ್ಪಿಕೊಳ್ಳದ ಮೇಲೆ ಅವಳ ಅಸ್ತಿತ್ವ ಮುಂದುವರಿಯಲು ಹೇಗೆ ಸಾಧ್ಯ? ಈ ಕಾರಣದಿಂದಲೇ ನಮ್ಮ ಮಹಿಳೆಯರು ಸದಾ ಮುತ್ತೈದೆತನಕ್ಕೆ ಹಂಬಲಿಸುತ್ತಿದ್ದರು. ಪತಿ ಜೊತೆ ಸತಿ ಚಿತೆ ಏರದೆ ಹೋದರೆ ಅವಳಿಗೆ ಬದುಕಲು ಅವಕಾಶ ಕೊಡುತ್ತಿರಲಿಲ್ಲ. ಜೀವಿಸಲು ಅವಕಾಶವಿಲ್ಲವೆಂದ ಮೇಲೆ ಉಳಿದಿರುವುದು ಸಾವೊಂದೆ ಅಲ್ಲವೆ? ಬಾರ್ಬೊಸಾ(೧೫೦೦) ತನ್ನ ವರದಿಯಲ್ಲಿ ಸಹಗಮನ ಮಾಡದ ಹೆಂಗಸರಿಗೆ ಎಂತಹ ಜೀವನ ದೊರಕುತ್ತಿತ್ತೆಂದು ಹೇಳುತ್ತಾನೆ. ಅವಳಿಗೆ "ಅಗೌರವ ತೋರಿಸಿ ತಲೆಬೋಳಿಸಿ ಅಮಂಗಳವೆಂದು ಮನೆಯಿಂದ ಅಟ್ಟುತ್ತಾರೆ. ಇವರು ದಿಕ್ಕಿಲ್ಲದೆ ಅಲೆಯುತ್ತಾರೆ. ಚಿಕ್ಕ ವಯಸ್ಸಿನವರ ಬಗ್ಗೆ ದಯೆ ದಾಕ್ಷಿಣ್ಯ ತೋರಿಸಿ ಅಲ್ಲೇ ದೇವಸ್ಥಾನಕ್ಕೆ ಹಣ ಗಳಿಸಲು ದೇವದಾಸಿಯರನ್ನಾಗಿ ಬಿಡುತ್ತಾರೆ. ಇಂತಹವು ಅನೇಕ ಇವೆ. ಅಲ್ಲಿ ಐವತ್ತರಿಂದ ನೂರು ದೇವದಾಸಿಯರಿರುವುದನ್ನು ನೋಡಬಹುದು"(ನಾಗೇಗೌಡ ಎಚ್. ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೨೭೩).

ವಿಧವೆಯರಿಗೆ ಸಮಾಜದಲ್ಲಿ ಜೀವನವೂ ಇಲ್ಲ, ಮಾನ್ಯತೆಯೂ ಇಲ್ಲ ಎಂದ ಮೇಲೆ ಅವರು ಮಾಡಬೇಕಾದದ್ದೇನು? ನಮ್ಮ ಧರ್ಮಶಾಸ್ತ್ರಗಳು ಕನಿಷ್ಠ ಪಕ್ಷ ಬದುಕುವ ಅವಕಾಶವನ್ನು ಅವರಿಗೆ ಕೊಟ್ಟಿಲ್ಲ. ಮನು ಗಂಡಸರಿಗೆ ವಿವಾಹವಾಗಲು ಹತ್ತಾರು ಅವಕಾಶ, ಆಯ್ಕೆ ಕೊಟ್ಟು ಸ್ತ್ರೀಯರಿಗೆ ಖಡಾಖಂಡಿತವಾಗಿ ನಿರಾಕರಿಸಿದ. 'ನ ವಿವಾಹ ವಿಧಾವುಕ್ತಂ ವಿಧವಾವೇದನಂ ಪುನಃ.' ವಿಧವೆಗೆ ಪುನರ್ವಿವಾಹವನ್ನು ಶಾಸ್ತ್ರವಿಧಿಯಲ್ಲಿ ಎಲ್ಲಿಯೂ ಹೇಳಿಲ್ಲ(ಶೇಷ ನವರತ್ನ(ಅನು); ಮನುಸ್ಮೃತಿ, ಪುಟ ೬೫). ಹಾಗಾದರೆ ಅವರೇನಾಗಬೇಕು? ದೇವಾಲಯಗಳಲ್ಲಿ ದೇವದಾಸಿಯರೆ ಅಥವಾ ಸಮಾಜದಲ್ಲಿ ಸೂಳೆಯರೆ? ಎಲ್ಲವನ್ನು ಹೇಳಿ ಅವರೇನಾಗಬೇಕೆಂಬುದನ್ನೇಕೆ ಹೇಳಲಿಲ್ಲ.

ಎಂತಹ ಪರಿಸ್ಥಿತಿಯಲ್ಲೂ ವಿಧವೆಯಾಗಿ ಬದುಕು ಬೇಡವೆನ್ನುತ್ತಾರೆ, ಕಾರಣ ಅದು ಅತ್ಯಂತ ನಿಕೃಷ್ಟ ಜೀವನವಾಗಿದೆ. ಇದು ಸಾಮಾನ್ಯ ಸ್ತ್ರೀಯರ ಮಾತಲ್ಲ. ದೇವತೆಗಳೆನಿಸಿಕೊಂಡವರ ಇಂಗಿತವೂ ಇದೇ ಆಗಿದೆ. ಕಾಮದಹನದ ನಂತರ ರತಿ ಶಿವನ ಮುಂದೆ ತನ್ನ ದುಃಖಪೂರಿತ ಪ್ರಶ್ನೆಯನ್ನು ಕೇಳುತ್ತಾಳೆ.

'ಸರ್ವರೊಳಗೆ ಮುತ್ತೈದೆಯಾಗೆರ್ದು ವೈ
ಧವ್ಯವನಾಂತು ಬಾಳುವೆನೆ'

(ಕನಕದಾಸ; ಮೋಹನ ತರಂಗಿಣಿ, ಸಣ್ಣಯ್ಯ ಬಿ.ಎಸ್.(ಸಂ); ಮೋಹನ ತರಂಗಿಣಿ ಸಂಗ್ರಹ, ಪುಟ ೬೫). ಎಲ್ಲರ ಮದ್ಯದಲ್ಲಿ ಇಷ್ಟು ದಿನ ಮುತ್ತೈದೆಯಾಗಿದ್ದ ನಾನು ವೈಧವ್ಯವನ್ನು ಹೇಗೆ ಒಪ್ಪಿಕೊಳ್ಳಲಿ ಎಂದು ಪ್ರಶ್ನಿಸುತ್ತಾಳೆ. ಸಮಾಜದಲ್ಲಿ ಮುತ್ತೈದೆಯರ ಮಧ್ಯದಲ್ಲಿ ವಿಧವೆಗೆ ಮಾನ್ಯತೆ ಇರುವುದಿಲ್ಲ. ಅಂತಹ ಮಾನ್ಯತೆ ಇಲ್ಲದ ಜೀವನ ಬೇಕಿಲ್ಲ ಎಂಬ ಅಭಿಪ್ರಾಯವಿಲ್ಲಿದೆ.

**ಈ) ಪತಿವ್ರತ್ಯಕ್ಕಿದ್ದ ಪರಮೋಚ್ಚಸ್ಥಾನ**

ನಮ್ಮ ದೇಶದ ಪ್ರತಿಯೊಬ್ಬ ಸ್ತ್ರೀಯರಿಗೂ ಆದರ್ಶವಾಗಿರುವ ಸ್ತ್ರೀ ವ್ಯಕ್ತಿತ್ವಗಳೆಂದರೆ ಮಹಾಪತಿವ್ರತೆಯರಾದ ಸೀತೆ, ಸಾವಿತ್ರಿ, ದ್ರೌಪದಿ, ಅಹಲ್ಯ, ಮಂಡೋದರಿ. ಇವರು ತಮಗಾಗಿ ಯಾರೂ ಬದುಕಿಲ್ಲ. ತಮಗಾಗಿ ಬದುಕುವವರು ಪತಿವ್ರತೆಯರಲ್ಲ. ನಮ್ಮ ಮಹಾಕಾವ್ಯಗಳು ಹೇಳಿರುವುದು ಇದನ್ನೇ. ಈ ಮಹಾನ್ ಸತಿಯರೆಲ್ಲ ಗಂಡನಿಗಾಗಿಯೇ ಬದುಕಿದವರು. ಒಬ್ಬಳು ಸದಾ ಗಂಡನ ನ್ಯಾಯ, ನೀತಿಗಾಗಿ, ಆತನ ಶ್ರೇಯಸ್ಸಿಗೆ ಕಟ್ಟು ಬಿದ್ದು ಬದುಕಿದವಳು. ಒಬ್ಬಳು ಗಂಡನ ಜೀವಕ್ಕಾಗಿ ಹೋರಾಡಿದವಳು. ಇನ್ನೊಬ್ಬಳು ಗಂಡಂದಿರ ತಪ್ಪಿಗಾಗಿ ಸದಾ ಅವರ ಏಳಿಗೆಗಾಗಿ ಬದುಕಿದವಳು. ಮತ್ತೊಬ್ಬಳು ತನ್ನದಲ್ಲದ ತಪ್ಪಿಗೆ ಶಾಪಗ್ರಸ್ತೆಯಾಗಿ ಗಂಡನಿಂದ ಪರಿತಪ್ತಳಾಗಿ ಕ್ಷಮೆಗಾಗಿ ಕಾದವಳು, ಮಗದೊಬ್ಬಳು ಗಂಡನ ದರ್ಪ, ದುರಹಂಕಾರ, ಅಟ್ಟಹಾಸ ಸಹಿಸಿಕೊಂಡವಳು. ಇವರೆಲ್ಲ ಗಂಡಂದಿರಿಗಾಗಿ ಬದುಕಿದವರು ಮತ್ತು ಬದುಕಿರುವವರೆಗೂ ತಮ್ಮದಲ್ಲದ ತಪ್ಪಿಗೆ ಶಿಕ್ಷೆ ಅನುಭವಿಸಿದವರು. ಅದಕ್ಕಾಗಿ ಅವರು ಮಹಾಪತಿವ್ರತೆಯರಾದರು, ನೀವೂ ಕೂಡ ಇಂಥ ಪತಿವ್ರತೆಯರ ಸಾಲಿಗೆ ಸೇರಬೇಕೆಂದರೆ ಇವರಂತೆ ಬದುಕಿ. ಹಾಗೆ ಬದುಕಬೇಕೆಂದು ನಮ್ಮ ಸಮಾಜ ನಿರೀಕ್ಷಿಸುವುದು. ಪಾತಿವ್ರತ್ಯದ ಮೌಲ್ಯವನ್ನು ಅವರಿಂದಲೇ ಹೇಳಿಸಿದ್ದಾರೆ ನಮ್ಮ ಕವಿಗಳು. ದ್ರೌಪದಿ 'ಶೃಂಗಾರವೆಮಗೆ ಪತಿವ್ರತಾ ಗುಣವು' ಎನ್ನುತ್ತಾಳೆ(ಕುಮಾರವ್ಯಾಸ; ಕರ್ಣಾಟಕ ಭಾರತ ಕಥಾಮಂಜರಿ, ಪುಟ್ಟಪ್ಪ, ಕೆ.ವಿ. ಮಾಸ್ತಿ ವೆಂಕಟೇಶ ಅಯ್ಯಂಗಾರ(ಸಂ), ಪುಟ ೨೪೧). ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಪತಿ ಪತ್ನಿಗೆ ಸಾಕ್ಷಾತ್ ದೇವರಾಗಿದ್ದಾನೆ. 'ಪತಿಭಕ್ತಿಯಲ್ಲಿ ಅರುಂಧತಿಗೆ ಸಮಾನ' ಇದ್ದಳು. ಹರಿಶ್ಚಂದ್ರನರಸಿ ಚಂದ್ರಮತಿ ಎನ್ನುತ್ತಾನೆ. 'ಘನಪತಿವ್ರತೆಯಾದ ನಿಜಸತಿ' ಎಂದು ಚಂದ್ರಮತಿಗೆ ಹರಿಶ್ಚಂದ್ರನಿಂದ ಹೊಗಳಿಸಿದ್ದಾನೆ. (ರಾಘವಾಂಕ; ಹರಿಶ್ಚಂದ್ರ ಕಾವ್ಯ, ಗೋಪಾಲ

ಕೆ.ಎಸ್.(ಸಂ); ಸರಳಗದ್ಯ ಕಥನ, ಪುಟ ೩೧). ಕುಮಾರ ವಾಲ್ಮೀಕಿ 'ಪತಿವ್ರತೆಯರಿಗೆ ವಿಷಾಮೃತವಹುದುರಿ ಹಿಮಾನ್ವಿತರಸವಹುದು ಬಲಹಾವು ನೇವಳವಹುದು ಬೆಂಬಿಡದೆ ಎಸಗಿದಪವಾದಂಗಳಿವು'.

....ಜಾನಕಿ ಜಗದ ಜನಿಯಲ್ಲ
ಕರೆದುಕೋ ಸಾಕೆಲ್ಲಪರಿಯಂ
ತರ ಪರೀಕ್ಷಿಪೆ ಪುಣ್ಯ ಚರಿತೆಯಂ
ಪರಮಪಾತಿವ್ರತೆಯನೆಂದರು ಗೌರಿದೇವಿಯರು

(ಕುಮಾರ ವಾಲ್ಮೀಕಿ; ತೊರವೆ ರಾಮಾಯಣ, ಪುಟ ೬೬೦). ಇವರೆಲ್ಲ ಗಂಡನಿಂದ ಸಾಕಷ್ಟು ಕಷ್ಟನಷ್ಟಗಳನ್ನು ಅನುಭವಿಸಿದರು. ಸಹನೆಯಿಂದ ಬದುಕಿದವರು, ಗಂಡನಿಗೆ ನಿಷ್ಠೆಯಿಂದ ಇದ್ದವರು. ಇವರು ಹಾಗೆ ಪತಿವ್ರತೆಯರನಿಸಲಿಲ್ಲ. ಇವರೆಲ್ಲ ಗಂಡನಿಗಿಂತ ಮೊದಲು ಮತ್ತು ಜೊತೆಗೆ ಮರಣಿಸಿದವರು. ಹೆಣ್ಣು ಮಗು ಜನಿಸುತ್ತಲೇ ಇವರ ಕಥೆ ಕೇಳುತ್ತಾ ಬೆಳೆಯುತ್ತಾಳೆ. ಅವಳನ್ನು ತಯಾರಿ ಮಾಡುವ ಕೆಲಸ ಬಾಲ್ಯದಿಂದಲೇ ನಡೆಯುತ್ತದೆ. ಒಂದು ರೀತಿ ಹೆಣ್ಣುಮಕ್ಕಳನ್ನು ಆದರ್ಶನಾರಿಯರ ಪ್ರಪಂಚದಲ್ಲಿ ಮಾನಸಿಕವಾಗಿ ಬಂಧಿಸಿಡುವ ಕೆಲಸವೆನ್ನಬಹುದು. ಅವರ ಮುಂದೆ ಬೇರೆ ಪ್ರಪಂಚ ತೆರೆದಿಟ್ಟರೆ ಅವರು ಅದನ್ನೇ ಸ್ವೀಕರಿಸುತ್ತಿದ್ದರೇನೋ, ಆದರೆ ಹಾಗಾಗಲಿಲ್ಲ. ರಾಮಾಯಣದಲ್ಲಿ ಸೀತೆ ಶಿಕ್ಷಣ ಪಡೆಯುವುದರ ಜೊತೆಗೆ ಮಹಾ ಪತಿವ್ರತೆಯರ ಕಥೆಗಳನ್ನೇ ಕೇಳುತ್ತಾ ಬೆಳೆದಳಂತೆ. ವಿದ್ಯೆಯಲ್ಲೂ ಗಂಡು ಮಕ್ಕಳಿಗೆ ಬೇರೆ ವಿದ್ಯೆ, ಹೆಣ್ಣುಮಕ್ಕಳಿಗೆ ಬೇರೆ ವಿದ್ಯೆ ಎಂದು. ಪ್ರತ್ಯೇಕಿಸಿ ನೀಡಲಾಗಿದೆ. ಅವರಿಗೆ ಶಸ್ತ್ರಾಸ್ತ್ರ, ಯುದ್ಧಕಲೆಯನ್ನು ಹೇಳಿಕೊಟ್ಟರೆ, ಇವರಿಗೆ ಸಂಗೀತ ನೃತ್ಯದ ಜೊತೆಗೆ ನೀತಿ ಕಥೆಗಳನ್ನು ಹೇಳಿಕೊಡಲಾಗುತ್ತಿತ್ತೆನಿಸುತ್ತದೆ.

**ಉ) ಮುತ್ತೈದೆತನಕ್ಕಿದ್ದ ಮಾನ್ಯತೆ**

ಹೆಣ್ಣುಮಕ್ಕಳ ವೈವಾಹಿಕ ಜೀವನದಿಂದ ಆರಂಭವಾಗುವ 'ಮುತ್ತೈದೆ' ಎಂಬುದು ಗೃಹಸ್ಥ ಜೀವನದಲ್ಲಿ ಒಂದು ಪದವಿ ಇದ್ದಂತೆ. ಮುತ್ತೈದೆ ಮಂಗಳವನ್ನುಂಟು ಮಾಡುವವಳು, ಶುಭಸೂಚಕಳು ಎಂಬ ಪರಿಕಲ್ಪನೆಗಳಿವೆ. ಆದರೆ ಸ್ತ್ರೀಯರಿಗೆ ಪತಿ ಜೀವಂತವಿರುವವರೆಗೆ ಮಾತ್ರ ಇರುವಂತಹ ಸ್ಥಾನವಿದು. ಪತಿ ಮರಣ ಹೊಂದಿದನೆಂದರೆ ಮುತ್ತೈದೆ ಸ್ಥಾನದಿಂದ ವೈಧವ್ಯ ದೊರೆಯುವುದು. ಅಲ್ಲಿಯವರಿಗೂ ಶುಭಸೂಚಕಳಾಗಿದ್ದವಳು ನಂತರ ಅಮಂಗಳೆ. ಒಳ್ಳೆಯ ಕಾರ್ಯದಲ್ಲಿ ಅವಳನ್ನು ನೋಡುವುದು ಕೆಟ್ಟದ್ದು. ಅವಳ ಮುಖದರ್ಶನದಿಂದ ಆಪತ್ತು ಸಂಭವಿಸುವುದು ಎಂಬ ಪರಿಕಲ್ಪನೆಯನ್ನು ಸಮಾಜದಲ್ಲಿ ಹುಟ್ಟು ಹಾಕಿರುವ ಸಂಪ್ರದಾಯಗಳು ಸ್ತ್ರೀಯರಿಗೆ 'ನಾವು ಬದುಕುವುದಾದರೆ ಪತಿಯೊಂದಿಗೆ ಮುತ್ತೈದೆತನದಿಂದ ಬದುಕುವ, ಅದು ಹೊರಟು ಹೋದಲ್ಲಿ ನಾವು ಹೊರಡುವ' ಎಂಬ ದೃಢನಿಶ್ಚಯದೊಂದಿಗೆ

ಬದುಕಿದ್ದರು. ಮುತ್ತೈದೆತನಕ್ಕಾಗಿ ಇರುವಷ್ಟು ದಿನವೂ ಉಪವಾಸ, ವ್ರತ, ಪೂಜೆ, ನಿಯಮ, ನಿಷ್ಠೆಗಳನ್ನು ಮಾಡುತ್ತಲೇ ಇರುತ್ತಾರೆ.

**೫. ೩. ೩. ರಾಜಕಿಯ ಕಾರಣಗಳು**

**ಅ) ಮೇಲಿಂದ ಮೇಲೆ ಸಂಭವಿಸುವ ಯುದ್ಧಗಳು:**

ಇತಿಹಾಸದಲ್ಲಿ ಯುದ್ಧಗಳು ವಿನಾಶವನ್ನು ಹೊತ್ತು ತರುವ ಮಾರಕ ಪ್ರಸಂಗಗಳಾಗಿವೆ. ಅದು ತರುವ ಅನಾಹುತಗಳ ಅರಿವಿದ್ದು ಯುದ್ಧಕ್ಕೆ ಧುಮುಕುತ್ತಿದ್ದರು.

ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಲಮೀ ಭಟಖಡ್ಗಮಂಡಲೋ
ತ್ಪಲವನ ವಿಭ್ರಮ ಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ

(ಪಂಪ; ಆದಿಪುರಾಣ, ನರಸಿಂಹಶಾಸ್ತ್ರಿ ಕೆ.ಎಲ್.(ಸಂ), ಪುಟ ೫೮೭). ಯುದ್ಧವೀರರ ಖಡ್ಗಗಳೆಂಬ ಕನ್ನೈದಿಲೆಯ ಕೊಳದಲಿ ಹೂವಿಂದ ಹೂವಿಗೆ ದುಂಬಿಯಂತೆ ಸದಾ ಸಂಚರಿಸುವ ಚಂಚಲೆಯಾದ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವವಳಾದ ರಾಜ್ಯಲಕ್ಷ್ಮಿ. ಈ ರೀತಿ ಶಾಶ್ವತವಾಗಿ ಯಾರಲ್ಲೂ ನೆಲಸದ ರಾಜ್ಯಕ್ಕಾಗಿ ಸಂಪತ್ತಿಗಾಗಿ ಸಂಭವಿಸುವ ಯುದ್ಧಗಳಿಗೆ ಇತಿಹಾಸದಲ್ಲಿ ಲೆಕ್ಕವೇ ಇಲ್ಲ. ಆದರೆ ಈ ಯುದ್ಧಗಳಲ್ಲಿ ರಾಜರಿಗೆ ರಾಜ್ಯಲಕ್ಷ್ಮಿ ಹಾಗೆ ಒಲಿಯುತ್ತಿರಲಿಲ್ಲ. ಅದಕ್ಕೆ ಬದಲಾಗಿ ಯೋಧರ ಪ್ರಾಣ ತೆರಬೇಕಿತ್ತು. ಅವರ ಜೊತೆ ಸತಿ ಹೆಸರಿನಲ್ಲಿ ಅವರ ಪತ್ನಿಯರ ಪ್ರಾಣ ಬಲಿಯಾಗುತ್ತಿತ್ತು. ರಾಜ್ಯ, ಸುಖ ಸಂಪತ್ತೆಲ್ಲ ರಾಜರಿಗಾದರೆ, ಅದಕ್ಕೆ ಬಲಿಯಾಗಬೇಕಾದವರು ಅಸಂಖ್ಯಾತ ಸಂಖ್ಯೆಯಲ್ಲಿ ಸೈನಿಕರು. 'ಜಿತೇನ ಲಭ್ಯತೆ ಲಕ್ಷ್ಮಿ, ಮೃತ್ಯುನಪಿ ಸುರಂಗನಾ' ಎಂಬ ಉತ್ಸಾಹದಾಯಕ ಮಾತುಗಳಿಂದ ಅವರು ಯಾವುದಕ್ಕೂ ಚಿಂತಿಸದೆ ಯುದ್ಧಕ್ಕೆ ಧುಮುಕುವಂತೆ ಮಾಡುತ್ತಿದ್ದರು. ಇದರ ಪರೋಕ್ಷ ಪರಿಣಾಮವಾಗುತ್ತಿದ್ದುದು ಸ್ತ್ರೀಯರ ಮೇಲೆ. ಹೀಗೆ ಯುದ್ಧಭೂಮಿಯಲ್ಲಿ ಸತ್ತ ತಮ್ಮ ಪತಿಯರ ಶವಗಳನ್ನು ಹುಡುಕುತ್ತಿರುವ ಕರುಣಾಜನಕ ಸ್ಥಿತಿಯನ್ನು ರನ್ನ ಕವಿ ಹೀಗೆ ವರ್ಣಿಸಿದ್ದಾನೆ.

ಮೊನೆಯೊಳಿದಿರ್ಚಿ ಸತ್ತ ಭಟನಂ ಗಜದಂತದೊಳಣ್ಮಿಸತ್ತ ಭೀ
ರನನದಟಂ ಸಹಸ್ರಭಟರಂ ರಣದೊಳ್ ಪೂಣರ್ದಿಕ್ಕಿ ಸತ್ತಗಂಡ
ನನಱಸುತ್ತೆ ಬರ್ಪ ಸುರಸುಂದರಿಯರ್ಕಳ ನೇಕ್ಷಿಸುತ್ತವೊಯ್ಯನೆ

(ರನ್ನ; ಸಾಹಸಭೀಮ ವಿಜಯ, ಹಂಪ ನಾಗರಾಜಯ್ಯ(ಸಂ); ರನ್ನ ಸಂಪುಟ, ಪುಟ ೫೦). ಯೋಧರಿಗೆ ಸಂಭವಿಸಿದ ಸಾವನ್ನು ಚಿತ್ರ ವಿಚಿತ್ರವಾಗಿ ಭಯಾನಕ ರೀತಿಯಲ್ಲಿ ಮರಣಿಸಿದ ರೀತಿಯನ್ನು ವರ್ಣಿಸಿದ್ದಾನೆ. ಚೂಪಾದ ಮೊನೆಯಿಂದ ಚುಚ್ಚಿದ, ಆನೆಯ ದಂತದಿಂದ ಚುಚ್ಚಿ ಸತ್ತ, ಸಹಸ್ರಾರು ಸೈನಿಕರು ನಾನಾವಿಧದಿಂದ ಸತ್ತಿರುವಾಗ ಅದರಲ್ಲಿ ತಮ್ಮ ಗಂಡಂದಿರೆಲ್ಲಿರುವರೆಂದು ಸುಂದರಿಯರು ಹುಡುಕುತ್ತ ಬರುತ್ತಿದ್ದರು. ಹಾಗೆ ಹುಡುಕುತ್ತಾ

ಬರುತ್ತಿರುವವರೆಲ್ಲ ಗಂಡನ ಶವವನ್ನು ತೆಗೆದುಕೊಂಡೊಯ್ದು ಪತಿಗೆ ಚಿತೆ ಮಾಡಿ ತಾವು ಅದರಲ್ಲಿ ಮರಣಿಸಲು ಸತ್ತ ಪತಿಯನ್ನು ಹುಡುಕುತ್ತ ಬರುತ್ತಿರುವರು.

ಕುಮಾರವ್ಯಾಸ ಯುದ್ಧ ಭೂಮಿಯಲ್ಲಿ ವೀರಮರಣ ಹೊಂದಿದ ಯೋಧರ ದೇಹವನ್ನು ಅವರ ಪತ್ನಿಯರು ಹುಡುಕುತ್ತಾ ಬರುವಾಗಿನ ಚಿತ್ರಣವನ್ನು ಹೀಗೆ ವರ್ಣಿಸಿದ್ದಾನೆ. 'ಅಷ್ಟಾದಶಾಕ್ಷೋಹಿಣಿಯ ನಾರಿಯರು ಮುಂದೆ ಹೆಣದಿನಿಹಿಗಳು, ಖಗ ವೃಂದ ಚೆಲ್ಲಿತ್ತು' (ಕುಮಾರವ್ಯಾಸ; ಕರ್ನಾಟಕ ಭಾರತ ಕಥಾಮಂಜರಿ, ಪುಟ್ಟಪ್ಪ ಕೆ. ವಿ. ಮಾಸ್ತಿ ವೆಂಕಟೇಶ ಅಯ್ಯಂಗಾರ್(ಸಂ), ಪುಟ ೬೨೧). ಪತಿಯು ಯುದ್ಧಭೂಮಿಯಲ್ಲಿ ಮಡಿದ ವಿಷಯ ಕೇಳಿ ಕಂಗೆಟ್ಟು ದಿಕ್ಕು ತೋಚದೆ ಬರುವುದನ್ನು ಕುಮಾರವ್ಯಾಸ ಹೀಗೆ ಚಿತ್ರಿಸಿದ್ದಾನೆ.

ಸೂಸಿತ ಬಲಾವೃಂದ ಕೆದರಿದ
ಕೇಶಪಾಶದ ತೆಳುವಸುರ ನಿ
ಟ್ಟಾಸುರುಧ ಹೊಯ್ಲುಗಳ ಲೋಚನವಾರಿಧಾರೆಗಳ
ಅಸುರಾಕ್ರಂದನದ ಶೋಕಾ
ವೇಶದ ಬಹಳದ ಬಾಲೆಯರು ಪ್ರಾ
ಣೇಶ ಮೈದೋರೆನುತ ಹೊಕ್ಕರಸಿದರು ಕಳನೊಳಗೆ

(ಕುಮಾರವ್ಯಾಸ; ಕರ್ಣಾಟಕ ಭಾರತ ಕಥಾಮಂಜರಿ, ಪುಟ್ಟಪ್ಪ ಕೆ. ವಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್(ಸಂ), ಪುಟ ೬೨೧). ವಿಜಯನಗರ ಸಾಮ್ರಾಜ್ಯದ ಆರಂಭಿಕ ಅವಧಿಯಲ್ಲಿ ಜೀವಿಸಿದ್ದ ಕುಮಾರವ್ಯಾಸ ಆ ಕಾಲದ ಯುದ್ಧಗಳನ್ನು ಕಣ್ಣಾರೆ ಕಂಡಿರಬೇಕು. ಯುದ್ಧಭೂಮಿಯಲ್ಲಿ ಸಂಭವಿಸಿದ್ದ ಸೈನಿಕರ ಮಾರಣಹೋಮವನ್ನು, ಅವರ ದೇಹವನ್ನು ಹುಡುಕಿಕೊಂಡು ಬರುವ ಅವರ ಸತಿಯ ಈ ಪದ್ಯದಲ್ಲಿ ಕಂಗೆಟ್ಟು, ದಿಕ್ಕು ತೋಚದೆ, ಚಿಂತಾಕ್ರಾಂತರಾಗಿ ದುಃಖದಿಂದ ಪತಿಯ ದೇಹಕ್ಕಾಗಿ ಹುಡುಕುತ್ತಿರುವ ದೃಶ್ಯ ನೈಜವೆನ್ನುವಂತೆ ವರ್ಣಿಸಿದ್ದಾನೆ. ಯುದ್ಧಗಳು ಆ ಕಾಲದಲ್ಲಿ ಸಾಮಾನ್ಯರ ಜೀವನದ ಮೇಲೆ ಅಧರಲ್ಲೂ ಸ್ತ್ರೀಯರ ಜೀವನದ ಮೇಲೆ ಎಂಥ ಪರಿಣಾಮವನ್ನು ಉಂಟು ಮಾಡುತ್ತಿರಬೇಕು. ವಿಜಯನಗರದ ಕಾಲಕ್ಕೆ ಸತಿಪದ್ಧತಿ ತೀವ್ರ ಸ್ವರೂಪವನ್ನು ಪಡೆದುಕೊಂಡಿತು. ಸಾಮೂಹಿಕವಾಗಿ ಸ್ತ್ರೀಯರು ಸತಿ ಹೋಗುತ್ತಿದ್ದರೆನ್ನುವುದಕ್ಕೆ ಸಾಲು ಸಾಲಾಗಿ ದೊರೆಯುವ ಸತಿ ಸ್ಮಾರಕಗಳೇ ಆಧಾರವಾಗಿವೆ.

ಹರಿದರಗಲಕ್ಕೆ ನಾರಿಯರು ಕುರು
ಧರಣಿಯಲಿ ತಂತಮ್ಮ ಪತಿಗಳ
ಕರಿಗಳಲಿ ತುರಗದಲ್ಲಿ ರಥದಲ್ಲಿ ಕಂಡರಲ್ಲಲ್ಲಿ
ಶಿರವ ಮುಂಡಾಡಿದರು ಹೆಣ್ಣಿನಲಿ
ಹೊರಳಿದರು ವಿವಿಧ ಪ್ರಳಾಪದ
ಪರಠವವನೆಂತರಿದರೋ ವರ್ಣಿಸುವಡರಿದೆಂದ

(ಕುಮಾರವ್ಯಾಸ; ಕರ್ಣಾಟಕ ಭಾರತ ಕಥಾಮಂಜರಿ, ಪುಟ್ಟಪ್ಪ ಕೆ. ವಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್(ಸಂ), ಪುಟ ೬೨೧). ಯುದ್ಧಭೂಮಿಯ ಪತಿಗಳು ಆನೆ, ಕುದುರೆ, ರಥಗಳಿಗೆ ಸಿಲುಕಿ ನಾನಾಪ್ರಕಾರವಾಗಿ ಸತ್ತು ಬಿದ್ದಿರುವುದನ್ನು ಕಂಡು ಸತಿಯರು ದುಃಖವನ್ನು ತಡೆದುಕೊಳ್ಳಲಾಗದ ಪ್ರಸಂಗವನ್ನು ಚಿತ್ರಿಸಿದ್ದಾನೆ. ಆ ಕಾಲದ ರಾಜಪ್ರಭುತ್ವದ ಪೈಪೋಟಿ, ರಾಜ್ಯ ವಿಸ್ತರಣೆಯ ಮಹತ್ವಾಕಾಂಕ್ಷೆ ಇವೆಲ್ಲ ವಿಜಯನಗರ ಅರಸರ ಕಾಲಕ್ಕೆ ಸಂಭವಿಸಿದವುಗಳೇ ಅಂಥ ಸಂದರ್ಭದಲ್ಲಿ ಪತಿಯರನ್ನು ಕಳೆದುಕೊಂಡು ಸ್ತ್ರೀಯರು ಅನುಭವಿಸಿದ ನೋವುಗಳನ್ನೇ ಕುಮಾರವ್ಯಾಸ ತನ್ನ ಕೃತಿಯಲ್ಲಿ ಬರೆದಿರುವುದು ಎನಿಸುತ್ತದೆ. ರಾಜರು ಸಾಮಾನ್ಯ ಜನರ ಜೀವನ ಮತ್ತು ಮರಣದ ಜೊತೆ ಯುದ್ಧಭೂಮಿಯಲ್ಲಿ ಚೆಲ್ಲಾಟವಾಡಿದರು.

**ಆ) ಸ್ತ್ರೀಯರ ಸೆರೆ**

ಯುದ್ಧಭೂಮಿಯಲ್ಲಿ ಶತ್ರು ಸೈನಿಕರು ಸೋತು ಓಡಿಹೋದ ಮೇಲೆ ಅವರನ್ನು ಹಿಂಬಾಲಿಸಿ ಹೋಗುತ್ತಿದ್ದರು. ಹಾಗೆ ಹೋದವರು ಊರನ್ನು ಮುತ್ತಿಗೆ ಹಾಕಿ ಅಲ್ಲಿರುವ ಅಮಾಯಕ ಸ್ತ್ರೀಯರು, ಮಕ್ಕಳು, ಬಾಲವೃದ್ಧರಾದಿಯಾಗಿ ನಿಶ್ಯಸ್ತ್ರಧಾರಿಗಳಾದ ಅವರ ಮೇಲೆ ಅಮಾನುಷವಾಗಿ ದಾಳಿ ಮಾಡಿ ಅವರೊಂದಿಗೆ ಹಿಂಸಾತ್ಮಕವಾಗಿ ವರ್ತಿಸುವುದು ನಮಗೆ ಶಾಸನಗಳಿಂದಲೇ ತಿಳಿದುಬಂದಿದೆ. ಕೆಲವೊಮ್ಮೆ ಸುಂದರವಾದ ಸ್ತ್ರೀಯರನ್ನು ಹೊತ್ತೊಯ್ಯುವ ಕೃತ್ಯವೂ ನಡೆಯುತ್ತಿತ್ತು. ರಾಜರಾಜನು ದಾನವೂರಿನಲ್ಲಿ ಬೀಡುಬಿಟ್ಟು ದೇಶವೆಲ್ಲವನ್ನು ಸೂರೆಗೊಂಡು ಸ್ತ್ರೀವಧೆ, ಬಾಲವಧೆ ಮಾಡಿ ಅವರ ಹೆಣ್ಣುಮಕ್ಕಳನ್ನು ಹಿಡಿದು ಜಾತಿ ನಾಶ ಮಾಡಿದ ಎಂದಿದೆ(EI. XVI, p11). ಭಂಡಕ್ ಶಾಸನದಲ್ಲಿ ದಂತಿದುರ್ಗನ ತಂದೆ ಇಂದ್ರರಾಜ ಅಥವಾ ಎರಡನೇ ಇಂದ್ರ ಖೇಟಕ ಮಂಡಲದಿಂದ ಚಾಲುಕ್ಯ ರಾಜಕುಮಾರಿ ಭವನಾಗ ಅಥವಾ ಭವಗಣಾಳನ್ನು ಆಕ್ರಮಣದ ಸಂದರ್ಭದಲ್ಲಿ ಅಪಹರಿಸಿ ತಂದಿರುವುದಲ್ಲದೆ ಬಲವಂತವಾಗಿ ರಾಕ್ಷಸ ರೀತಿಯಿಂದ ವಿವಾಹವಾಗಿದ್ದನೆಂದು ಉಲ್ಲೇಖವಿದೆ(EI. XIV, p121). ಒರಿಸ್ಸಾ ದಾಳಿಯಲ್ಲಿ ಕೃಷ್ಣದೇವರಾಯ ಒರಿಸ್ಸಾ ರಾಜನ ಹೆಂಡತಿ, ಮಗನನ್ನು ಸೆರೆಹಿಡಿದು ವಿಜಯನಗರಕ್ಕೆ ಕಳುಹಿಸಿದ್ದ(ನಾಗೇಗೌಡ ಎಚ್.ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ३೬೪). ಒಂದು ರಾಜ್ಯದ ರಾಣಿಗೇ ಈ ಪರಿಸ್ಥಿತಿಯಿತ್ತು. ರಾಜರಾಗಿ ಅವರು ವರ್ತಿಸುವ ರೀತಿ ಸರಿಯೆ ಎಂಬ ಪ್ರಶ್ನೆ ಕಾಡುವುದು ಸಹಜ. ಸ್ತ್ರೀ ಪೂಜ್ಯನೀಯಳು ಎಂದು ಹೇಳುವ ಸಂಸ್ಕೃತಿಯಲ್ಲಿ ಜನಿಸಿದ ಒಬ್ಬ ವ್ಯಕ್ತಿ ಈ ರೀತಿ ಸ್ತ್ರೀಯೊಂದಿಗೆ ನಡೆದುಕೊಳ್ಳುವ ರೀತಿ ಎಷ್ಟು ಸರಿ? ಒಬ್ಬ ಸಾಮಾನ್ಯ ಸ್ತ್ರೀಗೆ ದೊರೆತಷ್ಟು ಗೌರವ ಒಂದು ರಾಜ್ಯದ ರಾಣಿಗೆ ತೋರಲಿಲ್ಲವೆಂದರೆ ಸಾಮಾನ್ಯ ಮಹಿಳೆಯರ ಸ್ಥಿತಿ ಹೇಗಿರಬಹುದು. ಮಹಿಳೆಯರಿಗೆ ಜೀವಕ್ಕೂ ರಕ್ಷಣೆಯಿರಲಿಲ್ಲ, ಶೀಲಕ್ಕೂ ರಕ್ಷಣೆಯಿರಲಿಲ್ಲ. ಇಂಥ ವ್ಯವಸ್ಥೆಯಲ್ಲಿ ಅವರು ಜೀವಿಸುವುದಾದರೂ ಹೇಗೆ ಎಂಬ ಪ್ರಶ್ನೆ ಕಾಡದೆ ಇರದು. ಯುದ್ಧ ಸಂಭವಿಸುವುದೆಂದರೆ ಸ್ತ್ರೀಯರಿಗೆ ಅದರ ಅಂತ್ಯದ ಬಗ್ಗೆ ತಿಳಿದಿತ್ತು. ಹಾಗಾಗಿ ಅವರೇ ಇಂಥ ಅವಮಾನ ಅನುಭವಿಸುವುದಕ್ಕಿಂತ

ಮೊದಲು ಸಾಯುವ ತೀರ್ಮಾನ ತೆಗೆದುಕೊಳ್ಳುವುದು ಒಳಿತು ಎಂದು ಯೋಚಿಸುವ ಮಹಿಳೆಯರು ಇದ್ದರು.

ಯುದ್ಧಕ್ಕಿಂತ ಮೊದಲೇ ಮುಂದಿನ ಪರಿಣಾಮವನ್ನು ಊಹಿಸಿ ಸತಿಯರನ್ನು ಕೊಂದು ಯುದ್ಧಕ್ಕೆ ಹೋದ ಘಟನೆಯನ್ನು ನೂನಿಜ್ ತನ್ನ ವರದಿಯಲ್ಲಿ ಉಲ್ಲೇಖಿಸಿದ್ದಾನೆ. "ಯುದ್ಧದಲ್ಲಿ ಮಡಿದು ತಮ್ಮ ರಾಜ್ಯ ರಕ್ಷಿಸಲು, ತನ್ನ ಮರಣದ ನಂತರ ತನ್ನ ಸತಿಯರ ಶೀಲಭಂಗವಾಗದಿರಲೆಂದು ರಾಜನು ತನ್ನ ಕೈಯಾರೆ ತನ್ನ ಐವತ್ತು ಜನ ಹೆಂಡತಿಯರನ್ನು, ಹಲವಾರು ಹೆಣ್ಣು, ಗಂಡುಮಕ್ಕಳನ್ನು ತನ್ನ ಕೈಯಾರೆ ಕಡಿದು ಹಾಕಿದನು. ಅದರಂತೆ ಉಳಿದವರು ಮಾಡಿದರು. ಹೀಗೆ ಮಾಡಿದವರು ಇಲ್ಲಿಯ ರಾಜ" ಇಲ್ಲಿರುವ ರಾಜ ಕುಮಾರ ರಾಮನೆಂದು, ರಾಜಧಾನಿ ಆನೆಗುಂದಿ ಎಂದು, ದಾಳಿ ಮಾಡಿದ್ದು ಮೊಹಮದ್ ಬಿನ್ ತೊಗಲಕ್ ಎಂಬುದು ವಿದ್ವಾಂಸರ ಅಭಿಪ್ರಾಯ. ಆ ಯುದ್ಧ ಜರುಗಿತು ಅಂದುಕೊಂಡಂತೆ ಮರಣ ಹೊಂದಿದರು ಎಂದು ನೂನಿಜ್ ಹೇಳಿದ್ದಾನೆ(ನಾಗೇಗೌಡ ಎಚ್. ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ಪುಟ ೩೫೬). ಯುದ್ಧವೆಂದರೆ ದೊರೆಯ ಪರಾಕ್ರಮ, ಸೈನಿಕರ ಹೋರಾಟ, ವೀರಮರಣ, ಸ್ವರ್ಗಪ್ರಾಪ್ತಿ, ಗೆಲುವು, ಸೋಲು ಇಷ್ಟನ್ನೇ ಹೇಳುವ ಶಾಸನಗಳು ಯುದ್ಧದ ಪರಿಣಾಮವನ್ನು ಅಪ್ರತ್ಯಕ್ಷವಾಗಿ ಅದು ಸ್ತ್ರೀಯರ ಜೀವನದ ಮೇಲೆ ಉಂಟು ಮಾಡುತ್ತಿದ್ದ ಪರಿಣಾಮವನ್ನು ನಿರ್ಲಕ್ಷಿಸಿತು, ಏಕೆಂದರೆ ಅದು ಮುಖ್ಯವಾಗಿರಲಿಲ್ಲ.

**೫. ೩. ೪. ಧಾರ್ಮಿಕ ಕಾರಣಗಳು**

ಮನುಷ್ಯ ಧರ್ಮದ ಹೊರತಾಗಿ ಜೀವಿಸಲು ಸಾಧ್ಯವಿಲ್ಲ. ಧರ್ಮದೊಂದಿಗೆ ಮನುಷ್ಯನದು ಒಂದು ರೀತಿಯ ಭಾವನಾತ್ಮಕ ಸಂಬಂಧ. ತನಗೆ ಕಾಣದ ಒಂದು ಶಕ್ತಿಯ ಭಯದಿಂದಲೇ ಸದಾ ಬದುಕು ಸಾಗಿಸುತ್ತಿರುವನು. ಪುಣ್ಯ ಸಂಪಾದನೆಯ ಉದ್ದೇಶದಿಂದ ಪಾಪ ಕರ್ಮಗಳ ಭಯಕ್ಕೆ ಜೀವಿಸುವ ಹಕ್ಕಿನ ವಿರುದ್ಧವಾಗಿ ಹಲವಾರು ನೀತಿ ನಿಯಮಗಳನ್ನು ರೂಪಿಸಿ ಆ ನಿಯಮಗಳ ರೂಪುರೇಷೆಯೊಳಗೆ ಸ್ತ್ರೀಯರನ್ನು ಬಂಧಿಸಿ ಸತಿಯಂತಹ ಪದ್ಧತಿಯಲ್ಲಿ ಅವಳನ್ನು ಅಂತ್ಯಗೊಳಿಸಿದ್ದಾನೆ. ಸ್ತ್ರೀಯರು ಸತಿಹೋಗುವುದರಲ್ಲಿ ಧರ್ಮ ಯಾವ ರೀತಿ ಕಾರಣವಾಯಿತು ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

**ಅ) ಸ್ತ್ರೀಯರ ಭಾವನಾತ್ಮಕ ವ್ಯಕ್ತಿತ್ವದ ದುರುಪಯೋಗ**

ಪ್ರತಿಯೊಂದು ವಸ್ತು, ಜೀವಿಗೂ ಅದರದೇ ಆದ ಗುಣಲಕ್ಷಣ ವಿಶೇಷತೆ ಯನ್ನೊಳಗೊಂಡ ರಚನೆ ಇರುತ್ತದೆ. ಸ್ತ್ರೀಗೂ ಕೂಡ ಹಾಗೆ ಸಹಜವಾಗಿಯೇ ಅವಳ ಪ್ರಕೃತಿ ಒಳಗೊಂಡಿರುವುದು ಮೃದುತ್ವ, ಕರುಣೆ, ಅತಿಯಾದ ಭಾವುಕತೆ, ಸಹನೆ, ತಾಳ್ಮೆ, ಕ್ಷಮೆ, ಅರ್ಪಣಾ ಮನೋಭಾವ ಇವೆಲ್ಲವನ್ನೊಳಗೊಂಡು ಅವಳ ವ್ಯಕ್ತಿತ್ವ ರಚನೆಯಾಗಿರುವುದು. ಸ್ತ್ರೀಯರ ಇಂಥ ಭಾವನಾತ್ಮಕ ವ್ಯಕ್ತಿತ್ವವನ್ನೇ ಪುರುಷಸಮಾಜ ದುರುಪಯೋಗ

ಪಡಿಸಿಕೊಂಡಿತೆನ್ನಬಹುದು. ಮುಗ್ಧವಾಗಿ ನಂಬುವ ಅವಳಿಗೆ ಪಾಪ, ಕರ್ಮಗಳ ಭಯಕ್ಕೆ ಧರ್ಮದ ನೀತಿ ನಿಯಮಗಳ ಹೆಸರಿನಲ್ಲಿ ಅವಳನ್ನು ಮಾನಸಿಕವಾಗಿ ಹಿಡಿತದಲ್ಲಿಟ್ಟುಕೊಂಡರು. ಮಹಿಳೆ ಎಲ್ಲವನ್ನೂ ನಂಬುತ್ತಾಳೆ ಎಂಬ ಕಾರಣಕ್ಕೆ ಪತಿಗಾಗಿ ತನ್ನ ಜೀವವನ್ನು ಅರ್ಪಿಸುವಂತಹ ಸತಿಯಂತಹ ಪದ್ಧತಿ, ಜಾರಿಗೆ ತಂದರು. ಉದಾಹರಣೆಗೆ ನಮ್ಮ ಪುರಾಣ ಗ್ರಂಥಗಳಲ್ಲಿ ಮಹಿಳೆಯರು ಈ ರೀತಿ ಸತಿ ಹೋದ ಘಟನೆಗಳು ಹಲವಾರು, ಅವೆಲ್ಲವನ್ನು ಹೇಳುವುದರ ಮೂಲಕ ಅವರು ನಂಬುವಂತೆ ಮಾಡಿದರು. ಆ ಘಟನೆಗಳು ಒಂದು ರೀತಿಯಲ್ಲಿ ಒಳಗೊಳಗೇ ಸ್ತ್ರೀಯರನ್ನು ಅಂತಹ ಕೃತ್ಯಕ್ಕೆ ಮುಂದಾಗುವಂತೆ ಮಾಡುತ್ತವೆ. ತಾವು ಅವರ ಹಾಗೆ ಶಾಶ್ವತವಾಗಿ ಎಲ್ಲರ ನೆನಪಿನಲ್ಲಿ ಉಳಿಯುವಂತಾಗಬೇಕೆಂದು ತನ್ನೊಳಗೆ ತೀರ್ಮಾನಕ್ಕೆ ಬಂದು ಸತಿ ಹೋಗುವುದಕ್ಕೆ ತಿರಸ್ಕರಿಸಲಿಲ್ಲವೆನಿಸುತ್ತದೆ. ಪತಿ ಮರಣ ಹೊಂದಿದ ವಿಷಯ ಕೇಳಿದ ತಕ್ಷಣವೇ ಸತಿಹೋಗಲು ತಯಾರಾಗುತ್ತಿದ್ದರು. ಪಂಪಭಾರತದಲ್ಲಿ 'ಮಾದ್ರಿ, ಪಾಂಡುರಾಜನೊಡನೆ ದಾಹೋತ್ತರ. ಸದ್ಗತಿಗೆ ಪಾಯ್ವಂತೆ ಪಾಯ್ದು ಕಿರ್ಚಿಂಗೆ'(ಪಂಪ; ಪಂಪ ಭಾರತ, ಬಸವರಾಜು ಎಲ್.(ಸಂ); ಪುಟ ೬೮). ಕಾಮದಹನದ ನಂತರ ರತಿ ಶಿವನಲ್ಲಿ ಹೀಗೆ ಮೊರೆಯಿಡುತ್ತಾಳೆ.

ಕೊಂಡವ ತೋಡಿಸಬೇಡ ಶುಷ್ಕವ ಸುಟ್ಟು
ಕೆಂಡವ ಮಾಡಿಸಬೇಡ
ಖಂಡೇಂದು ಶೇಖರ ಕಣ್ಗಿಚ್ಚಿನಿಂದೆನ್ನ
ಗಂಡನ ನರುಹಿದಂತುರುಹು.

(ಕನಕದಾಸ; ಮೋಹನತರಂಗಿಣಿ, ಸಣ್ಣಯ್ಯ ಬಿ.ಎಸ್.(ಸಂ); ಮೋಹನ ತರಂಗಿಣಿ ಸಂಗ್ರಹ. ಪುಟ ೨೭). ಚಿತೆಗೆ ಕೊಂಡ ತೆಗೆಸುವುದರಿಂದ ತಡವಾಗುತ್ತದೆ. ಅಷ್ಟು ಸಮಯ ನಾನು ನನ್ನ ಪತಿಯನ್ನು ಬಿಟ್ಟಿರಲಾರೆ. ವಿಧವೆಯೆಂಬ ಅವಮಾನ ಸಹಿಸಲಾರೆ. ಅದಕ್ಕಾಗಿ ನನ್ನ ಪತಿಯನ್ನು ಉರಿಗಣ್ಣಿನಿಂದ ಸುಟ್ಟಂತೆ ನನ್ನನ್ನು ಸುಟ್ಟುಬಿಡು ಎಂದು ಬೇಡಿಕೊಳ್ಳುತ್ತಾಳೆ. ನಮ್ಮ ಸಾಹಿತ್ಯ, ಧರ್ಮಗ್ರಂಥಗಳು ಕೊಟ್ಟಿದ್ದನ್ನು ನಮ್ಮ ಮಹಿಳೆಯರು ಸ್ವೀಕರಿಸಿದ್ದಾರೆ. ಇವರಂತೆಯೇ ದೇಕಬ್ಬೆಯು ಪತಿಯ ಮರಣದ ಸುದ್ದಿ ಕೇಳಿ ತಡ ಮಾಡದೆ ಕೊಂಡಕ್ಕೆ ನಡೆದಳು ಎಂದು ನಮ್ಮ ಶಾಸನಗಳು ಹೇಳುತ್ತವೆ.

ಕಲಿಚಾಗಿಯನಿಬಿದು ಕೊಂದರೆಂಬುದು ಮಾತಂ
ಲಲಿತಾಂಗಿ ಕೇಳ್ದು ರವಿಗನ
ಕುಲದೀಪಕಿ ಸಾಯಲೆಂದು ಕೊಂಡಕ್ಕೆ ನೆಡೆದಳ್

(E.C. III. ಹೆಗ್ಗಡದೇವನಕೋಟೆ, ೬೦). ಮೇಲಿನ ಪದ್ಯದಲ್ಲಿ ರತಿಯು ಹೇಳುವ ಮಾತಿಗೂ ಶಾಸನದಲ್ಲಿ ದೇಕಬ್ಬೆ ಹೇಳುವ ಮಾತಿಗೂ ಅರ್ಥ ವ್ಯತ್ಯಾಸವೇ ಇಲ್ಲ. ಇಬ್ಬರಲ್ಲೂ ವೈಧವ್ಯವನ್ನು ಕ್ಷಣವೂ ಸಹಿಸಿಕೊಳ್ಳಲಾರರು. ಪತಿಯ ಜೊತೆ ಮರಣ ಹೊಂದಲು ಇಬ್ಬರಿಗೂ

ಅಷ್ಟೇ ಆತುರ ಕಾಣುತ್ತದೆ. ಅವರೆಲ್ಲ ಪುರಾಣಗಳಲ್ಲಿ ಬರುವ ಮಹಿಳೆಯರು. ಆದರೂ ಅವರ ಜೀವನಕ್ಕೂ ಇವರಿಗೂ ಯಾವುದೇ ವ್ಯತ್ಯಾಸವಿಲ್ಲಿ ಕಾಣುವುದಿಲ್ಲ. ಏಕೆಂದರೆ ಪೌರಾಣಿಕ ಮಹಿಳೆಯರನ್ನೇ ಸಾಮಾನ್ಯ ಮಹಿಳೆಯರಿಗೆ ಮಾದರಿಯಾಗಿರಿಸಲಾಗಿತ್ತು. ಸತಿ ಹೋಗಲು ಯಾವುದೇ ಹಿಂಜರಿಕೆ ಇಲ್ಲವೆಂದು ಕಂಡುಬರುತ್ತದೆಯಾದರೂ ಹಿಂದಿನ ಘಟನೆಗಳು ಮುಂದಿನವರಿಗೆ ಯಾವಾಗಲೂ ಸ್ಫೂರ್ತಿದಾಯಕವಾಗಿರುತ್ತವೆ. ಅಂಥ ಸ್ಫೂರ್ತಿಯೇ ಪ್ರೇರಣೆ ಹೊರತು ವೈಚಾರಿಕವಾಗಿ ತೆಗೆದುಕೊಂಡ ನಿರ್ಧಾರವಲ್ಲ. ಸಾವೆಂದರೇ ಸಾಕು ಭಯಪಡುವ, ತಿರಸ್ಕರಿಸುವ ಮನೋಭಾವ ಮಾನವ ಸಹಜಗುಣ. ಅಂತಹ ಸಾವಿಗೆ ಸಂತೋಷದಿಂದಲೇ ಮುನ್ನುಗ್ಗುತ್ತಿದ್ದಳೆಂದರೆ ಸ್ತ್ರೀಯರ ಭಾವನೆಗಳಲ್ಲಿ ಪಿತೃಪ್ರಧಾನ ಸಮಾಜ ತನ್ನ ವಿಚಾರಗಳನ್ನು ಎಷ್ಟರ ಮಟ್ಟಿಗೆ ಬಿತ್ತಿರಬಹುದೆಂದು ತಿಳಿಯಬಹುದು. ಅವಳ ಚಿಂತನೆಯೆಲ್ಲ ಅವರವಾಗಿದ್ದವು.

**ಆ. ಇಹಕ್ಕಿಂತ ಪರಕ್ಕೆ ಪ್ರಾಮುಖ್ಯತೆ**

ಈ ಲೋಕವಲ್ಲದೆ ಇನ್ನೊಂದು ಲೋಕವಿದೆ, ಇಲ್ಲಿ ಹೇಗೆ ಸತಿ ಪತಿಗಳಾಗಿ ಜೊತೆ ಜೊತೆಗೆ ಜೀವಿಸಿರುತ್ತೇವೆಯೋ ಹಾಗೆ ಮರಣದ ನಂತರ ಆ ಲೋಕದಲ್ಲಿಯೂ ಪತಿ ಪತ್ನಿಯ ಜೀವನ ಮುಂದುವರಿಯುತ್ತದೆ. ಏಕೆಂದರೆ ಅವರಿಬ್ಬರ ಸಂಬಂಧ ಏಳು ಜನ್ಮದವರೆಗೂ ಮುಂದುವರಿಯುತ್ತದೆ. ಪತಿ ಮರಣ ಹೊಂದಿದ ಮೇಲೆ ಅವನ ಜೊತೆ ಆತ ಇಷ್ಟಪಡುವ ಆತನ ಸತಿ ಹೋಗಬೇಕು. ಅವಳಲ್ಲದೆ ಅವನ ಪ್ರಿಯವಾದ ವಸ್ತುಗಳೆಲ್ಲವನ್ನು ಕಳಿಸಿಕೊಡಬೇಕು. ಆ ಲೋಕದಲ್ಲಿ ಆತನಿಗೆ ಜೀವಿಸಲು ಅವುಗಳ ಅಗತ್ಯ ಆತನಿಗೆ ಬೀಳಬಹುದು ಎಂಬ ನಂಬಿಕೆ. ಆ ಲೋಕದಲ್ಲಿ ಸ್ವರ್ಗ, ನರಕಗಳೆಂಬ ಎರಡು ವಿಭಾಗಗಳಿವೆ. ಒಳ್ಳೆಯವರು ಸ್ವರ್ಗಕ್ಕೆ, ಕೆಟ್ಟವರು ನರಕಕ್ಕೆ ಹೋಗುವರು. ಪತಿಯೊಂದಿಗೆ ಸತಿ ಹೋದರೆ ಇಬ್ಬರೂ ಸ್ವರ್ಗಕ್ಕೆ ಹೋಗುತ್ತಾರೆ. ಹೇಗಾದರೂ ಸರಿ ಪತಿಯೊಡನೆ ಸತಿ ಹೋಗಲೇಬೇಕು. ಭಾರತ ಸಂಸ್ಕೃತಿ ಉಗಮ ಸ್ಥಳವಾದ ಸಿಂಧೂ ತೀರದ ನಾಗರಿಕತೆಯು ವ್ಯಾಪಿಸಿದ್ದ ಸ್ಥಳದಲ್ಲೂ ಸತಿಪದ್ಧತಿಯ ಕುರುಹನ್ನು ಪತ್ತೆ ಹಚ್ಚಲಾಗಿದೆ. ಲೋಥಾಲ್ ನಗರದ ಸ್ಮಶಾನ ಸ್ಥಳದ ಉತ್ಖನನದಲ್ಲಿ ಲಭ್ಯವಾಗಿರುವ ೧೪ ಅಸ್ತಿಪಂಜರಗಳಲ್ಲಿ ಆರು ಜೋಡಿ ಶವಗಳಿವೆ. ಬಹುಶಃ ಅವು ಆರು ಸತಿಜೊಡಿಗಳೆ(ಹರಿಲಾಲ ಪವಾರ; ಬೆಂಕಿಯಲ್ಲಿ ಕಮರಿದ ಹೂ 'ಹೊನಾಸತಿ,' ಪುಟ ೬). ಸಿಂಧೂ ತೀರದ ನಾಗರಿಕತೆ ಕಾಲ ಕಿ.ಪೂ. ಸುಮಾರು ೪,೫೦೦ ವರ್ಷ ಪ್ರಾಚೀನ. ಆದರೆ ಇದು ಸಮರ್ಥಿಸಿಕೊಳ್ಳುವಷ್ಟು ಮಹತ್ವದ ಆಧಾರವೆನಿಸುವುದಿಲ್ಲ. ಆ ಕಾಲಘಟ್ಟದಲ್ಲಿ ಮಾತೃಪ್ರಧಾನ ವ್ಯವಸ್ಥೆ ಇನ್ನೂ ಭದ್ರವಾದ ಅಸ್ತಿತ್ವವನ್ನು ಹೊಂದಿತ್ತು. ಇದು ಕೇವಲ ಭಾರತಕ್ಕೆ ಮಾತ್ರ ಸಂಬಂಧಿಸಿದ ಪದ್ಧತಿಯಲ್ಲ. ಪ್ರಪಂಚದ ಎಲ್ಲ ಸಮುದಾಯಗಳಲ್ಲೂ ಈ ಪರಲೋಕದ ಕಲ್ಪನೆ ಇದೆ. ಹಾಗೆಯೇ ಹಲವಾರು ಸಮುದಾಯಗಳಲ್ಲಿ ಈ ಸತಿಪದ್ಧತಿ ಬದಲಿ ರೂಪದಲ್ಲಿ ಜಾರಿಯಲ್ಲಿತ್ತು. ಪ್ರಾಚೀನ ಈಜಿಪ್ಟ್, ಚೀನಾ, ಜಪಾನ್, ಕೊರಿಯಾ, ಮೆಸ್ಸೆನಿಯಾ ಜನಾಂಗದಲ್ಲೂ

ಸತಿಪದ್ಧತಿ ಇತ್ತು(ಹರಿಲಾಲ ಪವಾರ; ಬೆಂಕಿಯಲ್ಲಿ ಕಮರಿದ ಹೂವು, 'ಹೊನಾಸತಿ', ಪುಟ ೯).

ಬ್ರಿಟಿಷ್ ಮಾನವಶಾಸ್ತ್ರಜ್ಞ ಇ.ಎಸ್.ಹಾರ್ಟ್‌ಲ್ಯಾಂಡ್ ಅವರು ಕೆಲವು ಆದಿವಾಸಿ ಗುಂಪುಗಳ ಸತಿ ಆಚರಣೆ ಕುರಿತು ಹೇಳುತ್ತಾರೆ. "ಒಂದು ಗಂಡು ಮದುವೆ ಆಗದೆ ಸತ್ತರೆ ಕೂಡಲೇ ಒಂದು ಕನ್ಯೆಯನ್ನು ತಂದು ಅವಳು ಸತ್ತವನ ಪರಲೋಕದ ಹೆಂಡತಿಯೆಂದು ತಿಳಿದು ಬಲಿ ಕೊಡಲಾಗುತ್ತಿತ್ತು(ಹರಿಲಾಲ ಪವಾರ; ಬೆಂಕಿಯಲ್ಲಿ ಕಮರಿದ ಹೂವು, ಹೊನಾಸತಿ, ಪುಟ ೯). ಕೆಲವೊಂದು ಸಂಪ್ರದಾಯಗಳು ಪ್ರಪಂಚದಾದ್ಯಂತ ಏಕಕಾಲದಲ್ಲಿ ಜಾರಿಯಲ್ಲಿರುತ್ತವೆ. ಧರ್ಮಶಾಸ್ತ್ರ ಗ್ರಂಥವೆಂದು ಸ್ವೀಕರಿಸಿರುವ ಮನುಸ್ಮೃತಿಯಲ್ಲೂ ಹೀಗೆ ಹೇಳಲಾಗಿದೆ.

ನ ದತ್ತ್ವಾ ಕಸ್ಯಚಿತ್ ಕನ್ಯಾಂ ಪುನರ್ದದ್ಯಾದ್ವಿಚಕ್ಷಣಃ
ದತ್ತ್ವಾ ಪುನಃ ಪ್ರಯಚಛನ್ಹಿ ಪ್ರಾಪ್ನೋತಿ ಪುರುಷಾ ನೃತಂ

'ವಾಗ್ದಾನ ಮಾಡಿದ ನಂತರ ನಿಶ್ಚಿತಾರ್ಥವಾದ ಮೇಲೆ ಆ ಭಾವೀ ಪತಿಯು ಮೃತನಾದರೆ ಆ ಕನ್ಯೆಯನ್ನು ಮತ್ತೊಬ್ಬ ವರನಿಗೆ ಕನ್ಯಾದಾನ ಮಾಡಕೂಡದು'(ಶೇಷ ನವರತ್ನ(ಅನು); ಮನುಸ್ಮೃತಿ, ೭೧ ಅಧ್ಯಾಯ-೯, ಪುಟ ೩೯೫). ಗಂಡು ಹೆಣ್ಣಿನ ಮದುವೆ ನಿಶ್ಚಯವಾದರೆ ಸಾಕು, ಅವರು ಪತಿಪತ್ನಿಯರಾದಂತೆ ಎನ್ನುವ ನಂಬಿಕೆ ಇದೆ. ವಿವಾಹ ಜರುಗಿ ಪತಿ ಪತ್ನಿಯರ ಮಧ್ಯೆ ಸಂಬಂಧ ಗಟ್ಟಿಗೊಳ್ಳುವುದಕ್ಕಿಂತ, ವಿವಾಹ ಕುರಿತು ಮಾತು ಗಟ್ಟಿಗೊಳ್ಳುವಿಕೆಯಾದರೆ ಸಾಕಾಗಿತ್ತು. ಸ್ತ್ರೀಯರಿಗಾಗಿ ಮಾಡಿದ ಇಂಥ ವಿಚಾರಗಳು ಎಷ್ಟೊಂದು ವಿಚಿತ್ರವೆನಿಸುತ್ತವೆ.

ಕವಿ ರನ್ನನು ಗುಂಡಮಬ್ಬೆ ಪತಿ ನಾಗದೇವನೊಂದಿಗೆ ಗೀರ್ವಾಣಲೋಕಕ್ಕೆ ಹೋದರೆಂದು ಹೇಳುತ್ತಾನೆ. "ಪತಿವ್ರತೆ ಗುಂಡಮಬ್ಬೆ ಸೌಂದರ ಸುಭಟ್ಟಂಗೆ ಸಗ್ಗದೊಳಮಿಲ್ಲಿ ಮನಃಪ್ರಿಯೆಯಾದಳೆಂದು ಮಚ್ಚರಿಸುವರಿಂದ್ರ ಸೌಂದರಿಯರೇಂ ಸೊಬಗೋ ಸುಭಟ್ಟತ್ರಿಣೇತ್ರನಾ ಅಂತಿರ್ವರುಂ ಗೀರ್ವಾಣಲೋಕದೊಳೆ ದಂಪತಿಗಳಾಗಿ"(ರನ್ನ; ಅಜಿತ ತೀರ್ಥಂಕರ ಪುರಾಣ ಚರಿತೆ, ಹಂಪ ನಾಗರಾಜಯ್ಯ(ಸಂ); ರನ್ನಸಂಪುಟ, ಪುಟ ೧೧). ಇಲ್ಲಿ ಎಷ್ಟೊಂದು ನಿರ್ಧಾರಾತ್ಮಕವಾಗಿ ಹೇಳಲಾಗಿದೆ. ಅವರಿಬ್ಬರೂ ಗೀರ್ವಾಣ ಲೋಕದಲ್ಲಿ ದಂಪತಿಗಳಾಗಿಯೇ ಉಳಿದರು. ಆದರೆ ಆ ಲೋಕವನ್ನು ಕಂಡವರಾರೋ, ಆದರೆ ಸತ್ತಮೇಲೆ ಎಲ್ಲರೂ ಮತ್ತೊಂದು ಲೋಕಕ್ಕೆ ಹೋಗುತ್ತಾರೆ ಎಂದು ಒಂದು ಕಲ್ಪನಾ ಲೋಕ ಎಲ್ಲರ ಮನಸ್ಸಿನಲ್ಲಿ ಬೇರೂರಿರುವುದಂತೂ ಸತ್ಯ. ಇಲ್ಲದ ವಿಷಯವನ್ನು ಮತ್ತೆ ಮತ್ತೆ ಇದೆ. ಇದೆ ಎಂದು ಹೇಳಿದಾಗ ನಿಜವಾಗಿಯೂ ಇದೆ ಎಂದು ನಂಬುವುದು ಮನುಷ್ಯನ ಸಹಜ ಗುಣ. ಹಾಗೆಯೇ ಈ ಸ್ವರ್ಗ-ನರಕ, ಪರಲೋಕದ ಕಲ್ಪನೆ ಎನ್ನಬಹುದು. ಇಲ್ಲದ್ದನ್ನು ನಂಬಿಸಿದ ಬಗೆ ಹೀಗಿದೆ. ಯುದ್ಧದಲ್ಲಿ ಮಡಿದ ವೀರರ ಬಗ್ಗೆ ಉಲ್ಲೇಖಿಸಿದಾಗ ಸ್ವರ್ಗಸ್ಥರಾದರು, ಪರಲೋಕಕ್ಕೆ ಹೋದರು

ಎಂದೇ ಉಲ್ಲೇಖವಿದೆ. ಜೇಡನಾಯಕನ ಮಗ ಕರಿಯನಾಯಕನು ತುರುಹುಯಿಲಿನಲ್ಲಿ ಕಾದು ಸ್ವರ್ಗಸ್ಥನಾದ(E.C. XV, ಹೊಸನಗರ, ೬೫). ಕೆಳದಿಯ ಕರಿಯ ತಮ್ಮನಗೌಡನು ಸ್ವರ್ಗಸ್ಥನಾದಲ್ಲಿ ಆತನ ಹೆಂಡತಿ ರಾಮಕ್ಕ ಮಹಾಸತಿಯಾದಳು ಇದರಿಂದ ಆಕೆ ಸ್ವರ್ಗಸ್ಥಳಾದಳು. (E.C. XV, ಶಿವಮೊಗ್ಗ, ೭೧). ರಾಜಯಬ್ಬೆ ಹೆಗ್ಗಡತಿ ಕೋಳೂರೊಳ್ ಸುರಲೋಕ ಪ್ರಾಪ್ತಳಾದಳ್(E.C. XV, ಸಾಗರ, ೮೩). ಹುತ್ತ ಶಾಸನದಲ್ಲಿ ವೀರನೊಬ್ಬ ಸೂರ್ಯಲೋಕ ಪ್ರಾಪ್ತನಾದ ಸಂದರ್ಭದಲ್ಲಿ ಆತನ ಹೆಂಡತಿ ದೇವಿಯಕ್ಕ 'ಪುರುಷವ್ರತ ಕೈಕೊಣ್ಡು' ಮರಣ ಹೊಂದಿದಳ್(E.C. XIII, ಭದ್ರಾವತಿ, ೩೮). ಈ ಶಾಸನದಲ್ಲಿ ಸೂರ್ಯಲೋಕ ಎಂಬ ಪದವನ್ನು ಬಳಕೆ ಮಾಡಲಾಗಿದೆ. ಸ್ವರ್ಗಕ್ಕೆ ಸಮಾನವಾಗಿ ಸೂರ್ಯಲೋಕ ಬಳಕೆಮಾಡಲಾಗಿದೆ.

ಯುದ್ಧಭೂಮಿಯಲ್ಲಿ ಮರಣ ಹೊಂದಿದ ತನ್ನ ಪತಿಯನ್ನು ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಾರೆ. ಅಲ್ಲಿ ಅವರು ಆತನನ್ನು ವಶಮಾಡಿಕೊಳ್ಳುವುದಕ್ಕಿಂತ ಮೊದಲು ನಾವು ನಮ್ಮ ಪತಿಯನ್ನು ಸೇರಬೇಕು ಎಂದು ಚಿತೆ ಏರುತ್ತಿದ್ದರು. ಶಾಸನಗಳಲ್ಲಿ ನಮ್ಮ ಕಣ್ಣಮುಂದೆ ವೀರನನ್ನು ಅಪ್ಸರೆಯರು ಕರೆದೊಯ್ಯುತ್ತಿರುವರೇನೋ ಎಂಬಂತೆ ವರ್ಣಿಸಲಾಗಿದೆ. ಕಲಕೇರಿ ಸ್ಮಾರಕದಲ್ಲಿ ವಾದಿಸೆಟ್ಟಿ ಮರಣ ಹೊಂದಿದಾಗ 'ಸುರದುಂದುಭಿಯೆಸಿಯಲುಕೆ ದೇವಕನ್ನೆಯರೊಯ್ದರ್' (SII. XX, 124,). ಇದೇ ಶಾಸನದ ಮತ್ತೊಂದು ಭಾಗದಲ್ಲಿ ಸೆಟ್ಟಿನಾಯಕ ವೀರ ಮರಣ ಹೊಂದಿದಾಗ 'ಸುರಕಾನ್ತೆಯರೊಡನರ್ತ್ಥಯೆ ನೆರೆಯರೆನಿಸಿಸುತನುಂ ಸಿರಿತೋರಣದಿಂದೆ ದೇವಲೋಕ....ದರು' ಎಂದು ವರ್ಣಿಸಲಾಗಿದೆ. ಬೊಪ್ಪಣ್ಣ ವೀರಮರಣ ಹೊಂದಿದಾಗ 'ಸುರವನಿತೆಯರೊಳು ಹೋದನು'(SII. XX, 125). ಕ್ರಿ.ಶ. ೧೧೮೩ರ ಅಹವಮಲ್ಲನ ಆಳ್ವಿಕೆ ಅವಧಿಯಲ್ಲಿ ಬಮ್ಮಗನು ಮರಣ ಹೊಂದಿದಾಗ ಸ್ವರ್ಗಕ್ಕೆ ಹೋದದ್ದನ್ನು ಹೀಗೆ ವರ್ಣಿಸಲಾಗಿದೆ. 'ಸಾವಿಗೆಯರಾವುತತಲೆಯಂ ಸ....ತೋರಣಗಟ್ಟುತಂ ಚೆಲ್ವ ಸುರಲೋಕಮೆಯ್ದಿದಂ ಬಮ್ಮಿ ಭೂಲೋಕದೊಳಿಂ ತಮ್ಮಿ ಪರಲೋಕವೆಯ್ದು ಬರ್ಮ[ನ]'(SII. XX, 169).

ಕಣ್ಣಿಗೆ ಕಾಣುವ ಸತ್ಯಕ್ಕಿಂತ ಕಾಣದ ಮಿಥ್ಯಲೋಕಕ್ಕೆ ಹೆಚ್ಚು ಪ್ರಾಧಾನತೆ ಕೊಟ್ಟರು. ಕಣ್ಣ ಮುಂದಿರುವ ಜೀವನಕ್ಕಿಂತ ಎಲ್ಲೋ ಇಲ್ಲದ, ಕಾದಿರುವ ಲೋಕಕ್ಕೆ ಕೈ ಚಾಚಿದರು. ಭೂಮಿಯ ಮೇಲಿನ ಜೀವನವನ್ನೇ ಅಂತ್ಯಗೊಳಿಸಿದರು. ನಾವೆಲ್ಲರೂ ಹೋಗಿ ಸೇರುವ ಲೋಕ ಅದುವೆ ಎಂಬ ನಂಬಿಕೆ ಹುಟ್ಟಿಸಿದರು. ಧರ್ಮ ಬೆಳಕಿನತ್ತ ಕೊಂಡೊಯ್ಯುವ ಬದಲು ಕಾಣದ ಕತ್ತಲೆಗೆ ನೂಕಿತು. ಸ್ತ್ರೀಯರಲ್ಲಿ ಇಂಥ ನಂಬಿಕೆಗಳನ್ನು ಹುಟ್ಟುಹಾಕಿ ಅವರ ಜೀವಿಸುವ ಹಕ್ಕನ್ನೇ ಕಿತ್ತುಕೊಂಡರು. ಭೂಮಿಯ ಮೇಲೆ ಹುಟ್ಟಿದ ಸಣ್ಣ ಜೀವಿಗೂ ಬದುಕುವ ಹಕ್ಕಿದೆ. ಹೀಗಿರುವಾಗ ಮನುಕುಲದ ಅಸ್ತಿತ್ವಕ್ಕೆ ಕಾರಣವಾದ ಹೆಣ್ಣಿಗೆ ಇಲ್ಲದೇ ಹೋದದ್ದು ವಿಷಾದವೆನಿಸುತ್ತದೆ.

ಸತಿ ಹೋಗುವವರು ತಮಗೆ ಸೇರಿದ ಸಂಪತ್ತಿಗೆ ವಾರಸುದಾರರಿಲ್ಲದೆ ಹೋದಾಗ ತಮಗೆ ಬೇಕಾದವರಿಗೆ ದಾನ ಮಾಡುತ್ತಿದ್ದರು. ಮೇಲ್ವರ್ಗದ ಮಹಿಳೆಯರು ಹೀಗೆ ಮಾಡುತ್ತಿದ್ದರು. ದೇಕಬ್ಬೆ ಆರ್ಥಿಕವಾಗಿ ಉತ್ತಮವಾದ ಕುಟುಂಬಕ್ಕೆ ಸೇರಿದವಳು. ತಂದೆ ನುಗುನಾಡಿನ ಅಧಿಪತಿ ರವಿಗ. ಗಂಡ ನವಿಲೆನಾಡಿನ ಅಧಿಪತಿ ಏಚ. ಅಂದ ಮೇಲೆ ಸಾಕಷ್ಟು ಆಸ್ತಿ ಸಂಪತ್ತನ್ನು ಹೊಂದಿರಲೇಬೇಕು. ಮಹಾದೇವನಿಗೆ ಹೂದೋಟ, ತೋಟ, ಭೂಮಿಯನ್ನು ಹಾಗು ಆಕೆ ಕಟ್ಟಿಸಿದ ಮಲ್ಲಕೆರೆಯ ದಕ್ಷಿಣಕ್ಕಿರುವ ಐದು ಕೊಳಗ ಗದ್ದೆ ದಾನ ನೀಡಿದಳು(E.C. III, ಹೆಗ್ಗಡದೇವನಕೋಟೆ, ೬೦). ಈ ರೀತಿ ಸತಿಹೋಗುವಾಗ ದೇವರಿಗೆ ತಮ್ಮ ಆಸ್ತಿಯನ್ನು ದಾನ ನೀಡಿರುವರು. ಆದರೆ ಈ ಬಗ್ಗೆ ಶಾಸನಗಳ ವಿವರ ದೊರೆಯುವುದಿಲ್ಲ. ಇಂತಹ ಅದೆಷ್ಟು ಆಸ್ತಿ ದೇವಸ್ಥಾನಗಳಿಗೆ ಹೋಗುತ್ತಿತ್ತೋ ದಾಖಲೆಯಿಲ್ಲ. ಆದರೆ ಆಸ್ತಿಗೆ ವಾರಸುದಾರರಿಲ್ಲವೆಂದಾಗ ಸಹಜವಾಗಿಯೇ ದಾನ ಧರ್ಮದ ಹೆಸರಿನಲ್ಲಿ ದೇವಾಲಯಗಳಿಗೆ ಕೊಡುವುದನ್ನು ನಾವು ನೋಡಿದ್ದೇವೆ. ಸಹಗಮನ ಮಾಡುವುದರಿಂದ ಸಂಪತ್ತು ದೊರೆಯುತ್ತದೆ ಎಂದರೆ ಮತ್ತಷ್ಟು ಪುಷ್ಟಿ ದೊರೆಯುತ್ತದೆ.

ಸಹಗಮನ ಮಾಡಿದ ಹಲವಾರು ಶಾಸನಗಳು ದೊರೆತಿವೆ. ಈ ಅಧ್ಯಯನದಲ್ಲಿ ಅನೇಕ ಸತಿ ಸ್ಮಾರಕಗಳನ್ನು ಉಲ್ಲೇಖಿಸಲಾಗಿದೆ. ಅಲ್ಲದೆ ದೇಕಬ್ಬೆ ಸತಿಹೋದ ವಿವರಣೆಯನ್ನೊಳಗೊಂಡ ಶಾಸನವನ್ನು ಅಧ್ಯಯನ ಮಾಡಲಾಗಿದೆ. ಆದರೆ ಎಲ್ಲಾ ಸ್ತ್ರೀಯರಿಗೆ ಸತಿ ಹೋಗಲು ಒತ್ತಾಯವಿರಲಿಲ್ಲ. ಅವರು ಸಾವನ್ನು ಅತ್ಯಂತ ಸಂತಸದಿಂದ ಬರಮಾಡಿಕೊಳ್ಳುವ ರೀತಿಯನ್ನು ನಾವು ವಿದೇಶಿ ಸಾಹಿತ್ಯದಿಂದ ತಿಳಿದುಕೊಂಡಾಗ ಅವರಿಗೆ ಸತಿಹೋಗಲು ಯಾವುದೇ ಒತ್ತಡವಿರಲಿಲ್ಲವೆನಿಸುತ್ತದೆ. ಆದರೆ ನಮಗೆ ಒಂದೇ ಒಂದು ಸತಿಹೋಗಲು ವಿರೋಧ ವ್ಯಕ್ತಪಡಿಸಿದ ಉಲ್ಲೇಖ ದೊರೆತರೂ ಅದರ ಹಿಂದಿರುವ ಒತ್ತಡಗಳನ್ನು ತಿಳಿದುಕೊಳ್ಳಲು ಸಹಾಯವಾಗುತ್ತದೆ. ಆ ನಿಟ್ಟಿನಲ್ಲಿ ನಮಗೆ ದೊರೆತ ಒಂದು ಆಧಾರ ಯಾದವರ ರಾಮಚಂದ್ರನ ಪತ್ನಿಯಾದ ಕಾಮಾಯೀ ಕುರಿತು ದೊರೆತ ಮಾಹಿತಿ. ಕಾಮಾಯಿ ಸಹಗಮನ ಮಾಡಲು ಇಷ್ಟಪಡಲಿಲ್ಲ. ಆದರೆ ಮಿಕ್ಕ ಎಲ್ಲ ರಾಣಿಯರು ಸಹಗಮನ ಮಾಡಿದರು. ಇದರಿಂದ ಪ್ರಜೆಗಳು ಮತ್ತು ಆಕೆಯ ಮಗನಾದ ಸಿಂಘಣನು ಕೋಪಗೊಂಡರು. ಕಾಮಾಯಿಯ ತಂದೆ ಆಕೆ ಸಹಗಮನ ಮಾಡಬೇಕೆಂದೂ ಇಲ್ಲವಾದರೆ ಅವರ ವಂಶವೆಲ್ಲವೂ ಕಳಂಕಯುಕ್ತವಾಗುವುದೆಂದೂ ಬುದ್ಧಿವಾದ ಹೇಳಿದನು. ಕೊನೆಗೆ ಕಾಮಾಯಿ ತನ್ನ ಮಗನನ್ನೇ ಪ್ರಾಣಭಿಕ್ಷೆ ಕೇಳಿದಳೆಂದೂ, ಸಿಂಘಣನು ಅದಕ್ಕೆ ಒಪ್ಪಿದನೆಂದೂ ಮಾಹಿತಿ ಇದೆ (ನರಸಿಂಹಮೂರ್ತಿ ಎ. ವಿ.; ಕರ್ನಾಟಕದ ಸೇವುಣರ ಇತಿಹಾಸ, ಪುಟ ೧೧೫).

ಈ ಮೇಲೆ ಉಲ್ಲೇಖಿಸಿದ ಮಾಹಿತಿಯನ್ನು ಅಧ್ಯಯನ ಮಾಡಿದಾಗ ಆ ಕಾಲದಲ್ಲಿ ಸ್ತ್ರೀಯರು ಅನಿವಾರ್ಯವಾಗಿ ಸಾವನ್ನು ಬರಮಾಡಿಕೊಳ್ಳಬೇಕಿತ್ತು. ಇಲ್ಲವೆಂದರೆ ಅವರಿಗೆ

ಜೀವನವೇ ಇರಲಿಲ್ಲವೆನಿಸುತ್ತದೆ. ಕಾಮಾಯಿ ಸತಿ ಹೋಗಲು ಇಷ್ಟವಿಲ್ಲವೆಂದಾಗ ಸ್ವತಃ ಅವಳ ತಂದೆ, ಮಗ ಮತ್ತು ಪ್ರಜೆಗಳು ಅಂದರೆ ಸಮಾಜ ಒಪ್ಪುವುದಿಲ್ಲ. ಅಂದರೆ ಸತಿ ಹೋಗಲು ಸ್ತ್ರೀಯರಿಗೆ ಸಮಾಜದಿಂದ ಒತ್ತಡ ಹೇಗಿರುತ್ತದೆಂದರೆ ಅವಳಿಗೆ ಯಾರೂ ಗೌರವವನ್ನು ಕೊಡುವುದಿಲ್ಲ. ಅವಳನ್ನು ಹೀನಾಯವಾಗಿ ಕಾಣುತ್ತಾರೆ. ಆಕೆ ಸಮಾಜಕ್ಕೆ ಹೆದರಿ ಸತಿ ಹೋಗಬೇಕಿತ್ತು. ಸಾಮಾಜಿಕ ನಿಯಮಗಳು ಅವಳ ಮೇಲೆ ಪರೋಕ್ಷವಾಗಿ ಒತ್ತಡವನ್ನು ಹಾಕುತ್ತಿದ್ದವು. ಇಡೀ ಕುಟುಂಬಕ್ಕೆ ಸಮಾಜದಲ್ಲಿ ಮನ್ನಣೆ ಸಿಗುವುದಿಲ್ಲವೆಂದು ಕುಟುಂಬದ ಸದಸ್ಯರು ಅವಳಿಗೆ ಒತ್ತಡ ತರುತ್ತಿದ್ದರು. ದೇಕಬ್ಬೆ ಶಾಸನದಲ್ಲಿ ದೇಕಬ್ಬೆ ತಂದೆ ಅವಳಿಗೆ ಪರಿಪರಿಯಾಗಿ ಸತಿಹೋಗದಂತೆ ಬೇಡಿಕೊಳ್ಳುವುದು ಮೇಲ್ನೋಟಕ್ಕೆ ಎನಿಸುತ್ತದೆ. ದೇಕಬ್ಬೆ ಖಂಡಿತವಾಗಿ ಸಹಗಮನ ಮಾಡುತ್ತಿದ್ದಳು. ಆದರೂ ಅವಳಿಗೆ ಬೇಡವೆಂದು ಹೇಳುವುದು ಮಗಳ ಮೇಲಿನ ಕನಿಕರ ಅಷ್ಟೆ. ಆದರೆ ಸಮಾಜ ಎದುರಿಸಲು ಸಾಧ್ಯವಿಲ್ಲವೆಂದಾಗ ಆ ಕನಿಕರ ಪಕ್ಕಕ್ಕೆ ಸರಿಯುತ್ತದೆ. ಯೌವನದಲ್ಲಿರುವ ಅದೂ ಪತಿ ಮರಣ ಹೊಂದಿದ ವಿಧವೆ ಮಗಳನ್ನು ತಮ್ಮ ಜೊತೆಯಲ್ಲೇ ಇರಿಸಿಕೊಂಡು ಸಮಾಜದಲ್ಲಿ ಜೀವನ ಮಾಡಲು ಸಾಧ್ಯವಿಲ್ಲದ ಕಾರಣಕ್ಕೆ ಅನಿವಾರ್ಯವಾಗಿ ಸತಿ ಹೋಗುವುದನ್ನು ತಡೆಯದೆ ತಟಸ್ಥವಾಗಿರುತ್ತಿದ್ದರು.

ಸತಿಪದ್ಧತಿಗೆ ಹಲವಾರು ಕಾರಣಗಳನ್ನು ನಾವು ನೋಡಿದಾಗ ಸತಿ ಹೋಗುವ ವಿಷಯದಲ್ಲಿ ಹೆಣ್ಣಿಗೆ ಅವಳದಲ್ಲದ ವಿಚಾರಗಳು ಕೆಲಸ ಮಾಡಿವೆ. ಶಾಸನಗಳನ್ನು, ವಿದೇಶಿ ಸಾಹಿತ್ಯವನ್ನು ನೋಡಿದಾಗ ಅದು ಒತ್ತಾಯದ ಮೂಲಕ ನಡೆಯುತ್ತಿತ್ತು ಎಂದೆನಿಸುವುದಿಲ್ಲ. ಪ್ರತ್ಯಕ್ಷವಾಗಿ ಯಾವುದೇ ಒತ್ತಾಯವಿರುತ್ತಿರಲಿಲ್ಲ. ಆದರೆ ಪರೋಕ್ಷವಾಗಿ ಹಲವಾರು ಒತ್ತಡಗಳು ಇದ್ದವೆಂಬುದು ನಮಗೆ ತಿಳಿಯದೇ ಇರದು. ಶಾತವಾಹನ ಕಾಲಘಟ್ಟದಲ್ಲಿ ಒಂದೂ ಸತಿ ಘಟನೆಗಳು ನಮಗೆ ದೊರೆತಿಲ್ಲ. ಆ ಕಾಲದ ಇತಿಹಾಸವನ್ನು ಅಧ್ಯಯನ ಮಾಡಲು ಹಲವಾರು ಶಾಸನಶಿಲ್ಪಗಳು ನಮಗೆ ದೊರೆಯುತ್ತವೆ. ಅಲ್ಲಿ ದೊರೆತ ಶಾಸನಶಿಲ್ಪಗಳು ಸಾಮಾನ್ಯವಾದ ಸಾಮಾಜಿಕ ವಿಷಯವನ್ನು ಒಳಗೊಂಡಿವೆ. ಮೇಲ್ವರ್ಗದವರ ಜೀವನಶೈಲಿಯನ್ನು ಉಲ್ಲೇಖಿಸುವಂತಹ ಶಿಲ್ಪಗಳನ್ನು ದೊರೆತಿವೆ. ಒಂದು ವೇಳೆ ಸತಿ ಪದ್ಧತಿ ಇದ್ದದ್ದೇ ಆಗಿದ್ದರೆ ದಾಖಲಿಸದೇ ಇರುತ್ತಿರಲಿಲ್ಲ. ಶಾತವಾಹನರ ಕಾಲದಲ್ಲಿ ಮಾತೃ ನೆಲೆಯ ಅಂಶಗಳು ಇನ್ನೂ ಜಾರಿಯಿದ್ದನ್ನು ನೋಡಿದರೆ ಸತಿಯಂತಹ ಪದ್ಧತಿಗಳು ಜಾರಿ ಬಂದಿರಲಿಕ್ಕಿಲ್ಲವೆನ್ನಬಹುದು. ಕದಂಬರ ಕಾಲದಲ್ಲಿ ರವಿವರ್ಮನ ರಾಣಿ ಸತಿ ಹೋದಳೆಂದು ಅಸ್ಪಷ್ಟ ಮಾಹಿತಿ ನಮಗೆ ದೊರೆತರೂ ಅದೊಂದು ದಾಖಲೆ ಹೊರತುಪಡಿಸಿ ನಮಗೆ ಬೇರೆ ಯಾವ ಸತಿ ಸ್ಮಾರಕಗಳು ದೊರೆತಿಲ್ಲದ ಕಾರಣಕ್ಕೆ ಕದಂಬ ಮತ್ತು ಬಾದಾಮಿ ಚಾಲುಕ್ಯರ ಕಾಲದಲ್ಲಿ ಸತಿಪದ್ಧತಿ ಬಗ್ಗೆ ಸ್ಪಷ್ಟ ನಿಲುವು ತಳೆಯುವುದು ಸಾಧ್ಯವಿಲ್ಲ.

೯ನೇ ಶತಮಾನಕ್ಕೆ ಮತ್ತೆ ನಮಗೆ ಸತಿಹೋದವರ ಮಾಹಿತಿ ದೊರೆಯುತ್ತವೆ. ಅಂದರೆ ಆ ೩೦೦ ವರ್ಷಗಳ ಮಧ್ಯಂತರ ಅವಧಿಯಲ್ಲಿ ಸತಿಯರು ಸಹಗಮನ ಮಾಡಿಲ್ಲವೆಂದು

ಹೇಳುವಂತಿಲ್ಲ. ಯಾವುದೇ ಪದ್ಧತಿ ಒಮ್ಮೆಲೇ ಸೃಷ್ಟಿಯಾಗುವಂತಹದಲ್ಲ ಅದು ನಿಧಾನವಾಗಿ ಸ್ವರೂಪವನ್ನು ಪಡೆಯುತ್ತಾ ಹೋಗುತ್ತದೆ. ಹಾಗೆ ಈ ಅವಧಿಯಲ್ಲಿ ವಿರಳವಾಗಿ ಎಲ್ಲೋ ಒಂದರಂತೆ ಸತಿಹೋದವರು ಇರಬಹುದು. ಆದರೆ ಅವು ನಮಗೆ ದೊರೆತಿಲ್ಲ. ದೊರೆತರೆ ಒಂದು ಹೊಸ ತಿರುವನ್ನು ಪಡೆದುಕೊಳ್ಳಬಹುದು. ಹತ್ತನೇ ಶತಮಾನದ ಕಾಲಾವಧಿಯಿಂದ ಸತಿಹೋಗುವವರ ಸಂಖ್ಯೆಯಲ್ಲಿ ಏರಿಕೆಯಾಗುತ್ತಲೇ ಹೋಯಿತು. ಹನ್ನೊಂದನೇ ಶತಮಾನದ ಶರಣರ ಕಾಲಾವಧಿಯಲ್ಲಿ ಅವರ ಪ್ರಭಾವವಿರುವ ನೆಲೆವೀಡುಗಳಲ್ಲಿ ಸತಿಹೋದವರು ದೊರೆಯುವುದಿಲ್ಲ. ಅದಕ್ಕೆ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಯ ಪ್ರಭಾವದ ಪರಿಣಾಮವೆನ್ನಬಹುದು. ಶರಣರು ಗೊಡ್ಡು ಸಂಪ್ರದಾಯಗಳನ್ನು ಖಂಡಿಸಿದರು. ಅವರ ನಂತರ ಹೊಯ್ಸಳ ಮತ್ತು ವಿಜಯನಗರ ಸಾಮ್ರಾಜ್ಯದ ಆಳ್ವಿಕೆ ಕಾಲಕ್ಕೆ ಶೈವ ಪರಂಪರೆಯನ್ನು ಹಿಂದೆ ತಳ್ಳಿ ವೈಷ್ಣವ ಪರಂಪರೆ ಪ್ರಚಲಿತಕ್ಕೆ ಬಂದಿತು. ಅದು ಸಾಮಾಜಿಕ ಸುಧಾರಣೆ ಕಡೆ ಗಮನ ಕೊಡಲಿಲ್ಲ. ವೈಷ್ಣವರಲ್ಲಿ ಶೈವರಂತೆ ಸಾಮೂಹಿಕ ಒಗ್ಗಟ್ಟು ಕಂಡುಬರುವುದಿಲ್ಲ. ಧರ್ಮದಲ್ಲಿ ವೈಯಕ್ತಿಕ ಹಿತಾಸಕ್ತಿಗಳೇ ಮುಖ್ಯವೆನಿಸಿದವು. ಹಾಗಾಗಿ ಅಲ್ಲಿ ಯಾವುದೇ ಸಾಮಾಜಿಕ ಸುಧಾರಕರು ಉದಯವಾಗಲಿಲ್ಲ ಹಾಗೂ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆ ಆಗಲಿಲ್ಲ. ಇಂಥ ಕಾಲಾವಧಿಯಲ್ಲಿ ಅರ್ಥವಿಲ್ಲದ ಸತಿಯಂತಹ ಪದ್ಧತಿಗಳಿಗೆ ಕಡಿವಾಣವೇ ಇಲ್ಲದಂತಾಗಿ ಅದು ಮಿತಿ ಮೀರಿ ಆಚರಣೆಯಲ್ಲಿ ಬಂತು. ವಿದೇಶಿ ಸಾಹಿತ್ಯದ ಪ್ರಕಾರ ಒಬ್ಬ ರಾಜ ಸತ್ತರೆ ನೂರಾರು ರಾಣಿಯರು ಆಳವಾದ ತಗ್ಗನ್ನು ತೆಗೆದು ಅದರಲ್ಲಿ ಬೆಂಕಿಯನ್ನು ಹೊತ್ತಿಸಿ ಒಮ್ಮೆಲೆ ಚಿತೆಗೆ ನೆಗೆಯುವಷ್ಟು ವಿಕೃತ ಆಚರಣೆಯಾಯಿತು. ಇನ್ನು ಸಾಮಾನ್ಯರದು ಲೆಕ್ಕವೇ ಇರುತ್ತಿರಲಿಲ್ಲ.

ಹದಿನೇಳನೆ ಶತಮಾನದಲ್ಲಿ ಬ್ರಿಟಿಷರು ಭಾರತದ ಸಂಸ್ಥಾನಗಳನ್ನು ವಶಮಾಡಿಕೊಂಡಿದ್ದರಿಂದ ಸ್ವಲ್ಪ ಅದರ ತೀವ್ರತೆ ಕಡಿಮೆಯಾಯಿತು, ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅನೇಕ ಹೋರಾಟಗಾರರು, ಸುಧಾರಣಾವಾದಿಗಳು ಹುಟ್ಟಿಕೊಂಡರು. ಅವರೆಲ್ಲ ಸತಿಪದ್ಧತಿಯನ್ನು ತೀವ್ರವಾಗಿ ಖಂಡಿಸಿದರು. ರಾಜಾರಾಮ ಮೋಹನರಾಯ್ ಅವರ ಹೋರಾಟದ ಫಲದಿಂದ ಅದು ಬ್ರಿಟಿಷರಿಂದ ಸತಿವಿರೋಧಿ ಕಾನೂನು ಜಾರಿಗೆ ಬಂದು ಸಹಗಮನ ಎಂಬ ಭಯಂಕರ ಸ್ವರೂಪ ಕಳಚಿತು ಅಲ್ಲಿಗೆ ಭಾರತೀಯ ಸ್ತ್ರೀಯರ ಜೀವಂತ ದಹನ ನಿಂತಿತು.

**೫. ೪. ಕನ್ಯಾದಾನ, ತೊತ್ತು**

ಪ್ರಾಚೀನ ಕಾಲದಲ್ಲಿ ದೇವರು, ಧರ್ಮದ ಹೆಸರಿನಲ್ಲಿ ವಿಚಿತ್ರವಾದ ಪದ್ಧತಿಗಳು ಆಚರಣೆಯಲ್ಲಿದ್ದವು. ಅಂತಹ ಪದ್ಧತಿಗಳೆಲ್ಲ ಸ್ತ್ರೀಯರ ನೈತಿಕ ವಿಚಾರಗಳಿಗೆ ತುಂಬಾ ಪೆಟ್ಟು ಕೊಟ್ಟಿವೆ. ಪಿತೃಸ್ಥಾನೀಯತೆಯಲ್ಲಿ ಸ್ತ್ರೀಯರು ಇವನ್ನೆಲ್ಲಾ ಅನಿವಾರ್ಯವಾಗಿ ಸಹಿಸಿಕೊಂಡು

ಬಂದಿದ್ದಾರೆ. ಮಾತೃಸ್ಥಾನೀಯತೆಯಲ್ಲಿ ಮಹಿಳೆಯರಿಗಿದ್ದ ಸ್ಥಾನಕ್ಕೂ ಪಿತೃಸ್ಥಾನೀಯತೆಯಲ್ಲಿ ಹೆಣ್ಣಿಗಿರುವ ಸ್ಥಾನೀಯತೆಗೂ ತುಂಬಾ ವ್ಯತ್ಯಾಸವಿದೆ ಮತ್ತು ವೈರುಧ್ಯವಿದೆ. ದೇವಾಲಯಗಳಿಗೆ ವೇಶ್ಯೆಯರು, ಪಾತ್ರದವರಲ್ಲದೆ ಕನ್ಯಾದಾನ, ತೊತ್ತು ಎನ್ನುವ ಪದ್ಧತಿಗಳು ಇದ್ದವು. ಇವು ಕೂಡ ಸ್ತ್ರೀಯರನ್ನು ದೇವಾಲಯಗಳಿಗೆ ದಾನ ಕೊಡುವುದಾಗಿದೆ.

ಕ್ರಿ.ಶ. ೮ನೇ ಶತಮಾನದ ಮಾವಳಿ ಶಾಸನದಲ್ಲಿ ಎರೆಯಮ್ಮರಸ ಬನವಾಸಿಯನ್ನು ಆಳ್ವಿಕೆ ಮಾಡುತ್ತಿದ್ದಾಗ ರಾಜಪುಲಿ ಕುಲಮುದ್ಧನು ಗೋ ಸಹಸ್ರ ದಾನದ ಬದಲಿಗೆ ಒಂದು ಕನ್ಯಾದಾನವನ್ನು ಮಾಡಿ ಗೋಸಾಸದ ಕಲ್ಲನ್ನು ನಿಲ್ಲಿಸಿದ(E.C. VIII (ರೈ), ಸೊರಬ ೯). ದೇವಾಲಯಕ್ಕೆ ಸಹಸ್ರ ಗೋವುಗಳನ್ನು ದಾನ ಕೊಡುವುದರ ಬದಲಿಗೆ ಒಂದು ಕನ್ಯಾದಾನ ಮಾಡಿದ ಕುರಿತು ಮಾಹಿತಿ ಇದೆ. ಅಂದರೆ ಸಹಸ್ರ ಗೋವುಗಳಿಗೆ ಒಂದು ಕನ್ಯ ಸಮ ಎಂದು ಭಾವಿಸಲಾಗಿತ್ತು. ಕ್ರಿ.ಶ. ೧೧೬೪ರ ಚಿನಗ ಶಾಸನದಲ್ಲಿ ಚೋಳಗೌಡನ ಮಗ ಮಾಂಡಳಿಕ ಮಾಚಿಗೌಡ ಚೋಳೇಶ್ವರ ದೇವರಿಗೆ ರಂಗಭೋಗಕ್ಕೆ ಕೆರೆ, ಗದ್ದೆ, ಸಲಗೆ ದಾನ ಅಲ್ಲದೆ ಸುವರ್ಣದಾನ, ಗೋದಾನ, ಕನ್ಯಾದಾನ, ಭೂಮಿದಾನ ನೀಡಿದ್ದಾನೆ. ಹೆಣ್ಣು ಇಲ್ಲಿ ಕೆರೆ, ಗದ್ದೆ, ಬಂಗಾರದ ಜೊತೆ ಗುರುತಿಸಲ್ಪಟ್ಟಿದ್ದಾಳೆ. ಹೆಣ್ಣು ಒಂದು ವಸ್ತುವಿನಂತೆ ಬಳಕೆಯಾಗಿದ್ದಾಳೆ. ಹಾಗೆಯೇ ಒಂದು ಸಂಪತ್ತಿನಂತೆ ಯಾರ ವಶಕ್ಕೆ ಬೇಕಾದರೂ ಸೇರಬಲ್ಲವಳಾಗಿದ್ದಾಳೆ. ಅವಳನ್ನು ಪುರುಷ ತನ್ನಂತೆ ವ್ಯಕ್ತಿ ಸ್ಥಿತಿಯಲ್ಲಿ ನೋಡಲು ಬಯಸಿಲ್ಲ.

ಕ್ರಿ.ಶ. ೧೦೨೮ರ ನವಲಗುಂದ ಶಾಸನದಲ್ಲಿ ಬ್ರಹ್ಮಪುರಿಯ ಕೇರಿಯ ಶ್ರೀಗುಣದಬೀಶ್ವರ ಶ್ರೀ ಸೋಬನೇಶ್ವರ ದೇವರಿಗೆ ಕನ್ಯಾದಾನ ಮಾಡಲಾಗಿದೆ. ಹಾಗೆ ಮುಂದುವರಿದು ತ್ರೈಪುರುಷ ದೇವರ ಪ್ರತಿಷ್ಠೆ ಮಾಡಿ ಕನ್ಯಾದಾನ, ಹಿರಣ್ಯದಾನ ಮಾಡಿದ ಮಾಹಿತಿ ದೊರೆತಿದೆ(SII. XI (I)&(II), 64). ಶಾಸನಗಳಲ್ಲಿ ಅಷ್ಟೇ ಅಲ್ಲದೆ ಸಾಹಿತ್ಯದಲ್ಲೂ ಕವಿಗಳು ಕನ್ಯಾದಾನ ಮಾಡಿದ ಕುರಿತು ಉಲ್ಲೇಖಿಸಿದ್ದಾರೆ. ಕುಮಾರವ್ಯಾಸ ತನ್ನ ಕರ್ನಾಟಕ ಭಾರತ ಕಥಾಮಂಜರಿಯಲ್ಲಿ ಕನ್ಯಾದಾನದ ಬಗ್ಗೆ ಹೀಗೆ ಹೇಳುತ್ತಾನೆ. ಅರಸ ವೈಶಂಪಾಯನಿಗೆ ನಿಜ ಕರವ ಮುಗಿದು ಸುವರ್ಣ ವಸ್ತ್ರಾಭರಣ, ಗೋವಜ್ರ, ಭೂಮಿ, ಕನ್ಯಾದಾನ ಮಾಡಿದ ಎಂದು ಹೇಳುತ್ತಾನೆ. ಮಹಾಭಾರತವನ್ನು ಕೇಳ್ದವರಿಗೆ ಕನ್ಯಾದಾನದ ಫಲಪ್ರದವು ಲಭಿಸುವುದು ಎಂದು ಹೇಳುತ್ತಾನೆ. (ಕುಮಾರವ್ಯಾಸ; ಕರ್ನಾಟಕ ಭಾರತ ಕಥಾಮಂಜರಿ, ಪುಟ್ಟಪ್ಪ ಕೆ.ವಿ. ಮಾಸ್ತಿ ವೆಂಕಟೇಶ್ ಅಯ್ಯಂಗಾರ್(ಸಂ), ಪುಟ ೬೨೧).

**ತೊತ್ತು**

ಕನ್ಯಾದಾನದಂತೆ ಇದು ಕೂಡ ಸ್ತ್ರೀಯರನ್ನು ದೇವಾಲಯದ ವಶಕ್ಕೆ ಬಿಡುವುದಾಗಿದೆ. ತೊತ್ತು ಎಂಬ ಪದ ಸ್ವತ್ತು ಎಂಬ ಅರ್ಥವನ್ನು ಸೂಚಿಸುತ್ತದೆ. ದೇವಾಲಯದ ಸ್ವತ್ತು

ಅಥವಾ ವಶಕ್ಕೆ ಒಪ್ಪಿಸುವುದು ಎಂದಾಗಿದೆ. ಇವರೂ ಪಾತರದವರಂತೆ ನೃತ್ಯವನ್ನು ಮಾಡುವವರೆ, ವೇಶ್ಯೆಯರಂತೆ ಸೇವೆ ಮಾಡುವವರೇ. ಇವರನ್ನು ಯಾವ ಗುಂಪಿಗೆ ಸೇರಿಸಬೇಕು ಎಂಬ ಉಲ್ಲೇಖವಿಲ್ಲ. ಇವರು ದೇವಾಲಯದಲ್ಲಿ ಏನು ಮಾಡುತ್ತಿದ್ದರು ಎಂಬ ಕೆಲಸದ ವಿವರವೂ ಇಲ್ಲ. ನೃತ್ಯವನ್ನು ಮಾಡುವವರೂ ದೇವಾಲಯದ ಸ್ವತ್ತಾಗಿದ್ದರು ಸೂಳೆಯರು ದೇವಾಲಯದ ಸ್ವತ್ತಾಗಿದ್ದರು. ಒಟ್ಟಿನಲ್ಲಿ ದೇವಾಲಯದಲ್ಲಿ ಸೇವೆಯ ಹೆಸರಿನಲ್ಲಿ ಇರುವವರೆಲ್ಲ ದೇವಾಲಯದ ಸ್ವತ್ತಾಗಿದ್ದರು. ಕ್ರಿ.ಶ. ೧೦೩೫ರ ಬಾಗಳಿ ಶಾಸನದಲ್ಲಿ ಹಾಡುವ ಕಾಮವ್ವೆ ನಾಗವ್ವೆಯರ ಮಗಳು ಶ್ರೀ ಕಲಿದೇವರ ತೊತ್ತು ಪಾತ್ರದ ಸಿರಿಯವ್ವೆ ದಾನ ನೀಡಿದ ಮಾಹಿತಿ ಇದೆ. ರಂಗಭೋಗದಲ್ಲಿ ನೃತ್ಯ ಮಾಡುವ ಸಿರಿಯವ್ವೆ ಕಲಿದೇವರಿಗೆ ಸೇರಿದವಳು.

ದೇವಾಲಯಕ್ಕೆ ಸೇರಿದ ತೊತ್ತಿನವರಿರು ಹೇಗಿರುತ್ತಿದ್ದರೋ ಹಾಗೆಯೇ ವ್ಯಕ್ತಿಗತವಾಗಿ ತೊತ್ತಿನವರಿರುತ್ತಿದ್ದರು. ವೈಯಕ್ತಿಕವಾಗಿ ಇರುವ ತ್ತೊತ್ತಿನವರು ಯುದ್ಧದಲ್ಲಿ ಸಂಪತ್ತನ್ನು ಹೊತ್ತು ತಂದಂತೆ ಸ್ತ್ರೀಯರನ್ನು ಹೊತ್ತು ತರುತ್ತಿದ್ದ ಬಗ್ಗೆ ನಮಗೆ ವೇದ ಕಾಲದ ರಾಜ್ಯ ವ್ಯವಸ್ಥೆಯಲ್ಲಿಯೇ ಉಲ್ಲೇಖವಾಗಿರುವುದನ್ನು ನಾವು ಗಮನಿಸಿದ್ದೇವೆ. ಹಾಗೆ ತಂದವರನ್ನು ತಮ್ಮ ಸೇವೆಗಾಗಿ ದಾಸ ಮತ್ತು ದಾಸಿಯರನ್ನಾಗಿ ಮಾಡಿಕೊಳ್ಳುತ್ತಿದ್ದರು. ದಾಸ, ದಾಸಿಗೆ ಸಮಾನವಾಗಿಯೇ ತೊತ್ತು ಎಂದು ಕನ್ನಡದಲ್ಲಿ ಬಳಸಲಾಗುತ್ತದೆ. ವೈಯಕ್ತಿಕವಾಗಿ ಸೂಳೆಯರನ್ನು ಹೊಂದುವುದಕ್ಕೆ ವ್ಯಕ್ತಿಗತ ಸೂಳೆಯರಾಗಿರುತ್ತಾರೆ. ಅಂದರೆ ಅವರು ತಮ್ಮನ್ನು ಪೋಷಿಸುವವರನ್ನು ಬಿಟ್ಟು ಬೇರೆಯವರೊಂದಿಗೆ ಸಂಬಂಧ ಹೊಂದುವುದಿಲ್ಲ. ಅದೇ ರೀತಿ ತೊತ್ತಿನ ಸ್ತ್ರೀಯರಿದ್ದರು, ಶಾಸನಗಳಲ್ಲಿ ತೊತ್ತಿನ ಮಕ್ಕಳು ಎಂಬ ಪದ ಬಳಕೆಯಾಗಿದೆ. ಕೊಡಗಿನ ಶಾಸನದಲ್ಲಿ 'ಹೆಣ್ಣಿಂಗೆ ಸಲ್ಲುವ ಸ್ವಾಸ್ತಮರಿಯಾದೆ ಕೊಟ್ಟು ಕ್ರಮವೆಂತೆಂದಡೆ ಹೆಣ್ಣಿಂಗೆ ಹೆಣ್ಣುಮಕ್ಕಳಿಗೆ ತ್ತೊತ್ತಿನ ಮಕ್ಕಳಿಗೆ ಸಲ್ಲುವುದು(E.C. I, ಕೊಡಗು ೬೦). ಯಾವುದೋ ಆಸ್ತಿ ಹಂಚಿಕೆ ವಿಷಯವಾಗಿರುವ ಈ ಶಾಸನ ಆಸ್ತಿ ಹಂಚುವಾಗ ತನ್ನ ಮಕ್ಕಳಿಗೂ ತಾನು ಸಂಬಂಧ ಹೊಂದಿದ್ದ ತೊತ್ತಿನವಳ ಮಕ್ಕಳಿಗೂ ಆಸ್ತಿ ಸಲ್ಲುವಂತೆ ಮಾಡಿದ ಕುರಿತಾದ ಮಾಹಿತಿ ಇರಬಹುದು.

ಕ್ರಿ.ಶ. ೧೧೫೭ರ ದೊಡ್ಡಗದ್ದುಂಬಳ್ಳಿಯ ಶಾಸನದಲ್ಲಿ ಆಚಾರ್ಯ ಚಿಕ್ಕವುಡರಾಯ ಭಟ್ಟಯ್ಯಗಳ ಮೊಮ್ಮಕ್ಕಳು ಸಿಂಗೆಯ್ಯ, ಮಂಚಯ್ಯ, ಚವುಡಯ್ಯ ಮುಂತಾದ ದಾಯಾದ್ಯರಿಗೆ ಸಂಬಂಧಿಸಿದ ೮೦೦ ಮರದ ಅಡಿಕೆ ತೋಟವನ್ನು ಪೆರುಮಾಳಿದೇವನೆಂಬುವ ಕೊಂಡು ತೋಟದಲ್ಲಿ ಆಚಾರ್ಯಪ್ಪನ ಭಾಗದ ೪೦೦ ಮರದ ಆಶ್ರಯವನ್ನು ಮಕ್ಕಳು ತಪ್ಪದೆ ತೊತ್ತಿನ ಮಕ್ಕಳಿಗೆ ಬಿಟ್ಟುಕೊಟ್ಟ ವಿಷಯವಿದೆ(E.C. V, ಹಾಸನ, ೧೫೧). ಅಂದರೆ ಆಚಾರ್ಯ ಕುಟುಂಬದ ಆಸ್ತಿಯನ್ನು ಕೊಂಡ ಪೆರುಮಾಳಿದೇವನೆಂಬುವನು ಆಚಾರ್ಯರಿಗೆ ೪೦೦ ಮರದ ಆಶ್ರಯವನ್ನು ಮರಳಿ ಬಿಟ್ಟುಕೊಟ್ಟಿದ್ದಾನೆ. ಅದು ದಾನ ಅಥವಾ ಪುಕ್ಕಟೆ ಇರಬಹುದು. ಅದು ಯಾರಿಗೆ ಸಲ್ಲಬೇಕೆಂದು ತಾನೇ ಹೇಳಿದ್ದಾನೆ. ಆಚಾರ್ಯನ ಮಕ್ಕಳು ಇಲ್ಲವೇ ಆತನ

ತೊತ್ತಿನ ಮಕ್ಕಳಿಗೆ ಸೇರಬೇಕೆಂದರೆ ಆಚಾರ್ಯ ಹೆಂಡತಿಯಲ್ಲದೆ ಮತ್ತೊಬ್ಬ ಸ್ತ್ರೀಯನ್ನು ತೊತ್ತಿನವಳಾಗಿ ಹೊಂದಿದ್ದ ಎಂಬ ಅರ್ಥವನ್ನು ಇದು ಉಲ್ಲೇಖಿಸುತ್ತದೆ. ಅಂದರೆ ಒಡೆಯನ ಮನೆಯಲ್ಲಿ ಆಳಾಗಿ, ದಾಸಿಯಾಗಿ ಕೆಲಸ ಕಾರ್ಯಗಳನ್ನು ಮಾಡುತ್ತಾ ಅವರು ಹೇಳಿದಂತೆ ಕೇಳಿಕೊಂಡಿರುವುದು. ಅವಳೊಂದಿಗೆ ಯಜಮಾನ ಸಂಬಂಧ ಹೊಂದಬಹುದು, ಹೊಂದದೇ ಇರಬಹುದು. ಬಿಜಾಪುರದ ಮ್ಯೂಸಿಯಂ ೧೨ನೇ ಕಲ್ಲು ಕ್ರಿ.ಶ. ೧೦೮೩ರ ಶಾಸನದಲ್ಲಿ ರಬ್ಬಕಬ್ಬೆ ತನ್ನ ತೊತ್ತು ಮಾಚಬ್ಬೆಯ ಸರಕಳೇಶ್ವರ ದೇವರ್ಗೆ ಬಿಟ್ಟಳ್(ಕ.ವಿ.ಶಾ. ಸಂಪುಟ–೧೦, ಬಿಜಾಪುರ, ೧೩). ರಬ್ಬಕಬ್ಬೆ ತನ್ನ ತೊತ್ತು ಅಂದರೆ ಮಗಳನ್ನೇ ಸಕಳೇಶ್ವರ ದೇವರಿಗೆ ಬಿಟ್ಟ ಮಾಹಿತಿ ಇದೆ. ಒಟ್ಟಿನಲ್ಲಿ ಇವರು ಸಮಾಜದ ಯಾವುದೇ ಒಂದು ಚೌಕಟ್ಟಿನಲ್ಲಿ ಬರದ, ತಮ್ಮದೇ ಗುರುತಿಸುವಿಕೆ ಇಲ್ಲದ ಜೀವನ ನಡೆಸಬೇಕಿತ್ತು.

ಕನ್ಯಾದಾನ, ತೊತ್ತು ಪದ್ಧತಿಗಳಲ್ಲದೆ ಸಮಾಜದಲ್ಲಿ ಸ್ತ್ರೀಯರ ವಿಚಾರವಾಗಿ ವಿಚಿತ್ರವಾಗಿ ನಿಯಮಗಳನ್ನು ರೂಪಿಸಿದ್ದರು. ಆ ಪದ್ಧತಿಗಳ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಅಂತಹ ಕೆಲವು ಶಾಸನ ಉಲ್ಲೇಖಗಳನ್ನು ನೋಡಬಹುದಾಗಿದೆ. ಕ್ರಿ.ಶ. ೧೧೯೯ರ ಒಂದು ಶಾಸನದಲ್ಲಿ ನಾಡಿನ ಅಧಿಕಾರಿಗಳು ಬಿಟ್ಟ ಬಿಡಾರ ಮುಂತಾದ ತೆರಿಗೆ ವಸೂಲಿಗಾಗಿ ಆ ಗ್ರಾಮಕ್ಕೆ ಹೋಗಕೂಡದೆಂಬ ನಿರ್ಬಂಧ ಹೇರಿದೆ ಹಾಗೂ ಮಂಗಳವಾರ ಸಂತೆಯ ಮಾರುಕಟ್ಟೆಗಳಲ್ಲಿ ಅಧಿಕಾರಿಗಳು ತೆರೆಗೆ ವಸೂಲಿಗೆ ಬಲತ್ಕರಿಸಿದರಾದರೆ ಅರಸನ ಆಣೆ ಎಂದು ಹೇಳಿದೆ. ಇದರಲ್ಲಿ ಹೆಸರಿಸಿರುವ ತೆರಿಗೆ ಬಾಬುಗಳಲ್ಲಿ ತಲೆವಿಡ(ತಲೆಹಿಡುಕ ವೃತ್ತಿ), ತೊಡವಿಡ(ಒಡವೆಗಳು), ಹಾಗೂ ಬಿಲಕುಡಿ(ಬಟ್ಟೆಬರೆ) ಮೇಲಿನ ತೆರಿಗೆ,(E.C. VIII, ಅರಕಲಗೂಡು, ೧೫). ಒಡವೆ ಮತ್ತು ಬಟ್ಟೆ ಬರೆ ವ್ಯಾಪಾರ ಸಂತೆಯಲ್ಲಿ ಮಾಡುವುದು ಇಂದಿಗೂ ಸಾಮಾನ್ಯವಾದ ವಿಚಾರವಾಗಿದೆ. ಆ ಕಾರಣಕ್ಕೆ ಅವುಗಳ ಮೇಲೆ ತೆರಿಗೆ ವಿಧಿಸಿರಬಹುದು. ತಲೆಹಿಡುಕರದ್ದು ಅದೊಂದು ವೃತ್ತಿಯಾಗಿ ಸಾಮಾನ್ಯವಾಗಿತ್ತೆಂಬುದು ಈ ಶಾಸನದಿಂದ ತಿಳಿದುಬರುತ್ತದೆ. ಹೆಣ್ಣುಮಕ್ಕಳನ್ನು ಲೈಂಗಿಕವಾಗಿ ಬಯಸುವವರಿಗೆ ಮಾರುವುದು ಈ ವೃತ್ತಿಯಾಗಿದೆ. ಅಂದರೆ ಸ್ತ್ರೀ ಸಂತೆಯಲ್ಲಿ ಮಾರಾಟವಾಗುವ ಇತರೆ ವಸ್ತುವಿನಂತೆ ಪರಿಗಣಿಸಲಾಗಿದೆ. ಅಂದರೆ ಅವರ ಸ್ಥಾನ ಎಷ್ಟು ಹೀನವಾಗಿರಬಹುದೆಂದು ಊಹಿಸಲು ಅಸಾಧ್ಯ.

ಕ್ರಿ.ಶ. ೧೨೩೨ರ ಬಾಗಳಿ ಶಾಸನದಲ್ಲಿ ೫೦ ಮಹಾಜನರ ಮತ್ತು ಹೆಗ್ಗಡೆ ಮಲ್ಲಯ್ಯ, ಗೋಪಯ್ಯನ ಸಮ್ಮುಖದಲ್ಲಿ ಅಂಗಡಿ ಕಾಳಯ್ಯ ಎಂಬುವವನು ತನ್ನ ಮಗಳು ಜಾತಿ ಸಂಕರವಾದಾಗ ಕಲಿದೇವರಿಗೆ ದಂಡವಾಗಿ ಭೂದಾನ ನೀಡುತ್ತಾನೆ(ಕ.ವಿ.ಶಾ. ಸಂಪುಟ–೧, ಹರಪನಹಳ್ಳಿ, ೧೩೫). ಅನ್ಯಜಾತಿಯ ಯುವಕನೇ ಕಾಳಯ್ಯನ ಮಗಳ ಶೀಲ ಹರಣ ಮಾಡಿರಲಿ, ಇಲ್ಲವೇ ಇಬ್ಬರ ಒಪ್ಪಿಗೆಯಿಂದಲೇ ನಡೆದಿರಲಿ ಆದರೆ ದಂಡ ತೆತ್ತಬೇಕಾದವನು ಮಾತ್ರ ಹೆಣ್ಣಿನ ತಂದೆ. ಯುವಕನಿಗೆ ಯಾವುದೇ ಶಿಕ್ಷೆ ವಿಧಿಸಿದ್ದು ಉಲ್ಲೇಖಿಸಿಲ್ಲ. ಅಂದರೆ

ಸಮಾಜವೇ ಗಂಡಿನ ತಪ್ಪಿಗೆ ಶಿಕ್ಷೆ ವಿಧಿಸದೇ ಹೆಣ್ಣಿಗೆ ಮಾತ್ರ ಶಿಕ್ಷೆ ವಿಧಿಸಿದರೆ, ಗಂಡಿನ ಅಪರಾಧಕ್ಕೆ ಪುಷ್ಟಿ ಕೊಟ್ಟಂತಾಗುತ್ತದೆ. ಅಂತಹ ಕೆಲಸ ಇಲ್ಲಿ ನೆಡೆಯುತ್ತಿತ್ತು.

**೫. ೫. ಆತ್ಮಬಲಿದಾನ**

ಭಾರತದಲ್ಲಿ ಆತ್ಮಬಲಿದಾನ ನಂಬಿಕೆ ಮೂಲವಾಗಿದೆ. ಅದರಲ್ಲೂ ಧಾರ್ಮಿಕ ಬಲಿದಾನದ ಮೂಲದಲ್ಲಿ ಹಲವು ಆತ್ಮಬಲಿದಾನಗಳು ಹುಟ್ಟಿಕೊಂಡವು. ಬಲಿ ಕೊಡುವುದು ಎಂದರೆ ಅರ್ಪಣೆ ಮಾಡುವುದು. ವಸ್ತುಗಳನ್ನು, ಸಂಪತ್ತೆಂದು ಪರಿಗಣಿಸಿದ್ದೆಲ್ಲವನ್ನು ಅರ್ಪಿಸುವುದು. ಈ ಬಲಿ ಇಲ್ಲವೇ ಅರ್ಪಿಸುವಿಕೆ ಎನ್ನುವುದು ಪ್ರಾಚೀನ ಕಾಲದಲ್ಲಿ ದೇವರಿಗೆ ಪ್ರೀತ್ಯರ್ಥವಾಗಲಿ ಎಂಬ ಕಾರಣಕ್ಕೆ. ಆದರೆ ಆದಿವಾಸಿ ಮಾನವ ದೇವರನ್ನು ತೃಪ್ತಿ ಪಡಿಸಲು ಪ್ರಾಣಿಬಲಿ ಕೊಡುತ್ತಿದ್ದರು. ಇದರಿಂದ ದೇವರು ತೃಪ್ತನಾಗುತ್ತಾನೆ ಎಂಬ ನಂಬಿಕೆ ಇತ್ತು ಅಥವಾ ತಮ್ಮ ಉದ್ದೇಶ ಈಡೇರಿದಾಗ ಹರಕೆ ಸಲ್ಲಿಸುವ ಕಾರಣದಿಂದ ಪ್ರಾಣಿ ಬಲಿ ಕೊಡುತ್ತಿದ್ದರು. ಅದೇ ರೀತಿ ದೇವರನ್ನು ತೃಪ್ತಿಪಡಿಸುವುದಕ್ಕೆ ಪ್ರಾಣಿಗಳಂತೆ ತಮ್ಮನ್ನೇ ಬಲಿ ಕೊಡುವುದು ಆತ್ಮಬಲಿದಾನವಾಗಿದೆ. ಕೆಲವೊಮ್ಮೆ ತಮಗೊದಗಿದ ಸಂಕಷ್ಟ ಪರಿಹಾರವಾಗಲಿ ಎನ್ನುವ ಕಾರಣಕ್ಕೂ ಬಲಿ ಕೊಡುವುದನ್ನು ನಾವು ನೋಡಿದ್ದೇವೆ. ಪ್ರಾಚೀನ ಕಾಲದಿಂದ ಇಂದಿನವರೆಗೂ ದೇವರ ಅದರಲ್ಲೂ ಶಕ್ತಿದೇವತೆಗಳಿಗೆ ಪ್ರಾಣಿಬಲಿಯನ್ನು ಕೊಡುವುದು ಅವ್ಯಾಹತವಾಗಿ ಸಾಗಿಬಂದಿದೆ. ದೇವರ ಪ್ರೀತ್ಯರ್ಥವಾಗಿ ಹೇಗೆ ಪ್ರಾಣಿಬಲಿ ಅರ್ಪಿಸಲಾಗುತ್ತದೆಯೋ ಹಾಗೆ ಮನುಷ್ಯರ ಮೇಲಿನ ಉದಾತ್ತವಾದ ಅಭಿಮಾನ ಮತ್ತು ಅತಿಯಾದ ಪ್ರೀತಿ ಗೌರವದ ಕಾರಣದಿಂದ ಅವರು ಮರಣ ಹೊಂದುತ್ತಿದ್ದರು. ತಾವು ಅವರ ಜೊತೆ ಮರಣ ಹೊಂದುವುದು, ಅಂದರೆ ಅವರ ಮೇಲಿನ ಅಭಿಮಾನಕ್ಕೆ ತಾವೇ ಬಲಿಯಾಗುತ್ತಿದ್ದುದುಂಟು. ಅವರಿಗಾಗಿ ತಮ್ಮ ಪ್ರಾಣವನ್ನು ಅರ್ಪಿಸುವುದು. ತನ್ನನ್ನು ತಾನು ಹತ್ಯೆ ಮಾಡಿಕೊಳ್ಳುವುದು ಸಾಮಾನ್ಯವಾದ ವಿಚಾರವೇನಲ್ಲ. ಆದರೂ ಇತಿಹಾಸದಲ್ಲಿ ಈ ರೀತಿ ಜೀವದ ಮೇಲಿನ ಹಂಗನ್ನು ತೊರೆದುದರ ಹಿಂದೆ ಇರುವ ಧಾರ್ಮಿಕ ಭಾವನೆಗಳು ಎಷ್ಟೊಂದು ಬಲವಾಗಿರುವುವು. ಅವುಗಳಿಗೆ ಮನುಷ್ಯ ಎಷ್ಟು ಕಟಿಬದ್ಧವಾದ ನಂಬಿಕೆಯನ್ನಿಟ್ಟುಕೊಂಡಿದ್ದ ಎಂಬುದು ಕೂಡ ಮುಖ್ಯವಾಗುತ್ತದೆ.

'ಬಲಿ' ಎಂಬುದನ್ನು ಮಾತೃಸಂಸ್ಕೃತಿಯಲ್ಲಿ ಗುರುತಿಸುತ್ತೇವೆ. ಅಲ್ಲಿ ಕೊಡಲಾಗುವ ಬಲಿಗೂ ಇಲ್ಲಿ ಆಗುವ ಆತ್ಮಬಲಿಗೂ ಪ್ರತ್ಯಕ್ಷವಾಗಿ ಸಂಬಂಧವಿಲ್ಲದಿರಬಹುದು. ಆದರೆ ಬಲಿಯನ್ನು ಒಂದು ವಿಷಯವಾಗಿ ಮೂಲಕಾರಣವನ್ನು ತಳಕು ಹಾಕಿ ನೋಡಿದಾಗ ಮಾತೃಸಂಸ್ಕೃತಿಯಲ್ಲಿಯೇ ಭೂಮಿಗೆ ಬಲಿ ಕೊಡಲಾಗುತ್ತಿತ್ತು ಎನ್ನಲಾಗುತ್ತದೆ. ಆದಿವಾಸಿ ಮಾನವ ಹಲವಾರು ಕಾರಣಗಳಿಂದ ಬಲಿ ಕೊಡುತ್ತಿದ್ದುದುಂಟು. ಅಲ್ಲಿ ರಾಜಪ್ರಭುತ್ವ ಎನ್ನುವುದಿರಲಿಲ್ಲ. ಹಾಗಾಗಿ ತಾನು ನಂಬಿದ ಒಂದು ಅಘೋಚರ ಶಕ್ತಿಯೇ ಪ್ರಭುತ್ವ ಅಂದರೆ ತನಗಿಂತ ಶಕ್ತಿಶಾಲಿಯಾದದ್ದು. ಅದು ದೇವರೋ ಅಥವಾ ತನ್ನನ್ನು ಆಪತ್ತಿನಿಂದ

ಕಾಪಾಡುವ ಇನ್ನಾವ ಶಕ್ತಿಯೋ ಆಗಿರಬಹುದು. ತನ್ನನ್ನು ಕಾಪಾಡಿದ ಉಪಕಾರಕ್ಕಾಗಿ ಪ್ರೀತ್ಯರ್ಥವಾಗಿ ಏನಾದರೂ ಕೊಡಬೇಕು. ಕೊಡಲು ಅವನ ಹತ್ತಿರ ಇದ್ದದ್ದು ಕೇವಲ ಪ್ರಾಣಿಗಳು ಅವನ್ನೇ ಅರ್ಪಿಸುತ್ತಿದ್ದರು. ಅಲ್ಲಿ ಕೊಡುವ ಬಲಿ ದೇವರ ಋಣ ತೀರಿಸಲು ಅದು ಪ್ರಾಣಿ ರೂಪದಲ್ಲಿತ್ತು. ಆದರೆ ಇಲ್ಲಿ ಆತ್ಮಬಲಿಯನ್ನು ಸಾಕ್ಷಾತ್ ದೇವರೆಂದು ಬಗೆದ ರಾಜರುಗಳ ಋಣ ತೀರಿಸಲು ಕೊಡುತ್ತಿದ್ದರು. ಅವರ ಮೇಲಿನ ಪ್ರೀತ್ಯರ್ಥವಾಗಿ, ಋಣಸಂದಾಯಕ್ಕಾಗಿಯೆ ಬಲಿ ನೀಡುತ್ತಿದ್ದರು.

ಬಲಿದಾನಗಳಲ್ಲಿ ಎರಡು ವಿಧ. ಒಂದು ಧಾರ್ಮಿಕ ಬಲಿದಾನ, ಮತ್ತೊಂದು ಋಣಮುಕ್ತರಾಗುವುದಕ್ಕೆ ಬಲಿಯಾಗುವುದಕ್ಕೆ ಆತ್ಮಬಲಿದಾನ. ಧಾರ್ಮಿಕ ಬಲಿದಾನದಲ್ಲಿ ವೈಯಕ್ತಿಕ ಜೀವನದ ಹಲವಾರು ಕಾರಣಗಳು ಇರುತ್ತವೆ. ಆತ್ಮಹತ್ಯೆ ಮಹಾಪಾಪ ಎಂದು ಆತ್ಮಹತ್ಯೆಗೆ ವಿರೋಧವಿದ್ದರೂ, ತಮ್ಮ ಜೀವದ ಮೇಲಿನ ಹಕ್ಕು ತಮ್ಮದು ಎಂಬ ಒಂದು ಬಲವಾದ ವಾದ ತಟಸ್ಥವಾಗಿರುವಂತೆ ಮಾಡಿದೆ. ಧರ್ಮದಲ್ಲಿ ಪಾಪ ಪ್ರಾಯಶ್ಚಿತ್ತ, ಜೀವನದ ಅಂತ್ಯದ ವೇಳೆಯಲ್ಲಿ ಪುಣ್ಯ ಸಂಪಾದನೆಗಾಗಿ ತೀರ್ಥಯಾತ್ರೆಗೆಂದು ಹೋದ ಸಂದರ್ಭದಲ್ಲಿಯೆ ಮರಣ ಹೊಂದುತ್ತಿದ್ದರು. ವಾಸಿಯಾಗದ ರೋಗದಿಂದ ನರಳುವವರು ಬೇಸರದಿಂದ ದೇಹತ್ಯಾಗ ಮಾಡುತ್ತಿದ್ದರು. ಕೆಲವರು ತಮ್ಮ ಜೀವನದ ಕರ್ತವ್ಯವನ್ನು ಪೂರ್ಣಮಾಡಿದ ತೃಪ್ತ ಭಾವನೆಯಿಂದ ಜೀವನ ಅಂತ್ಯಗೊಳಿಸುತ್ತಿದ್ದರು. ಗಂಡ ಸತ್ತ ಮೇಲೆ ಹೆಂಡತಿ ಜಿಗುಪ್ಸೆಗೊಂಡು ಸಾಯುವುದು. ಇವೆಲ್ಲ ವ್ಯಕ್ತಿಗಾಗಿ ಮಾಡಿದ, ಆದರೆ ಇದು ಧರ್ಮವೆಂದು ನಂಬಿಸಿ ಮಾಡುವ ಬಲಿದಾನಗಳಾಗಿವೆ ಇವೆಲ್ಲವೂ ಮುಕ್ತಿಗಾಗಿ ಹಂಬಲಿಸಿ ಮಾಡಿಕೊಳ್ಳುವ ಆತ್ಮಬಲಿದಾನವಾಗಿವೆ. ಜೈನರಲ್ಲಿ ಇದು ಬಹಳ ಸ್ಪಷ್ಟವಾಗಿ ಗೋಚರಿಸುತ್ತದೆ.

ಕರ್ನಾಟಕದ ಶಾಸನಗಳಲ್ಲಿ ಇಂಥ ಕೆಲವು ಧಾರ್ಮಿಕ ಬಲಿದಾನಗಳ ಕುರಿತು ಮಾಹಿತಿ ಇದೆ. ಸ್ತ್ರೀಯರು ಮಾಡುವ ಪ್ರಾಣಬಲಿದಾನ ಧಾರ್ಮಿಕ ಉದ್ದೇಶದಿಂದ ಮಾಡುವುದಿಲ್ಲವಾದರೂ, ನಮ್ಮ ಧರ್ಮದಲ್ಲಿ ಪತಿ ಮರಣಾನಂತರ ಸ್ತ್ರೀ ಜೀವನಕ್ಕೆ ಮಾನ್ಯತೆಯೂ ಇಲ್ಲದಿರುವುದರಿಂದ ಪತಿ ಯಾವುದೇ ಕಾರಣದಿಂದ ಮರಣ ಹೊಂದಿದರು ಸತಿಯಾದವಳು ಲೌಕಿಕವಾಗಿಯೋ ಅಥವಾ ಅಲೌಕಿಕ ಕಾರಣದಿಂದಲೋ ತಾವು ಪತಿಯ ಜೊತೆ ಜೀವನ ಅಂತ್ಯಗೊಳಿಸುತ್ತಿದ್ದರು. ಅಂದರೆ ಇಲ್ಲಿ ಪರೋಕ್ಷವಾಗಿ ಸ್ತ್ರೀಯರು ಬಲಿಯಾಗುತ್ತಿದ್ದರು. ಧಾರ್ಮಿಕ ಮರಣದಿಂದ ಮಾತ್ರ ಮೋಕ್ಷ ಸಾಧ್ಯವೆಂದು ನಂಬುವ ಜೈನರಲ್ಲಿ ಲೌಕಿಕ ಮರಣಕ್ಕೆ ಮಹತ್ವವಿಲ್ಲ. ಧಾರ್ಮಿಕ ಬಲಿದಾನದಲ್ಲಿ ಸ್ತ್ರೀಯರು ಜೀವನ ಬೇಡವೆನಿಸಿದಾಗ, ಇಲ್ಲವೇ ಪತಿಯ ಮರಣದ ನಂತರ ಕಠಿಣ ಮತ್ತು ಅಪಮಾನಕರ ಜೀವನ ಬೇಡವೆನಿಸಿ ಜೈನ ಧರ್ಮದಂತೆ ಸನ್ಯಾಸ ಸ್ವೀಕರಿಸಿ, ಸಲ್ಲೇಖನದಂತಹ ಉಪವಾಸ ವ್ರತಗಳನ್ನು ಆಚರಿಸಿ ಉಪವಾಸದಿಂದ ಸ್ವಲ್ಪ ಕಾಲಾವಧಿಯಲ್ಲಿಯೇ ಮರಣ ಹೊಂದುತ್ತಿದ್ದರು. ಆದರೆ ಇದನ್ನು

ದೇಹತ್ಯಾಗ ಎನ್ನಲಾಗುತ್ತದೆ. ಅಥವಾ ನಿಸಿದಿ ಹೊಂದಿದರು ಎನ್ನುತ್ತಾರೆ. ಆದರೆ ಇದು ಒಂದು ರೀತಿಯ ಧಾರ್ಮಿಕ ಬಲಿದಾನವೇ ಆಗಿರುತ್ತದೆ. ಈ ರೀತಿ ಬಲಿಯಾಗುವವರ ಉದ್ದೇಶ ಅದೇ ಹಲವಾರು ಮೋಕ್ಷ ಸಾಧನೆಯಾಗಿದೆ.

ಆತ್ಮಬಲಿಯ ಹಿಂದೆ ಹಲವಾರು ಉದ್ದೇಶಗಳಿರುವ ಕಾರಣಕ್ಕೆ ಸ್ಪಷ್ಟೀಕರಣ ಕೊಡುವುದು ಅವಶ್ಯವಾಗಿದೆ. ಸ್ತ್ರೀಯರು ಬಲಿ ಹೋಗುವುದು ಸಹಗಮನ ಪದ್ಧತಿಯ ಹೊರತಾಗಿ ಮತ್ತೊಂದು ಪರ್ಯಾಯ ವಿಧಾನವೆಂದರೆ ದೊರೆಗಳ ಮೇಲಿನ ಅಭಿಮಾನದಿಂದ ಆತ್ಮಬಲಿದಾನ ಮಾಡಿಕೊಳ್ಳುತ್ತಿದ್ದ ಪತಿಯೊಂದಿಗೆ ತಾವೂ ಆತ್ಮಬಲಿದಾನ ಮಾಡಿಕೊಳ್ಳುವುದಾಗಿದೆ. ಸತಿಪದ್ಧತಿಯಲ್ಲಿ ಪತಿ ಮರಣದ ನಂತರ ಸಾವು ನಿರ್ಧಾರವಾದರೆ, ಬಲಿ ಪದ್ಧತಿಯಲ್ಲಿ ಪತಿ ಜೀವಿತಾವಧಿಯಲ್ಲಿಯೇ ಮರಣ ನಿರ್ಧಾರವಾಗುತ್ತದೆ. ಏಕೆಂದರೆ ಬಲಿಯಾಗುವ ವ್ಯಕ್ತಿ ಸಾವಿನ ಹೆಸರಲ್ಲಿ ಹರಕೆ ಹೊತ್ತಿರುತ್ತಾನೆ. ಸಮಯ ಬಂದಾಗ ಹರಕೆ ತೀರಿಸುತ್ತಾನೆ. ಅವನ ಜೊತೆ ಆತನ ಪತ್ನಿಯೂ ಆ ಮೂಲಕ ಬಲಿಯಾಗುತ್ತಾಳೆ. ಇಲ್ಲಿ ಹರಕೆ ಹೊರುವವನು ರಾಜರ ನೆಚ್ಚಿನ ಭಂಟರು. ಅವರು ಉನ್ನತ ಅಧಿಕಾರಿಗಳಾಗಿರಬಹುದು. ಇಲ್ಲವೇ ಸಾಮಾನ್ಯ ಸೇವಕ ಕೂಡ ಆಗಿರಬಹುದು. ತಮ್ಮ ದೊರೆಗಳ ಮೇಲಿನ ಅತಿಯಾದ ಅಭಿಮಾನದಿಂದ ಇಂಥ ಕೃತ್ಯವನ್ನೆಸಗುತ್ತಿದ್ದರು.

ಜೋಳವಾಟಿ, ವೇಳೆವಾಟಿ, ಲೆಂಕವಾಟಿ ಪ್ರಾಣಬಲಿದಾನಕ್ಕೆ ಬೇರೆ ಬೇರೆ ಹೆಸರುಗಳಷ್ಟೇ ಆದರೆ ಸಾಯುವ ಸಂದರ್ಭ ಕೆಲವೊಮ್ಮೆ ಯುದ್ಧವಾಗಿದ್ದರೆ ಕೆಲವೊಮ್ಮೆ ಬೇಡಿಕೆ ಈಡೇರಿದಾಗ ಮಾತ್ರವಾಗಿತ್ತು. ನಮ್ಮ ಸಂಪ್ರದಾಯದಲ್ಲಿ ನಂಬಿಕೆಗಳಿಗೇನೂ ಕೊರತೆಯಿಲ್ಲ. ಅದರಲ್ಲಿ ಈ 'ಋಣ' ಎನ್ನುವುದು ಕೂಡ ಒಂದು: ಜನ್ಮ ನೀಡಿದ ಕಾರಣಕ್ಕೆ ತಂದೆ ತಾಯಿಗೆ ಪಿತೃ ಋಣ, ಮಾತೃಋಣವೆನ್ನುತ್ತೇವೆ. ಬಂಧುಗಳಿಂದ ಸಹಾಯ ಪಡೆದರೆ ಅದು ಕೂಡ ಒಂದು ಋಣ. ನಮಗೆ ಕಷ್ಟದಲ್ಲಿ ಯಾರಾದರೂ ಹಣದ ಅಥವಾ ಆಹಾರ ರೂಪದ ಸಹಾಯ ಮಾಡಿದರೆ, ಅದಕ್ಕೆ ಅನ್ನದ ಋಣ ಅಥವಾ ಇನ್ನಾವುದೋ ಹೀಗೆ ಯಾರಿಂದ ಸಹಾಯ ಪಡೆದರೂ ನಿಮ್ಮ ಋಣದ ಭಾರ ನಮ್ಮ ಮೇಲೆ ಇದೆ ಎಂದು ಭಾವಿಸುತ್ತೇವೆ. ಅದರಿಂದ ನಾವು ಹೊರಬರಬೇಕೆಂದರೆ ಅವರಿಗೆ ಆಪತ್ಕಾಲದಲ್ಲಿ ನಾವು ಸಹಾಯ ಮಾಡುವುದಾಗಿದೆ. ಹಾಗೆ ಸಮಯ ಬಂದಾಗ ಸಹಾಯ ಮಾಡುವುದೇ ವೇಳೆವಾಟಿ. ಹಾಗೆ ಮಾಡಿದರೆ ಅದರಿಂದ ಋಣಮುಕ್ತರಾದಂತೆ ಭಾವಿಸಲಾಗುತ್ತದೆ. ಜೋಳವಾಟಿ ಎಂದರೆ ಅನ್ನದ ಋಣ, ಜೋಳವಾಳಿ ಎಂಬ ಹೆಸರು ಬರಲು ಕಾರಣವಿದೆ. ಕರ್ನಾಟಕದ ಅತಿ ಮುಖ್ಯವಾದ ಆಹಾರ ಬೆಳೆ ಜೋಳ. ಜೋಳದಿಂದ ತಯಾರಾದ ಆಹಾರ ಅನ್ನವೆಂದೇ ಕರೆಯಲಾಗುತ್ತದೆ. ಬಿಜಾಪುರದ ಜನತೆ ಜೋಳದಿಂದ ತಯಾರಿಸಿದ ಒಂದು ರೀತಿಯ ಪದಾರ್ಥಕ್ಕೆ 'ಅನ್ನ' ವೆಂದೇ ಕರೆಯುತ್ತಾರೆ. ಜೋಳ+ಪಾಟಿ=ಜೋಳವಾಟಿ ಎಂದಾಗಿದೆ. ಅನ್ನದ ಕರ್ತವ್ಯ(ಚಿದಾನಂದಮೂರ್ತಿ ಎಂ.;

ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೩೩೪). ತನಗೆ ಅನ್ನವನ್ನು ಕೊಟ್ಟು ಸಾಕಿದ ಧಣಿಗೆ ಸಮಯ ಬಂದಾಗ ಅನ್ನದ ಋಣ ತೀರಿಸುವುದು. ಅಥವಾ ಸಹಾಯ ಮಾಡುವ ಸರದಿ ಬಂದಾಗ ಸಹಾಯ ಮಾಡುವುದು. ಯುದ್ಧದ ಸಂದರ್ಭವಾದರೆ, ಯುದ್ಧದಲ್ಲಿ ಹೋರಾಡುತ್ತಾ ಮರಣ ಹೊಂದುವುದು. ಒಂದು ವೇಳೆ ದೊರೆ ಯುದ್ಧದಲ್ಲಿ ತಮಗಿಂತ ಮೊದಲೇ ಮರಣ ಹೊಂದಿದರೆ ಆಗ ತಮ್ಮ ಪ್ರಾಣವನ್ನು ಬಲಿ ಕೊಡುವುದು, ಇದು ಒಂದು ರೀತಿಯ ಅತಿಯಾದ ಭಾವುಕತೆ. ಅಥವಾ ಭಾವುಕತೆಯ ಪರಮಾವಧಿ ಎನ್ನಬಹುದು.

ಪಂಪಭಾರತದಲ್ಲಿ ಹಲವು ಕಡೆ ಜೋಳದ ಪಾಟಿಯ ಪ್ರಸ್ತಾಪ ಬರುತ್ತದೆ. ಕುಂತಿಯು ಕರ್ಣನನ್ನು ಪಾಂಡವರ ಪಕ್ಷಕ್ಕೆ ಸೇರಿಸಿಕೊ ಎಂದು ಕರೆದಾಗ ಕರ್ಣನು ತಾನು ದುರ್ಯೋಧನನ್ನು ಬಿಟ್ಟು ಬಂದರೆ, ನನ್ನ ಒಡೆಯ ಮಾಡಿದ ಉಪಕಾರವನ್ನು ಹಿಂದಿಕ್ಕಿ, ಪಾಟಿಯನ್ನು ಬಿಟ್ಟು ಜೋಳಕ್ಕೆ ತಪ್ಪಿದಂತಾಗುತ್ತದೆ. ಅಪಕೀರ್ತಿ ಬರುತ್ತದೆ. ಎಂದು ಹೇಳುತ್ತಾನೆ. ಯುದ್ಧರಂಗದಲ್ಲಿ ಭೀಷ್ಮರು ಸರಿಯಾಗಿ ಯುದ್ಧ ಮಾಡುತ್ತಿಲ್ಲವೆಂದು ದುರ್ಯೋಧನನು ಆಕ್ಷೇಪಿಸಿ "ನೀವು ಪಾಂಡವರೊಡನೆ ನಂಟುತನವನ್ನೇ ಆಲೋಚಿಸುತ್ತಿರುವಿರಿ, ಸ್ವಲ್ಪ 'ಜೋಳದ ಪಾಟಿ'ಯನ್ನು ಕುರಿತು ಆಲೋಚಿಸಿರಿ" ಎಂದು ಕಟುವಾಗಿ ಮಾತಾಡುತ್ತಾನೆ(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೩೩೫). ಅನ್ನ ಹಾಕಿದ ಯಜಮಾನನ ಅಧೀನದಲ್ಲಿರುವುದು. ಅದಕ್ಕೆ ಋಣವೆಂಬ ಭಾರದ ಹೆಸರು ಕೊಡುವುದರ ಮೂಲಕ ಯುದ್ಧದಂಥ ಆಪತ್ಕಾಲದಲ್ಲಿ ತಮ್ಮ ಪರವಾಗಿಯೇ ಇರುವಂತೆ ನೋಡಿಕೊಳ್ಳುವುದು, ಮಾಡಿದ ಸಹಾಯಕ್ಕೆ ಪ್ರಾಣ ಪ್ರತಿಫಲಾಪೇಕ್ಷೆಯಾಗಿರುತ್ತದೆ.

ದೊರೆಗಳು ಕಾಯಿಲೆಯಿಂದ ಬಳಲುತ್ತಿದ್ದರೆ ಅವರ ಮರಣದ ಸನಿಹವನ್ನು ತಿಳಿದು ತಾವು ಅಭಿಮಾನದಿಂದ ವೇಳೆಗೊಳ್ಳಲು ಸಿದ್ಧರಾಗುವುದು. ರಾಣಿಯರ ವಿಷಯದಲ್ಲಿಯೂ ಹೀಗೆ ವೇಳೆಗೊಂಡಿದ್ದು ಉಂಟು. ಕ್ರಿ.ಶ. ೧೧೦೭ರಲ್ಲಿ ರಾಣಿ ಪದ್ಮಲಾದೇವಿ ಮರಣ ಹೊಂದಿದಾಗ ಇಬ್ಬರು ದಂಪತಿಗಳು ರಾಣಿಗೆ ವೇಳೆಗೊಂಡ ವಿಷಯವು ಶಾಸನವೊಂದರರಲ್ಲಿದೆ. ಚಾಲುಕ್ಯ ರಾಣಿ ಪದ್ಮಲಾದೇವಿ ಅಗ್ರಹಾರ ಆಳ್ವಿಕೆ ಮಾಡುತ್ತಿದ್ದಳು. ಈಕೆಯ ಆಡಳಿತ ನಿರ್ವಹಣೆಯಲ್ಲಿ ಸಹಾಯಕ್ಕೆ ನಿಷ್ಠಾವಂತ ಸೇವಕರ ಅವಶ್ಯಕತೆ ಇರುತ್ತದೆ. ದೊರೆಗಳಿಂದ ದೂರದ ಅಗ್ರಹಾರದಲ್ಲಿದ್ದ ರಾಣಿಯರಿಗೆ ಒಂದು ಆಪ್ತವಲಯವೆಂಬುದಿರಬಹುದು. ರಾಣಿಯರೊಡನೆ ಇರುವ ಒಂದು ಮಾನಸಿಕ ಬಾಂಧವ್ಯ ಅವರ ಸಾವಿನಲ್ಲೂ ಜೊತೆ ಇರುವಂತೆ ಮಾಡಿರುತ್ತದೆ. ಇಲ್ಲಿ ವೇಳೆಯಾದವರು ದಂಪತಿಗಳು, ಪತಿಯನ್ನು ಅನಸರಿಸುವುದು ಪತ್ನಿಯ ಧರ್ಮವೆಂದು ಹೇಳುವುದರಿಂದ ಇಲ್ಲಿ ಅದರ ಮುಂದಿನ ಶಾಸನದಲ್ಲಿ ಉತ್ತಮ ಚೋಳ ಸೆಟ್ಟಿ ಬಾಲೆಯೊಬ್ಬಳ(ಬಹುಶಃ ಅವನ ಹೆಂಡತಿ). ತಲೆಯನ್ನು ಕಡಿಸಿ ತಾನು ಸತ್ತ ವಿಷಯವಿದೆ(ಚಿದಾನಂದಮೂರ್ತಿ ಎಂ.; ಕನ್ನಡ ಶಾಸನಗಳ ಸಂಸ್ಕೃತಿಕ ಅಧ್ಯಯನ, ಪುಟ ೩೩೯). ಸಾಮಾನ್ಯರಿಗೆ ರಾಜ ರಾಣಿಯರು ಸಾಕ್ಷಾತ್ ದೈವಸ್ವರೂಪಿಗಳು, ತಮ್ಮ ವಂಶ

ಕೃಷ್ಣರಾಜಪೇಟೆ, ೮೪). ಕುವರ ಲಕ್ಷ್ಮನ ಜೊತೆ ಆತನ ಪತ್ನಿ ಸುಗ್ಗಲೆ ಭಾಷೆ ಕೊಟ್ಟಂತೆ ಪ್ರಾಣ ತ್ಯಾಗ ಮಾಡಿದಂತೆಯೇ ಸಾವಿರ ವೀರರ ಪತ್ನಿಯರೂ ಪ್ರಾಣತ್ಯಾಗ ಮಾಡಿರುತ್ತಾರೆ. ಇದು ಆ ಸಮಾಜದಲ್ಲಿ ಸತಿಯಾದವರಿಗೆ ಅನಿವಾರ್ಯದ ವಿಷಯವಾಗಿರುತ್ತದೆ. ಸುಗ್ಗಲೆ ಪತಿಯನ್ನನುಸರಿಸಿದಂತೆ ಉಳಿದ ವೀರರ ಪತ್ನಿಯರೂ ಸಹ ತಮ್ಮ ಪತಿಯರನ್ನು ಅನುಸರಿಸುತ್ತಾರೆ. ಆದರೆ ಶಾಸನಗಳಲ್ಲಿ ಅವುಗಳ ಉಲ್ಲೇಖವಿರುವುದಿಲ್ಲ.

ಕ್ರಿ.ಶ. ೧೨೫೬ರ ಸೋಮೇಶ್ವರ ಆಳ್ವಿಕೆ ಕಾಲದ ಶಾಸನದಲ್ಲಿ ರಾಜವಂಶಸ್ಥರಿಗೆ ವಂಶ ಪರಂಪರೆಯಾಗಿ ಗರುಡ ಹೋಗುತ್ತಿದ್ದರು. ಕೊರೆಯ ನಾಯಕ ಮಾರವೆನಾಯಕಿತಿಗಳಿಗೆ ಜನಿಸಿದ ಸಿವೆಯ ನಾಯಕ ಎರಡನೇ ಬಲ್ಲಾಳ ದೇವನಿಗೆ ಗರುಡನಾಗಿ ಮಡಿದನೆಂದೂ, ನಂತರ ಆತನ ಮಗ ಲಕ್ಕೆಯ ನಾಯಕನು ತನ್ನ ಹೆಂಡತಿ ಗಂಗಾದೇವಿಯೊಡನೆ ಇಮ್ಮಡಿ ನಾರಸಿಂಗ ದೇವನೊಡನೆ ಬೆರೆಸೆ ಬಾಸೆಯ ಪೂರೈಸಿದನೆಂದು ಹೇಳಿದೆ. ಇವರೀರ್ವರ ಮಗ ಕನ್ನೆಯನಾಯಕ ಆತನ ಪತ್ನಿಯರು ವುಮ್ಮವ್ವೆ ಮತ್ತು ಕಲ್ಲವ್ವೆ, ಇವರು ಹತ್ತು ಮನಿಸ ಲೆಂಕಿತಿಯರು ಇಪ್ಪತ್ತೊಂದು ಮನಿಸ ಲೆಂಕರು ಬಾಸೆಯ ಪೂರೈಸಿದರು. ಇದು ಸೋಮೇಶ್ವರರೊಡನೆ ಕನ್ನೆಯ ನಾಯಕನ ಮಗ ತನ್ನ ಪತ್ನಿಯರಾದ ಕೇತವ್ವೆ, ಹೊನ್ನವ್ವೆ, ಮತ್ತು ಮಂಚವ್ವೆ ನಾಯಕಿತಿಯರೊಡಗೂಡಿ ಮೂರನೇ ನಾರಸಿಂಹನಿಗನೊಡನೆ ಮಡಿದರು (E.C. VI, ಕೃಷ್ಣರಾಜಪೇಟೆ, ೬೬). ರಾಜವಂಶದ ಮೂರು ತಲೆಮಾರುಗಳ ದೊರೆಗಳಿಗೆ ಕ್ರಮವಾಗಿ ಒಂದು ವಂಶದ ಮೂರು ತಲೆಮಾರಿನವರೂ ಕ್ರಮವಾಗಿ ಪತ್ನಿ ಸಮೇತರಾಗಿಗರುಡ ಹೋಗಿರುವರು. ಇದನ್ನು ಗಮನಿಸಿದರೆ, ರಾಜರಿಗೆ ಆಪ್ತವಲಯದ ಅಧಿಕಾರ ವರ್ಗದವರು ಅವರ ಕುಟುಂಬಕ್ಕೆ ಅಧಿಕಾರ ಹಸ್ತಾಂತರವಾದಂತೆ, ಅವರ ನಡುವೆ ಇರುವ ನಂಬಿಕೆ ಹಾಗೆಯೇ ಮುಂದುವರಿದಂತಿದೆ. ಇಂಥ ಪದ್ಧತಿಗಳೂ ಹಾಗೆಯೇ ಮುಂದುವರಿಯುತ್ತಿದ್ದವು. ಗರುಡ ಹೋಗುವವರಿಗೆ ಎಷ್ಟು ಜನ ಪತ್ನಿಯರಿರುತ್ತಿದ್ದರೂ ಅವರೆಲ್ಲರೂ ಗರುಡ ಹೋಗುತ್ತಿದ್ದರು.

ಗಂಡನಾರಯನ ಸೆಟ್ಟಿ ಮತ್ತು ಕಮಾರವ್ವೆ ನಾಯಕಿತಿ ಹೊಯ್ಸಳ ದೊರೆ ಎರೆಯಂಗನಿಗೆ ಗರುಡ ಹೋದರು, ಇವರ ಮಗ ಹೊಯ್ಸಳ ಸೆಟ್ಟಿ ಆತನ ಹೆಂಡತಿ ಮಾಚವ್ವೆ ನಾಯಕಿತಿ, ಬಿಟ್ಟಿದೇವನಿಗೆ ಗರುಡ ಹೋದರು. ಇವರ ಮಗ ಕುರಿಯ ನಾಯಕ ಮತ್ತು ಅತನ ಹೆಂಡತಿ ಮಾರವ್ವೆ ಮತ್ತು ಚಿಕ್ಕಮಾದವ್ವೆ ಮತ್ತು ಏಳು ಲೆಂಕಿಗಳು ಮೊದಲನೇ ನರಸಿಂನಿಗೆ ಗರುಡ ಹೋದರು.(E.C.VI, ಕೃಷ್ಣರಾಜಪೇಟೆ, ೯). ಈ ಶಾಸನದಲ್ಲಿ ರಾಜವಂಶಸ್ಥರಿಗೆ ಕ್ರಮವಾಗಿ, ಪತಿ ಪತ್ನಿಯರು ಜೊತೆಯಾಗಿ ಗುರುಡ ಹೋಗಿರುವರು. ಗರುಡ ಹೋಗುವವರು ತಮ್ಮ ಒಡೆಯನ ಮೇಲಿನ ಅನನ್ಯ ಭಕ್ತಿ ಗೌರವದಿಂದಲೇ ಆಗಲಿ, ಋಣಸಂದಾಯ ಮಾಡುವುದಕ್ಕೇ ಆಗಲಿ ಪ್ರಾಣತ್ಯಾಗ ಮಾಡಿದರೆ ಪತ್ನಿಯ ಸಮ್ಮತಿಯ ಪಾತ್ರವೇನಿರಲಿಲ್ಲ. ಪತ್ನಿಯ ಜೀವನ ಪತಿಯ ಜೀವನದಲ್ಲಿ ಬೆರೆತುಹೋಗಿರುತ್ತದೆ. ಸಾವಿನ ವಿಷಯದಲ್ಲೂ ಅವಳ ಒಪ್ಪಿಗೆ ಅವಶ್ಯಕತೆ

ಇರಲಿಲ್ಲವೆಂಬುದು ಗರುಡ ಹೋದ ಶಾಸನಗಳನ್ನು ನೋಡಿದರೆ ತಿಳಿಯುತ್ತದೆ. ಪುರುಷನ ಪ್ರತಿಷ್ಠೆ ಸ್ವಾಮಿನಿಷ್ಠೆಗೆ ಪತ್ನಿ ಬಲಿಯಾಗಬೇಕಿತ್ತು. ಆಳುವ ಒಡೆಯನೇ ಆಗಿರಲಿ ಅವಳಿಗೆ ಅದಕ್ಕಿಂಥ ವೈಯಕ್ತಿಕವಾದ ಮೆಚ್ಚಿನ ಕುಟುಂಬ ವಿರುತ್ತದೆ. ಅದು ಆಳುವ ವರ್ಗಕ್ಕಿಂತಲೂ ಪ್ರೀತ್ಯರ್ಥವಾದದ್ದು. ಯಾರಿಗೋಸ್ಕರ, ಯಾರೋ ಕೊಟ್ಟ ಭಾಷೆಗೆ ಅವಳೂ ಸಾಯಲು ಭಾಷೆ ಕೊಡಬೇಕಾಗಿತ್ತು. ಇದು ತಕ್ಷಣವೇ ಪತಿ ಸತ್ತ ಸುದ್ದಿ ಕೇಳಿ ಸಾಯಲು ನಿರ್ಧಾರ ಮಾಡುವ ಸತಿ ಹೋಗುವ ಪದ್ಧತಿಗಿಂತಲೂ ಹಿಂಸಾತ್ಮಕವಾದಂತಹದು. ದೊರೆ ಸಾಯುವುದಂತೂ ನಿಶ್ಚಿತ. ಅಂದ ಮೇಲೆ ತಾವು ಭಾಷೆ ಕೊಟ್ಟಿದ್ದರಿಂದ ಸಾಯಲೇಬೇಕು. ಬದುಕು ಇರುವಷ್ಟು ದಿನವೂ ಅನಿಶ್ಚಿತ. ಭರವಸೆ ಇಲ್ಲದ,ಪ್ರತಿ ದಿನವೂ ಪ್ರಾಣತ್ಯಾಗ ಮಾಡುವ ತೊಳಲಾಟವನ್ನಿಟ್ಟುಕೊಂಡು ಬದುಕಬೇಕು. ಅದು ತನ್ನವರಿಗಾಗಿ ಅಲ್ಲದ, ಬದುಕಿರುವಷ್ಟು ದಿನವೂ ನೆಮ್ಮದಿರಹಿತವಾಗಿ ಕಳೆಯುವುದು, ಮಾನಸಿಕವಾದ ಹಿಂಸೆ, ಸತಿ ಹೋಗುವುದರಲ್ಲಿಯಾದರೂ ಸ್ತ್ರೀಯರಿಗೆ ಒಂದು ರೀತಿಯ ಸಾರ್ಥಕಭಾವ ತುಂಬಿಕೊಂಡು ಹುಮ್ಮಸ್ಸಿನಿಂದ ಚಿತೆಗೆ ಧುಮುಕುತ್ತಿದ್ದರು. ಇಲ್ಲಿ ಸಾರ್ಥಕತೆ ಇದ್ದರೂ ಸಮಾಜದಲ್ಲಿ ಅವರನ್ನು ಸತಿಪದ್ಧತಿಯಂತೆ ಪ್ರತ್ಯೇಕ ಗುರುತಿಸುವಿಕೆ ಇರುವುದಿಲ್ಲ. ಪತಿಯ ಕಾರಣಕ್ಕೆ ತಾವು ಅನುಸರಿಸಬೇಕಿತ್ತು. ಗರುಡ ಹೊಗುವುದಾಗಲಿ ಇಂತಹ ಯಾವುದೇ ಪದ್ಧತಿಯಾಗಲಿ ಇದೊಂದು ರೀತಿಯ ಹುಚ್ಚು ಅಭಿಮಾನವೆನ್ನಬಹುದು. ತಮ್ಮ ನಾಯಕನಿಗಿಲ್ಲದ ಜೀವನ ತಮಗೂ ಬೇಡ, ತಮ್ಮ ದೊರೆ ಇರದ ಜಗತ್ತು ತಮಗೂ ಬೇಡವೆಂದು ಧಿಕ್ಕರಿಸುವ ಮನೋಭಾವವಾಗಿದೆ. ಇದರಿಂದ ಅಂತಹ ಸ್ವಾರ್ಥ ಹಿತಾಸಕ್ತಿಗಳೇನು ಇರದಿದ್ದರೂ, ಸ್ತ್ರೀಯರು ಇದಕ್ಕೆ ಬಲಿಯಾದದ್ದು ವಿಪರ್ಯಾಸವಾಗಿದೆ. ಏಕೆಂದರೆ ಸಮಾಜದಲ್ಲಿ ಯಾವುದೇ ಪದ್ಧತಿ ಜಾರಿ ಬರಲಿ ಅದರ ಅಪರೋಕ್ಷ ಪರಿಣಾಮ ಸ್ತ್ರೀಯರ ಮೇಲೆ ಆಗುತ್ತಿತ್ತು. ಇಲ್ಲಿ ಗರುಡ ಪದ್ಧತಿಯಲ್ಲಿ ಆಗಿದ್ದು ಹಾಗೆ ಎಂದು ಹೇಳಬಹುದು. ಗರುಡ ಹೋಗುವವರು ಸಾಮೂಹಿಕವಾಗಿ ಹೋಗುತ್ತಿದ್ದರು. ಹೋಗುವ ಸಮೂಹಕ್ಕೆ ಯಾವುದೇ ದಾಖಲೆ ಇಲ್ಲ. ಹತ್ತು ಮಾನಿಸ ಲೆಂಕಿತಿಯರು, ಇಪ್ಪತ್ತು ಮಾನಿಸ ಲೆಂಕರು ಗರುಡನಪ್ಪಿದರು(E.C. VI, ಕೃಷ್ಣರಾಜಪೇಟೆ, ೮೨). ಮೂರನೇ ನರಸಿಂಹನಿಗೆ ಹತ್ತು ಲೆಂಕಿತಿಯರು, ಇಪ್ಪತ್ತೊಂದು ಲೆಂಕರು ಗರುಡ ಹೋದರು. ಮೊದಲನೇ ನರಸಿಂಹನಿಗೆ ಏಳು ಜನ ಲೆಂಕಗಳು ಗರುಡ ಹೋದರು(E.C.VI, ಕೃಷ್ಣರಾಜಪೇಟೆ, ೮೪). ಉನ್ನತ ಹುದ್ದೆಯಲ್ಲಿರುವವರನ್ನು ಬಿಟ್ಟರೆ ಉಳಿದಂತೆ ಇಷ್ಟು ಜನ ಎಂದು ಒಟ್ಟಾಗಿ ಸಂಖ್ಯೆಯ ಗುಂಪನ್ನು ಕೊಡಲಾಗಿದೆ. ಅವರ ಬಗ್ಗೆ ಉಲ್ಲೇಖಿಸುವಷ್ಟು ಉನ್ನತ ಹುದ್ದೆಯಲ್ಲಿರುವವರಾಗಿರುವುದಿಲ್ಲ. ಅವರೆಲ್ಲ ಸಾಮಾನ್ಯ ಸೈನಿಕರಾಗಿರುವ ಸಾಧ್ಯತೆ ಇದೆ. ಆದರೆ ಸಾಮಾನ್ಯರ ಬಗ್ಗೆ ಉಲ್ಲೇಖಿಸುವುದು ಅಷ್ಟು ಮುಖ್ಯವಾಗಿಲ್ಲವೆಂದ ಮೇಲೆ ಆ ಸಾಮಾನ್ಯರ ಪತ್ನಿಯರಿಗೂ ಒಂದು ರಾಜ್ಯ ಆಳುವ ದೊರೆಯ ಸಾವಿಗೂ ಎಲ್ಲಿಯ

ಜೀವನ ಅಸಾಧ್ಯವಾದ ಕಾರಣಕ್ಕೆ ಪತಿಯನ್ನು ಅನುಸರಿಸುವುದು ಅನಿವಾರ್ಯವಾಗಿದೆ. ಮತ್ತೆ ಇಲ್ಲಿ ತನ್ನ ಪ್ರಾಬಲ್ಯ ಮೆರೆದಿರುವುದು ನಮ್ಮ ಧರ್ಮದ ಶ್ರೇಷ್ಠ ಕಲ್ಪನೆ ಪಾತಿವ್ರತ್ಯವೇ ಆಗಿರುವುದು. ಗರುಡ ಹೋಗುವುದು ಪುರುಷನಿಗೆ ಸಂಬಂಧಿಸಿದ್ದೇ ಎಂದು ಹೇಳುವುದಾದರೂ ಅದು ಕೊನೆಗೆ ತಲುಪುವುದು ಸ್ತ್ರೀಯರ ಸಾವಿನ ಸುತ್ತವೇ ಆಗಿದೆ. ನಮ್ಮ ಧರ್ಮ ಸಮಾಜದ ಮೂಲಕ ನಿಯಮಗಳನ್ನು ಸ್ತ್ರೀಯರಿಗೆ ನೇರವಾಗಿ ರೂಪಿಸಿಲ್ಲವಾದರೂ ಅವುಗಳನ್ನು ಹೊರತಾಗಿ ಅಥವಾ ಧಿಕ್ಕರಿಸಿ ಜೀವಿಸುವ ಅವಕಾಶವನ್ನು ಕೊಡದಂತೆ ಮಾಡಿದೆ. ಕೊನೆಗೆ ಆ ನಿಯಮಗಳಿಗೆ ಅಂತಿಮ ಗುರಿ ಸ್ತ್ರೀಯಾಗಿರುವುದು ವಿಪರ್ಯಾಸವಾಗಿದೆ.

**ಸಮಾರೋಪ**

ಸ್ತ್ರೀಯರನ್ನು ಕುರಿತು ಮಾಹಿತಿ ನೀಡುವ ಶಾಸನಗಳನ್ನು ಕುರಿತು ಅಧ್ಯಯನ ಮಾಡುವಾಗ, ಆ ಕಾಲಾವಧಿಯಲ್ಲಿ ಶಾಸನಗಳು ನೀಡುವ ಮಾಹಿತಿಯಂತೆ ಸ್ತ್ರೀಯರಿಗೆ ಪ್ರಾತಿನಿಧ್ಯ ದೊರೆತಿತ್ತೇ ಎಂಬ ವಿಚಾರವನ್ನು ಕುರಿತು ಮಹಿಳಾ ಅಧ್ಯಯನದ ನೆಲೆಯಲ್ಲಿ ವಿಮರ್ಶಾತ್ಮಕ ದೃಷ್ಟಿಕೋನವನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಪ್ರಸ್ತುತ ಪಿತೃಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಜೀವಿಸುತ್ತಿರುವ ನಾವೆಲ್ಲರೂ ಮೂಲತಃ ಮಾತೃಪ್ರಧಾನ ನೆಲೆಯನ್ನು ದಾಟಿಬಂದದ್ದೇವೆ ಎಂಬುದು ವಿದ್ವಾಂಸರಾದಿಯಾಗಿ ಎಲ್ಲರೂ ಒಪ್ಪಿಕೊಂಡ ಸತ್ಯಾಂಶವಾಗಿದೆ. ಮಾತೃಪ್ರಧಾನ ವ್ಯವಸ್ಥೆಯ ಕಾಲಘಟ್ಟದಲ್ಲಿ ಹೆಣ್ಣು ಸ್ವತಂತ್ರ ಅಸ್ಥಿತ್ವವನ್ನು ಹೊಂದಿದ್ದಳು, ಶ್ರಮ ಮತ್ತು ಉತ್ಪಾದನೆಯ ಕ್ಷೇತ್ರಗಳಲ್ಲಿ ಲಿಂಗಭಿನ್ನತೆ ಇಲ್ಲದೇ ಇದ್ದುದರಿಂದ ಹಕ್ಕು ಬಾಧ್ಯತೆಗಳನ್ನು ಹೊಂದಿದ್ದು, ತಾನೇ ಯಜಮಾನ್ಯವನ್ನು ಹೊಂದಿದ್ದಳು. ಸಂತಾನೋತ್ಪತ್ತಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ ಕಾರಣಕ್ಕೆ ಹೆಣ್ಣನ್ನು ಉತ್ಪತ್ತಿಯ ಸಂಕೇತವಾಗಿ ಪೂಜ್ಯನೀಯ ಸ್ಥಾನದಲ್ಲಿ ನೋಡಲಾಗುತ್ತಿತ್ತು. ಇದೇ ಕಾರಣದಿಂದ ಮಾನ್ಯತೆ ಇದ್ದು ವಿಶೇಷ ಗೌರವ ಆದರಗಳು ದೊರೆತ್ತಿದ್ದವು ಎಂಬ ಅಂಶ ಕಂಡುಬರುತ್ತದೆ.

ದ್ರಾವಿಡ ಸಂಸ್ಕೃತಿಯ ಮಾತೃಪ್ರಧಾನ ವ್ಯವಸ್ಥೆಯನ್ನು ನಿಧಾನವಾಗಿ ಪಿತೃಪ್ರಧಾನ ವ್ಯವಸ್ಥೆ ಆಕ್ರಮಿಸಿಕೊಂಡಿತು ಇದಕ್ಕೆ ಹಲವಾರು ಕಾರಣಗಳಿವೆ. ಹೆಣ್ಣಿಗೆ ಕೌಟುಂಬಿಕವಾಗಿ ಜವಾಬ್ದಾರಿಗಳು ಹೆಚ್ಚಾದಂತೆ ಅವಳಿಗೆ ಉತ್ಪಾದನೆಯಲ್ಲಿ ಪಾಲ್ಗೊಳ್ಳುವಿಕೆ ಸಾಧ್ಯವಾಗದ ಕಾರಣಕ್ಕೆ ಆ ಕ್ಷೇತ್ರಗಳ ಮೇಲೆ ಹಿಡಿತ ಹೊಂದಲು ಸಾಧ್ಯವಿಲ್ಲದಾಯಿತು. ಇದರಿಂದ ಸಮಾಜದಲ್ಲಿ ಗಂಡಸು ಉತ್ಪಾದನೆ ಮತ್ತು ಆರ್ಥಿಕಮೂಲಗಳ ಜವಾಬ್ದಾರಿಯನ್ನು ತಾನೇ ನಿರ್ವಹಿಸಲು ಆರಂಭಿಸಿದ. ಕುಟುಂಬದ ಅವಶ್ಯಕತೆಗೆ ಮಾತ್ರ ಸೀಮಿತವಾಗಿದ್ದ ಕೃಷಿ ವಿಸ್ತಾರವಾಯಿತು. ಕಬ್ಬಿಣದ ಶೋಧ ಕೃಷಿಯಲ್ಲಿ ಕ್ರಾಂತಿಯನ್ನೇ ಉಂಟುಮಾಡಿತು. ಅಲ್ಲಿಂದ ವ್ಯಾಪಾರೀಕರಣದ ದೃಷ್ಟಿಕೋನ ಬೆಳದು ಬೃಹತ್ ಉತ್ಪಾದಾಂಗವಾಗಿ ಬದಲಾವಣೆಯ ಸ್ವರೂಪ ಪಡೆದದ್ದರಿಂದ ಪುರುಷ ಕೃಷಿಯಲ್ಲಿ ಯಜಮಾನನಾಗಿ ಮುಂದುವರಿಯುತ್ತಾನೆ. ವಿಪರ್ಯಾಸವೆಂದರೆ ಅಲ್ಲಿ ಸ್ತ್ರೀ ಶ್ರಮಿಕಳಾಗಿ ಮುಂದುವರಿಯಬೇಕಾಯಿತು. ಪ್ರಸ್ತುತ ಮಹಿಳೆ ಕೃಷಿಯಲ್ಲಿ ಉತ್ಪಾದನೆಯ ಒಂದು ಅಂಗ, ಶ್ರಮವಾಗಿಯೇ ಇರುವಳು. ಅವಳದೇ ಒಡೆತನದ ಕ್ಷೇತ್ರದಲ್ಲಿ ಅವಳು ಅಧೀನವಾದಳು ಎಂಬುದು ಕಂಡುಕೊಂಡ ಸತ್ಯಾಂಶವಾಗಿದೆ.

ಹೆಣ್ಣು ಉತ್ಪದಾದನಾ ಕ್ಷೇತ್ರದ ಮೇಲೆ ಯಾವಾಗ ಹಿಡಿತ ಕಳೆದುಕೊಂಡಳು, ಅಂದಿನಿಂದಲೇ ಮಾತೃಪ್ರಧಾನ ವ್ಯವಸ್ಥೆ ಅವಸಾನದತ್ತ ಸಾಗಿತು. ಇದು ಒಮ್ಮೆಲೆ ಜರುಗಿದಂತಹದಲ್ಲ ನಿಧಾನವಾಗಿ ಹೆಣ್ಣಿನ ಅರಿವಿಗೆ ಬಾರದಂತೆ ಅವನತಿ ಹಾದಿ ಹಿಡಿಯಿತು.

ಆಧಾರದಿಂದ ಅಧ್ಯಯನ ಮಾಡಿದಾಗ ಅಲ್ಲಿ ದೊರೆತಿರುವ ನಗರ ವ್ಯವಸ್ಥೆ ಮತ್ತು ವ್ಯಾಪಾರೀ ಸಂಸ್ಕೃತಿ ಒಂದು, ಮತೊಂದು ಮಾತೃದೇವತಾ ಆರಾಧನೆಯನ್ನು ಹೋಲುವ ಅವಶೇಷಗಳು ಇವೆರಡನ್ನು ಅವಲೋಕಿಸಿದಾಗ ಅದೊಂದು ಸಂದಿಗ್ಧ ಕಾಲವೆನ್ನಬಹುದು. ಅಂದರೆ ಪೂರ್ಣ ಮಾತೃಪ್ರಧಾನ ವ್ಯವಸ್ಥೆಯಿಂದ ಬಿಡಿಸಿಕೊಂಡಿರದ, ಪೂರ್ಣ ಪಿತೃ ಪ್ರಧಾನ ವ್ಯವಸ್ಥೆ ಆವರಿಸಿಕೊಂಡಿರದ ಕಾಲಘಟ್ಟವೆನ್ನಬಹುದು. ಇಲ್ಲಿ ಎರಡೂ ಲಕ್ಷಣಗಳೂ ಕಂಡುಬಂದಿರುವುದನ್ನು ನೋಡಲಾಗಿದೆ.

ಆದರೆ ನಾವು ದ್ರಾವಿಡ ಸಂಸ್ಕೃತಿಯ ಮಾತೃಮೂಲಕ್ಕೆ ಸೇರಿರುವರು ಎಂಬುದನ್ನು ಮತ್ತೆ ಮತ್ತೆ ಖಚಿತಪಡಿಸಿಕೊಳ್ಳುವ ಅವಶ್ಯಕತೆ ಇಲ್ಲ. ರಾಜ್ಯ ವ್ಯವಸ್ಥೆ ಮತ್ತು ನಗರೀಕರಣದಿಂದ ಮಾತೃಪ್ರಧಾನ ವ್ಯವಸ್ಥೆ ಅವನತಿಹೊಂದಿರಬಹುದು. ಆದರೆ ದ್ರಾವಿಡ ಜನಾಂಗಕ್ಕೆ ಸೇರಿದ ಕೆಲವು ಬುಡಕಟ್ಟುಗಳು ಈಗಲೂ ಅಸ್ಥಿತ್ವದಲ್ಲಿದ್ದು ನಮ್ಮ ಮೂಲ ಸಂಸ್ಕೃತಿಯ ಬಗ್ಗೆ ನಮಗೆ ಜಾಗೃತಗೊಳಿಸುತ್ತಿವೆ. ಬುಡಕಟ್ಟುಗಳನ್ನು ಹೊರತು ಪಡಿಸಿದಂತೆ ನಮ್ಮ ಜನಸಾಮಾನ್ಯರಲ್ಲಿ ಜಾರಿಯಲ್ಲಿರುವ ವಿಶಿಷ್ಟ ಆರಾಧನೆಗಳೆಂದರೆ, ಸಪ್ತಮಾತೃಕೆಯರು, ಲಜ್ಜಾಗೌರಿ, ಶಕ್ತಿಪೀಠಗಳು, ಶಿಷ್ಟದೇವತೆಗಳು, ಗ್ರಾಮದೇವತೆಗಳ ಆಚರಣೆ, ಜನಪದರ ಸಾಹಿತ್ಯದಲ್ಲಿರುವ ಜನಪದ ದೈವಗಳು ದ್ರಾವಿಡ ಜನಾಂಗದ ಆಚರಣೆಯಲ್ಲಿ ಜೀವಂತವಾಗಿರುವವು. ರಾಜ್ಯ ವ್ಯವಸ್ಥೆ, ರಾಜಕೀಯ ಮೇಲಾಟ, ಅನ್ಯ ಸಂಸ್ಕೃತಿಯ ಆಗಮನ, ವಶಪಡಿಸಿಕೊಳ್ಳುವಿಕೆ ಇಂಥ ಘಟನೆಗಳು ಸಂಚಲನವನ್ನುಂಟು ಮಾಡಿದವೇ ಹೊರತು ಮೂಲ ಸಂಸ್ಕೃತಿಯನ್ನು ಅಳಿಸಿಹಾಕಲು ಸಾಧ್ಯವಾಗಲಿಲ್ಲ. ಇದಕ್ಕೆ ಕಾರಣ ದ್ರಾವಿಡರ ಮಾತೃದೇವತಾ ಆಚರಣೆ ಜನಸಾಮಾನ್ಯರಲ್ಲಿ ಜೀವಂತವಾಗಿರುವ ಕಾರಣಕ್ಕೆ.

ಪುರುಷಪ್ರಧಾನ ವ್ಯವಸ್ಥೆಯ ವೈದಿಕ ಸಂಸ್ಕೃತಿ ಮಾತೃಸತ್ತೆಯ ದ್ರಾವಿಡರ ಸಂಸ್ಕೃತಿಯ ಮೇಲೆ ಮಾಡಿದ ದಾಳಿಯಿಂದಾಗಿ ಇಡೀ ದ್ರಾವಿಡರ ಮಾತೃಸಂಸ್ಕೃತಿಯಲ್ಲಿ ಹಲವಾರು ಬದಲಾವಣೆಗಳು ಉಂಟಾದವು. ವೈದಿಕರು ಪ್ರಧಾನವಾಗಿ ತಮ್ಮ ಧರ್ಮದ ಮೂಲಕವೇ ಮೂಲ ವ್ಯವಸ್ಥೆಯ ಸಾಮಾಜಿಕ, ಧಾರ್ಮಿಕ, ಆರ್ಥಿಕ ಕ್ಷೇತ್ರಗಳ ಮೇಲೆ ಪಿತೃಪ್ರಧಾನ ವ್ಯವಸ್ಥೆಯ ಕಾನೂನು ಸಂಹಿತೆಗಳನ್ನು ಜಾರಿಗೆ ತಂದರು ಇದರಿಂದ ಮೂಲ ದ್ರಾವಿಡ ಸಂಸ್ಕೃತಿ ಮರೆಯಲ್ಲಿ ಉಳಿಯಿತು. ದ್ರಾವಿಡರ ಧರ್ಮ, ಸಂಸ್ಕೃತಿಯನ್ನು ವೈಧಿಕರು ತಮ್ಮ ಧರ್ಮದೊಂದಿಗೆ ಸಮೀಕರಿಸಿಕೊಂಡು ತಮ್ಮ ಧರ್ಮ, ದೇವತೆಗಳನ್ನು ಪ್ರಧಾನವಾಗಿ, ದ್ರಾವಿಡರ ಮಾತೃದೇವತೆಗಳನ್ನು ಅಧೀನದೈವವನ್ನಾಗಿ ಮಾಡಿದರು.

ವೈಧಿಕರ ಆಕ್ರಮಣದಿಂದ ದಕ್ಷಿಣದಲ್ಲಿ ನೆಲೆಕಂಡುಕೊಂಡ ದ್ರಾವಿಡರು, ವೈಧಿಕ ಮತ್ತು ವೈಧಿಕೇತರ ವಿದೇಶಿ ಸಂಸ್ಕೃತಿಯ ಮತ್ತು ವಿದೇಶಿ ರಾಜ್ಯಗಳ ಆಕ್ರಮಣ, ಉತ್ತರದ ರಾಜ್ಯಗಳ

ಅಶೋಕ ಕರ್ನಾಟಕದಲ್ಲಿ ತನ್ನ ಹಿಡಿತ ಸಾಧಿಸಲು ಪ್ರಯತ್ನ ಪಡುತ್ತಿದ್ದಾಗ ಕರ್ನಾಟಕದಲ್ಲಿ ದ್ರಾವಿಡ ಜನಾಂಗಕ್ಕೆ ಸೇರಿದ ವಡಗರಲ್ಲದೆ ಇತರೆ ಸಣ್ಣಪುಟ್ಟ ರಾಜ್ಯಗಳು ಆಳ್ವಿಕೆ ನೆಡೆಸುತ್ತಿದ್ದರ ಕುರಿತು ಮಾಹಿತ ಶಂಗಂ ಸಾಹಿತ್ಯದಿಂದಲೇ ತಿಳಿದುಬರುತ್ತದೆ. ಆದರೆ ಆ ಕಾಲದ ದ್ರಾವಿಡರ ಸಾಮಾಜಿಕ ವ್ಯವಸ್ಥೆ ಬಗ್ಗೆ ಅಶೋಕನ ಶಾಸನಗಳಲ್ಲಿ ಮಾಹಿತಿ ದೊರಕದೇ ಹೋದರು ಶಂಗಂ ಸಾಹಿತ್ಯದಿಂದ ತಿಳಿದುಕೊಳ್ಳಲು ಸಾಧ್ಯವಾಗಿದೆ. ಶಂಗಂ ಸಾಹಿತ್ಯದ ಪ್ರಕಾರ ಸ್ತ್ರೀಯರು ಸ್ವತಂತ್ರ ಅಸ್ಥಿತ್ವ ಹೊಂದಿದ್ಧರ ಕುರಿತು ಮಾಹಿತಿ ದೊರಕುತ್ತದೆ. ಸ್ತ್ರೀಯರು ಎಲ್ಲ ಕ್ಷೇತ್ರಗಳಲ್ಲಿ ಭಾಗವಹಿಸುತ್ತಿದ್ದರ ಜೊತೆಗೆ ಉನ್ನತ ಸ್ಥಾನ ಹೊಂದಿದ್ದರೆನ್ನುವುದು ತಿಳಿದುಬರುತ್ತದೆ. ಅಲ್ಲದೆ ಅವರಿಗೆ ಕೌಟುಂಬಿಕ ಕೆಲಸದಲ್ಲಿ ತರಬೇತಿ ಜೊತೆಗೆ ಗಂಡುಮಕ್ಕಳಿಗೆ ದೊರೆಯುವ ಶಿಕ್ಷಣವೇ ದೊರೆಯುತ್ತಿತ್ತು. ಹಾಗಾಗಿ ಸ್ತ್ರೀಯರು ಸಾಹಿತ್ಯ, ಸಂಗೀತ, ನಾಟಕ, ಕ್ರೀಡೆ, ಯುದ್ಧ, ಎಲ್ಲ ರಂಗಗಳಲ್ಲಿಯೂ ಪುರುಷರಂತೆ ಭಾಗವಹಿಸುತ್ತಿದ್ದರೆನ್ನುವುದು ತಿಳಿದುಬರುತ್ತದೆ. ಇದರಿಂದ ದಕ್ಷಿಣದಲ್ಲಿ ದ್ರಾವಿಡರ ಮಾತೃಪ್ರಧಾನ ವ್ಯವಸ್ಥೆ ಈ ಕಾಲಘಟ್ಟದಲ್ಲಿ ಸುಭದ್ರವಾದ ಅಸ್ಥಿತ್ವವನ್ನು ಹೊಂದಿತ್ತೆನ್ನಬಹುದು. ನಂತರ ಶಾತವಾಹನರ ಆಳ್ವಿಕೆ ಆರಂಭದ ಕಾಲದಿಂದ ಕ್ರಿ.ಶ. ಒಂಬತ್ತನೆ ಶತಮಾನದವರೆಗೆ ಹಲವಾರು ರಾಜಮನೆತನಗಳು ಕರ್ನಾಟಕವನ್ನು ಆಳ್ವಿಕೆ ಮಾಡಿದವು. ಶಾತವಾಹನರ ಮೇಲೆ ಅನ್ಯ ಸಂಸ್ಕೃತಿ ಪ್ರಭಾವ ಇರುವುದು ಕಂಡುಬರುತ್ತದೆ. ದ್ರಾವಿಡರ ಕೃಷಿ ಸಂಸ್ಕೃತಿ ಇಲ್ಲಿ ಕಂಡುಬರದೆ ವ್ಯಾಪಾರಿ ಸಂಸ್ಕ್ರತಿ ಪ್ರಧಾನವಾಗಿರುವುದು ಕಂಡುಬರುತ್ತದೆ.

ಈ ಕಾಲಾವಧಿಯಲ್ಲಿ ಸ್ತ್ರೀಯರನ್ನು ಕುರಿತು ಶಾಸನೋಕ್ತವಾಗಿ ಅಧ್ಯಯನ ಮಾಡಲಾಗಿ ಆರಂಭದ ಶಾತವಾಹನರ ಕಾಲದಲ್ಲಿ ಮಾತೃಪ್ರಧಾನ ವ್ಯವಸ್ಥೆ ಇನ್ನು ಅಸ್ಥಿತ್ವದಲ್ಲಿದ್ದುದರ ಕುರಿತು ಕುರುಹುಗಳನ್ನು ಕಾಣಬಹುದು. ತಾಯಿ ಹೆಸರಿನಿಂದ ಮಕ್ಕಳ ಗುರುತಿಸುವಿಕೆ ಇತ್ತು. ಅಂದರೆ ಆಸ್ತಿ ಹಕ್ಕು ಹೆಣ್ಣು ಮಕ್ಕಳಿಗೆ ಸೇರಿರುವ ಸಾಧ್ಯತೆ ಇದೆ. ಧರ್ಮಪ್ರಸಾರ ಮಾತ್ರ ಮುಖ್ಯವಾಗಿದ್ದರಿಂದ ಭೂಮಿ ಇನ್ನು ದಾನದತ್ತಿಗೆ ಬಳಕೆಯಾಗುತ್ತಿರಲಿಲ್ಲ. ಸ್ತ್ರೀಯರು ದಾನ ದತ್ತಿ ನೀಡುವಲ್ಲಿ ಆರ್ಥಿಕ ಸ್ವಾಮ್ಯತೆ ಇದ್ದಂತೆ ಕಂಡುಬರುತ್ತದೆ.

ಶಾತವಾಹನರ ನಂತರ ಆಳ್ವಿಕೆಗೆ ಬಂದ ಕದಂಬರ ಕಾಲಕ್ಕೆ ಮತ್ತೆ ಕೃಷಿ ಪ್ರಧಾನ ಉತ್ಪಾದನಾಂಗವಾಗಿ ಭೂಮಿಗೆ ಎಲ್ಲಿಲ್ಲದ ಬೇಡಿಕೆ ಬಂದು, ಜಮಿನ್ದಾರಿ ಪದ್ಧತಿ ಆರಂಭವಾಗಿರುವ ಸಾಧ್ಯತೆ ಇದೆ. ಇದರಿಂದ ದುಡಿಯುವ ಶ್ರಮಿಕ ವರ್ಗ ಉದಯವಾಗಿ ಮುಂದೆ ವರ್ಗ ಸಂಘರ್ಷಕ್ಕೆ ದಾರಿಯಾಯಿತು. ಇಲ್ಲಿಯವರೆಗೂ ಧರ್ಮ ಪ್ರಸಾರ ಮಾತ್ರ ಮುಖ್ಯವಾಗಿದ್ದು ಈ ಕಾಲದಿಂದ ಧರ್ಮವೆಂದರೆ ವೈಯಕ್ತಿಕ ಸ್ವಾರ್ಥಕ್ಕೆ ಕೂಡಿದ್ದು ಅದಕ್ಕಾಗಿ ದೇವರನ್ನು ತೃಪ್ತಿ ಪಡಿಸಲು ದೇವರು ಮತ್ತು ದೇವಾಲಾಯಕ್ಕೆ ಭೂಮಿರೂಪದಲ್ಲಿ ಸಂಪತ್ತು ಹರಿದು ಬಂದು ದೇವಾಲಯಗಳು ಸಂಪತ್ತಿನಿಂದ ಕೂಡಿದ, ಇಡೀ ಸಮಾಜವನ್ನು ನಿಯಂತ್ರಿಸುವ ಧಾರ್ಮಿಕ ಸಂಸ್ಥೆಯಾಗಿ ಪರಿವರ್ತನೆಗೊಂಡಿರುವುದು ಕಂಡು ಬರುತ್ತದೆ. ನಂತರ ಬಂದ

ಮರ್ದಿನಿಯಂತಹ ಶಕ್ತಿದೇವತೆಗಳ ಆರಾಧನೆ ಜೊತೆಗೆ ಸಪ್ತಮಾತೃಕೆಯರು, ಲಜ್ಜಾಗೌರಿ ಆರಾಧನೆ ಕೂಡ ಜಾರಿಯಲ್ಲಿದ್ದುದು ಕಂಡುಬರುತ್ತದೆ. ನಂತರ ಬಂದ ರಾಜಮನೆತನಗಳ ಆಳ್ವಿಕೆ ಕಾಲದಲ್ಲಿ ಸ್ತ್ರೀಯರು ಆಡಳಿತ, ಧರ್ಮ ಮತ್ತು ಸಮಾಜದ ಯಾವುದೇ ಕ್ಷೇತ್ರದಲ್ಲಿ ಉನ್ನತ ಸ್ಥಾನಗಳನ್ನು ಹೊಂದಿದ್ದರ ಬಗ್ಗೆ ಅಷ್ಟಾಗಿ ಮಾಹಿತಿ ಕಂಡುಬರುವುದಿಲ್ಲ. ದೇವಾಲಯಗಳಿಗೆ ದಾನ ದತ್ತಿ ನೀಡುವಂತಹ ಕಾರ್ಯಬಿಟ್ಟರೆ ಸ್ತ್ರೀಯರಿಗೆ ಅಂತಹ ಪ್ರಾಧಾನ್ಯತೆ ಇರುವುದು ಕಂಡುಬರುವುದಿಲ್ಲ.

ಪಿತೃಸತ್ತೆಯಲ್ಲಿ ಮಹಿಳೆಯರಿಗೆ ಅಧಿಕಾರಗಳು ವಂಶಪರಂರವಾಗಿ ಸಹಜವಾಗಿ ಬರುವುದಿಲ್ಲ. ಶಾಸನಗಳಲ್ಲಿ ರಾಣಿಯರು ಮೇಲ್ವರ್ಗದ ಮಹಿಳೆಯರು ಉನ್ನತ ಅಧಿಕಾರದಲ್ಲಿದ್ದರು ಎಂದು ಮಾಹಿತಿ ನೀಡುವುದರ ಮೂಲಕ ಅವರಿಗೆ ರಾಜಕೀಯ ರಂಗದಲ್ಲಿ ಪ್ರಾತಿನಿಧ್ಯ ಇತ್ತು ಎಂದು ಉಲ್ಲೇಖಿಸುತ್ತವೆಯಾದರೂ, ಯಾವ ಪ್ರಮಾಣದಲ್ಲಿ ಎಂಬ ಪ್ರಶ್ನೆ ಮೂಡುತ್ತದೆ. ಪುರುಷರಷ್ಟೇ ಸಂಖ್ಯೆಯಲ್ಲಿರುವ ಮಹಿಳೆಯರಿಗೆ ಅಧಿಕಾರ ದೊರೆತಿರುವುದು ಪ್ರತಿಶತ ಎಷ್ಟು ಮಹಿಳೆಯರಿಗೆ ಎಂಬ ಪ್ರಶ್ನೆಗೆ ಉತ್ತರವಿಲ್ಲ. ಏಕೆಂದರೆ ಮಹಿಳೆಯರಿಗೆ ಪುರುಷರಂತೆ ಅಧಿಕಾರದಲ್ಲಿ ಸಮಾನ ಸ್ಥಾನಮಾನಗಳು ದೊರೆತಿರುವುದು ಕಂಡುಬರುವುದಿಲ್ಲ. ಸ್ವತಂತ್ರವಾಗಿ ಪರಮಾಧಿಕಾರದಿಂದ ಆಳ್ವಿಕೆ ಮಾಡಿದ ಸ್ತ್ರೀಯರು ದೊರಕುವುದಿಲ್ಲ. ಅವರಿಗೆ ದೊರೆತ ಸ್ಥಾನ ಅಗ್ರಹಾರ ಅಥವಾ ಯಾವುದಾದರು ಒಂದು ನಾಡಿನ ಉಸ್ತುವಾರಿ ಅಷ್ಟೇ, ಅದು ರಾಜ ನೇಮಿಸಿದ ಅಧಿಕಾರಿಗಳ ನಿಯಂತ್ರಣದಲ್ಲಿರುತಿತ್ತು. ಯಾವುದೇ ಕಾರಣದಿಂದ ಅಧಿಕಾರ ದೊರೆತಿದ್ದರೂ ತಮಗೆ ದೊರೆತ ಸೀಮಿತ ಅವಕಾಶವನ್ನೇ ಸಮರ್ಥವಾಗಿ ನಿಭಾಯಿಸುವುದರ ಮೂಲಕ ಸ್ತ್ರೀಯರಿಗೆ ಯಾವುದೇ ಉನ್ನತ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸುವ ಸಾಮರ್ಥ್ಯವಿದೆ ಎಂಬುದನ್ನು ಸಾಬೀತುಮಾಡಿದ್ದಾರೆ. ಇದರಿಂದ ನಮಗೆ ತಿಳಿದುಬರುವುದೇನೆಂದರೆ ಸ್ತ್ರೀಯರಿಗೆ ಸಾಮರ್ಥ್ಯವಿದೆ, ಆದರೆ ಅವರಿಗೆ ಪ್ರಾತಿನಿಧ್ಯ ದೊರೆತಿರುವುದಿಲ್ಲ ಎಂಬುದು ಕಂಡುಬರುತ್ತದೆ.

ರಾಜ್ಯವ್ಯವಸ್ಥೆಯ ಕಾಲಕ್ಕೆ ದೇವಾಲಯಗಳಿಗೆ ಅತಿಹೆಚ್ಚು ದಾನ ದತ್ತಿಗಳು ಹರಿದುಬಂದಿರುವುದನ್ನು ನಾವು ಶಾಸನಗಳ ಮೂಲಕ ಕಂಡುಕೊಂಡಿದ್ದೇವೆ. ದಾನ ದತ್ತಿಯ ಹಿಂದಿನ ಉದ್ದೇಶ ಒಳಿತು, ಮೋಕ್ಷ, ಪಾಪಕ್ಷಯದಂತಹ ವಿಚಾರಗಳಿರುವುದೇ ಆದರೂ ಅದರ ಹಿಂದಿರುವುದು ಆರ್ಥಿಕ ಶಕ್ತಿ ಪ್ರಶ್ನೆ ಬಂದಾಗ ಶಾಸನಗಳ ಉಲ್ಲೇಖದ ಪ್ರಕಾರ ದಾನ ದತ್ತಿಗಳನ್ನು ದೇವಾಲಯಗಳಿಗೆ ಕೊಡುತ್ತಿದ್ದರೆಂದರೆ ಸ್ತ್ರೀಯರಿಗೆ ಆರ್ಥಿಕ ಸ್ವಾಮ್ಯವಿತ್ತು ಎಂಬ ಅಂಶವನ್ನು ಪ್ರತಿನಿಧಿಸುತ್ತವೆ. ಪುರುಷ ಪ್ರಧಾನವಾಗಿರುವ ಸಮಾಜದಲ್ಲಿ ಯವುದೇ ವರ್ಗದ ಸ್ತ್ರೀಯರನ್ನು ನಾವು ಉಲ್ಲೇಖಿಸುವಾಗಲೂ ಅಲ್ಲಿ ಯಜಮಾನ ಪುರುಷನೇ ಆಗಿರುವುದರಿಂದ ದಾನ ನೀಡುವಾಗ ಒಪ್ಪಿಗೆ ಪಡೆದೇ ದಾನ ನೀಡಬೇಕಾಗುತ್ತದೆ. ಅಂದ ಮೇಲೆ ದಾನದ

ಒಡತಿ ಸ್ತ್ರೀಯಾಗಿರುವುದಿಲ್ಲ. ತಂದೆ ತಾಯಿಯಿಂದ ಬಳುವಳಿಯಾಗಿ ಆಸ್ತಿ ದೊರೆತ್ತಿದ್ದರೆ ಅದನ್ನು ದೇವಾಲಯಗಳಿಗೆ ದಾನದ ರೂಪದಲ್ಲಿ ಕೊಡುತ್ತಿದ್ದರು. ಅಂದರೆ ಸ್ತ್ರೀಯರು ಆಸ್ತಿ ಮತ್ತು ಸಂಪತ್ತಿನ ರೂಪದಲ್ಲಿರುವ ಯಾವುದರ ಒಡೆತನವನ್ನು ಹೊಂದುತ್ತಿರಲಿಲ್ಲ. ಹಾಗಾಗಿ ದೇವಾಲಯಗಳಿಗೆ ಸ್ತ್ರೀಯರು ನೀಡುತ್ತಿದ್ದ ದಾನ ದತ್ತಿಗಳು ಪುರುಷರ ಯಜಮಾನ್ಯಕ್ಕೆ ಸೇರಿದವು. ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರವಿರಲಿಲ್ಲ ಎಂಬುದು ಕಂಡುಬರುತ್ತದೆ. ಮಾತೃಪ್ರಧಾನ ಸಂಸ್ಕೃತಿಯ ಕಾಲದಿಂದಲೂ ವೃತ್ತಿ ಮತ್ತು ಉಪಕಸುಬುಗಳು ಹೆಣ್ಣಿನ ಕ್ಷೇತ್ರಗಳು ಅವಳದೇ ಶ್ರಮ ಮತ್ತು ಯಜಮಾನ್ಯವನ್ನು ಹೊಂದಿದ್ದ ಕ್ಷೇತ್ರಗಳು ಮುಂದೆ ಪಿತೃಪ್ರಧಾನ ವ್ಯವಸ್ಥೆಯ ಕಾಲಕ್ಕೆ ಶ್ರಮ ಅವಳದಾದರು ಯಜಮಾನ್ಯ ಮಾತ್ರ ಪುರಷನದಾಯಿತು. ಯಾವ ಕಾಲಕ್ಕೂ ಕೃಷಿಯಲ್ಲಿ ಮಹಿಳೆಯರದು ಪ್ರಮುಖ ಪಾತ್ರವಾಗಿದೆ. ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ತೊಂಬತ್ತರಷ್ಟು ಮಹಿಳೆಯರು ಕೃಷಿಯಲ್ಲಿ ತೊಡಗಿರುವುದರಿಂದ ಅಲ್ಪಮಟ್ಟಿಗೆ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿರುತ್ತಾರೆ. ಮೇಲ್ವರ್ಗದ ಮಹಿಳೆಯರು ನೇರವಾಗಿ ಕೃಷಿಚಟುವಟಿಕೆಯಲ್ಲಿ ಪಾಲ್ಗೊಳ್ಳದೇ ಹೋದರು ಪೋಷಣೆಯನ್ನು ನೀಡಿದ್ದಾರೆ. ಕೆರೆಗಳು ಸ್ತ್ರೀಯರ ಕೃಷಿ ಆಸಕ್ತಿಯ ಕಾರಣವಾಗಿ ನಿರ್ಮಾಣವಾದಂತವುಗಳು. ಜೊತೆಗೆ ಸಾರ್ವಜನಿಕರಿಗೆ ಉಪಯೋಗಕ್ಕಾಗಿ ಬಾವಿ, ಛತ್ರ, ಅಗ್ರಹಾರಗಳು ಮುಂತಾದ ಕಾರ್ಯಗಳಿಗೆ ದಾನ ನೀಡುವುದರ ಮೂಲಕ ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ. ಈ ಕಾರ್ಯಗಳ ಹಿಂದೆ ಪುರಷನದೇ ಆರ್ಥಿಕ ಒಡೆತನವಿದ್ದರೂ ಸ್ತ್ರೀಯರಿಗೆ ಅವಕಾಶ ದೊರೆತದ್ದೇ ಆಗಿದ್ದರೆ. ಇನ್ನೂ ಹೆಚ್ಚಿನ ಸಮಾಜ ಉಪಯೋಗಿ ಕಾರ್ಯಗಳನ್ನು ಮಾಡುತ್ತಿದ್ದರೆನ್ನುವುದು ಕಂಡುಬರುತ್ತದೆ.

ಸ್ತ್ರೀಯರನ್ನು ಹಲವಾರು ಕ್ಷೇತ್ರಗಳಿಂದ ವಂಚಿತರನ್ನಾಗಿ ಮಾಡಲಾಗಿದೆ ಅದರಲ್ಲಿ ಶಿಕ್ಷಣವೂ ಒಂದು, ಹೆಣ್ಣುಮಕ್ಕಳಿಗೆ ಶಿಕ್ಷಣ ದೊರೆತದ್ದೇ ಆಗಿದ್ದರೆ ಅವಳು ತನ್ನ ಹಕ್ಕು ಮತ್ತು ಸ್ವತಂತ್ರ ಅಸ್ಥಿತ್ವದೊಂದಿಗೆ ಪ್ರಸ್ತುತ ಜಗತ್ತಿನಲ್ಲಿ ಜೀವಿಸುತ್ತಿದ್ದಳು. ಸಾಮಾನ್ಯ ವರ್ಗದ ಮಹಿಳೆಯರಿಗೆ ಶಿಕ್ಷಣ ನಿಶಿದ್ಧವಾಗಿತ್ತು. ಶಾಸನಗಳ ಮಾಹಿತಿ ಆಧಾರದ ಮೇಲೆ ಸ್ತ್ರೀಯರಿಗೆ ಶಿಕ್ಷಣದಲ್ಲಿ ಪ್ರಾಧಾನ್ಯತೆ ಇತ್ತೆಂಬ ಹೇಳಿಕೆ ಬರೀ ಮೇಲ್ವರ್ಗದ ಮಹಿಳೆಯರನ್ನು ಉದ್ದೇಶದಲ್ಲಿಟ್ಟುಕೊಂಡು ಹೇಳಿರುವಂತಹದೇ ಹೊರತು ಸಾಮಾನ್ಯ ಮಹಿಳೆಯರನ್ನಲ್ಲ. ಹೆಣ್ಣನ್ನು ಕುಟುಂಬದಲ್ಲಿ ಭಾವನಾತ್ಮಕ ವಲಯದೊಳಗಿರಿಸಿ ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿದರು. ಗಂಡು ಮಕ್ಕಳಿಗೆ ದೊರತಂತೆ ಹೆಣ್ಣುಮಕ್ಕಳಿಗೆ ಶಿಕ್ಷಣದ ಜೊತೆಗೆ ಯುದ್ಧ ಕಲೆಯಂತಹ ತರಬೇತಿ ದೊರೆತದ್ದೇ ಆಗಿದ್ದರೆ. ಪೆಣ್ಬುಯಲ್‌ನಂತಹ ಘಟನೆಗಳು ಜರುಗುವ ಸಂದರ್ಭಗಳನ್ನು ಧೈರ್ಯವಾಗಿ ಎದುರಿಸುತ್ತಿದ್ದರು. ಮತ್ತು ಅವಳು ತನ್ನ ರಕ್ಷಣೆಗೆ ಗಂಡನ್ನು ನಿರೀಕ್ಷಿಸಬೇಕಿಲ್ಲ. ನಿಜವಾಗಿಯೂ ಅವಳಿಗೆ ರಕ್ಷಣೆ ನೀಡುವುದಾದರೆ ಆಪತ್ ಕಾಲದಲ್ಲಿ ರಕ್ಷಿಸುವುದರ ಬದಲು ತಾನೇ ಆಪತ್ತಿನ ವಿರುದ್ಧ ಹೋರಾಡಿ ಪಾರಾಗುವ ವಿದ್ಯೆಯನ್ನು ಕಲಿಸಿಕೊಂಡಬೇಕಿತ್ತು. ಆದರೆ ಸಮಾಜಕ್ಕೆ ಅದು ಬೇಕಿರಲಿಲ್ಲ. ಏಕೆಂದರೆ ಯಾವಾಗಲೂ ಅವಳು ತನ್ನ ರಕ್ಷಣೆಯಲ್ಲಿಯೇ ಇರಬೇಕೆಂಬುದು

ಅವನ ಉದ್ಧೇಶವಾಗಿತ್ತು ಅಲ್ಲಿ ತನ್ನ ವೀರತನ ಮೆರೆಯುವ ಉದ್ದೇಶ ಅವರದಾಗಿತ್ತು ಎಂಬ ಅಂಶ ಕಂಡು ಬರುವುದು.

ವೈದಿಕರು ಸ್ತ್ರೀಯರಿಗೆ ಧರ್ಮದ ಮೂಲಕ ಸಮಾಜದಲ್ಲಿ ಕಟ್ಟುಪಾಡುಗಳನ್ನು ವಿಧಿಸಿದರು. ಹೆಣ್ಣಿಗಾಗಿ ನೈತಿಕತೆ, ಶಾಲೀನತೆ, ಪತಿವ್ರತಾ ಧರ್ಮ ಹೀಗೆ ಹಲವಾರು ಕಟ್ಟುಪಾಡುಗಳು ರಚನೆಯಾದವು. ಇವು ಗೃಹಿಣಿಯರಿಗೆ ಕಡ್ಡಾಯವಾಗಿದ್ದರೆ, ವೇಶ್ಯೆಯರು ಮತ್ತು ಪಾತರದವರಿಗೆ ಇಂಥ ನಿಯಮಗಳು ಕಡ್ಡಾಯವಾಗಿರಲಿಲ್ಲ. ತಮ್ಮ ಸ್ವಾರ್ಥಕ್ಕಾಗಿ ಬೇಕೆಂದಾಗ ಆಚೆ ತಂದಿರುವರು. ಯಾರೇ ಆಗಿದ್ದರು ತಾವು ಪೋಷಣೆ ನೀಡುತ್ತಿದ್ದ ಕಾರಣಕ್ಕೆ ತಮಗೆ ನಿಷ್ಠೆಯಿಂದ ಇರಬೇಕಿತ್ತು. ಇವರು ವಿವಾಹ ಬಂಧನದಿಂದ ಆಚೆ ಇದ್ದು, ಬಯಸಿದಾಗ ಸೇವೆ ಸಲ್ಲಿಸುವ ಆರ್ಥಿಕವಾಗಿ ಕೆಳಸಮುದಾಯದವರಾಗಿದ್ದರು. ನೃತ್ಯವನ್ನು ತಮ್ಮ ವಂಶಮೂಲ ವೃತ್ತಿಯನ್ನಾಗಿ ಹೊಂದಿದ್ದವರಾಗಿದ್ದರು. ಅವರಿಗೆ ಭೂಮಿಯನ್ನು ದಾನ ದತ್ತಿ ರೂಪದಲ್ಲಿ ಕೊಡುವುದರ ಮೂಲಕ ಮೇಲ್ವರ್ಗದವರು ಮತ್ತು ಜಮಿನ್ದಾರರು ಅವರ ಆರ್ಥಿಕ ದೌರ್ಬಲ್ಯವನ್ನು ತಮ್ಮ ಸ್ವಾರ್ಥಕ್ಕಾಗಿ ಬಳಕೆ ಮಾಡಿಕೊಂಡರು. ಆರಂಭದಲ್ಲಿ ಇವರಿಗೂ ಗೌರವಾದರಗಳು ದೊರೆತಿದ್ದು ನಂತರದ ಕಾಲದಲ್ಲಿ ಇವರ ಸ್ಥಾನದಲ್ಲಿ ಇಳಿಮುಖವಾಯಿತು. ಕಾರಣ ಅವರಿಗೆ ದೊರಕುತ್ತಿದ್ದ ವೃತ್ತಿ ಗೌರವಗಳು ಸಮಾಜದಿಂದ ದೊರಕದೆ ಕೀಳಾಗಿ ನೆಡೆಸಿಕೊಳ್ಳಲು ಆರಂಭಿಸಿದರು. ವಿಜಯನಗರದ ಕಾಲಕ್ಕೆ ಅವರು ರಾಜ್ಯಾದಾಯದ ಮೂಲವಾಗಿ ಪರಿಗಣಿಸಿದ್ದರಿಂದ ಹಣಗಳಿಕೆ ಮುಖ್ಯವಾಗಿ ಅದೊಂದು ಅನಿಷ್ಟಪದ್ಧತಿಯಾಗಿ ವಿಭಿನ್ನ ಸ್ವರೂಪದಲ್ಲಿ ಸಮಾಜದಲ್ಲಿ ಇಂದಿಗೂ ಜಾರಿಯಲ್ಲಿರುವುದು ಕಂಡುಬರುತ್ತದೆ.

ಪಿತೃ ಪ್ರಧಾನ ಸವಾಜದಲ್ಲಿ ಪ್ರಾಚೀನ ಕಾಲದಿಂದಲೂ ಸ್ತ್ರೀಯರನ್ನು ಕೇಂದ್ರವಾಗಿರಿಸಿಕೊಂಡು ಹಲವಾರು ನಿಯಮಗಳು ಸೃಷ್ಟಿಯಾಗಿವೆ. ಅದರಲ್ಲೂ ಗೃಹಿಣಿಯರಿಗೆ ಸತಿಧರ್ಮದ ಹೆಸರಿನಲ್ಲಿ ಕುಟುಂಬದಲ್ಲಿ ಪತಿ ಜೀವಿತದವರಿಗೆ ಮಾತ್ರ ಬಳಕೆ ಮಾಡಿಕೊಂಡು ನಂತರ ಜೀವಂತವಾಗಿ ದಹಿಸಿದರು. ಶತ ಶತಮಾನಗಳಿಂದಲೂ ಹೆಣ್ಣು ನಿಯಮಗಳಿಗೆ ತಲೆಬಾಗಿಯೇ ನೆಡೆದುಕೊಂಡಿರುವಳು ಅದಕ್ಕೆ ಸಮಾಜ ರೂಪಿಸಿದ ನಿಯಮಗಳು ಧರ್ಮದ ಮೂಲಕ ಸಹಜವೆಂಬಂತೆ ಇದ್ದವು. ಸ್ವರ್ಗ ನರಕ, ಇಹ ಪರವೆಂಬ ಮಿತ್ಯ ಲೋಕಗಳನ್ನು ಸೃಷ್ಟಿಸಿ ಅದರಲ್ಲಿ ಭಾವನಾತ್ಮಕವಾಗಿ ಬಂಧಿಸಿದ. ಹೆಣ್ಣಿಗೆ ಬಾಲ್ಯದಿಂದಲೇ ಆದರ್ಶ ಮಹಿಳೆಯರ ಕಥೆಗಳ ಮೂಲಕ ಮಾನಸಿಕ ತಯಾರಿ ನೆಡೆಯುತ್ತಿತ್ತು. ಆದರೆ ಇದಕ್ಕೆ ಇದ್ದ ಸಮಾಜದ ಸ್ವಾರ್ಥ ಕಾರಣಗಳು ಹಲವಾರು ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಯಿತು.

ವೈದಿಕರು ಸ್ತ್ರೀಯರನ್ನು ಸಮಾನಲಿಂಗೀಯ ದೃಷ್ಟಿಕೋನದಿಂದ ಎಂದೂ ನೋಡಿಲ್ಲ. ಇಲ್ಲಿ ಪುರುಷನಿಗಾಗಿ ಯಾವ ನಿಯಮಗಳು ಸೃಷ್ಟಿಯಾಗಿಲ್ಲ. ಧರ್ಮದಲ್ಲಿ ಹೆಣ್ಣಿನ ವಿಚಾರ

ಬಂದಾಗ ಆದಷ್ಟು ಕಟ್ಟುಪಾಡುಗಳಿಂದ ಕಟ್ಟಿಹಾಕಲು ಪ್ರಯತ್ನಿಸಿವೆ. ಅವಳನ್ನು ವ್ಯಕ್ತಿ ಸ್ಥಿತಿಯಲ್ಲಿ ನೋಡದೆ ವಸ್ತುಸ್ಥಿತಿಯಲ್ಲಿ ನೋಡಿ ಸಮಯ ಸಂದರ್ಭಕ್ಕೆ ತಕ್ಕಂತೆ ಬಳಕೆ ಮಾಡಿಕೊಂಡಿವೆ. ಅವರು ಕರೆಯುವ ಪಾಪವೆಂಬ ಕೃತ್ಯಕ್ಕೆ ಗಂಡಿಗೆ ಕ್ಷಮೆ ಬೇಕಿಲ್ಲ ಆದರೆ ಹೆಣ್ಣಿಗೆ ಕ್ಷಮ್ಯವೆಂಬುದೇಇಲ್ಲ. ಪಾಪದ ಸಂಪೂರ್ಣ ಹೊಣೆ ಹೆಣ್ಣಿನದಾಗಿರುತ್ತದೆ. ತೊತ್ತು, ಕನ್ಯಾದಾನ ಇವೆಲ್ಲ ತಾನು ಪುಣ್ಯ ಸಂಪಾದನೆಗಾಗಿ ದೇವರ ಸೇವೆಯ ಹೆಸರಿನಲ್ಲಿ ದೇವರಿಗೆ ಬಿಡುವುದರ ಮೂಲಕ ಅವರ ವೈಯಕ್ತಿಕ ಬದುಕನ್ನು ಕಿತ್ತುಕೊಂಡರು. ಧರ್ಮ, ಸಮಾಜ, ಇವೆಲ್ಲ ತಮ್ಮ ಅನುಕೂಲಕ್ಕೆ ರೂಪಿಸಿದ ನಿಯಮಗಳೇ ಹೊರತು ಇವು ಯಾವು ದೇವರಿಂದ ಸೃಷ್ಟಿಯಾದವಲ್ಲ. ಧರ್ಮ ವರ್ಗ, ಲಿಂಗ, ಜಾತಿ ರಹಿತವಾದದ್ದು.

**ಫಲಿತಗಳು**

ಶಾಸನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ ಎಂಬ ಶೀರ್ಷಿಕೆ ಅಡಿಯಲ್ಲಿ ಮಹಿಳೆಯರ ಸ್ಥಾನ ಮತ್ತು ಅವರ ಸಾಮಾಜಿಕ ಸಹಭಾಗಿತ್ವ ಹೇಗಿತ್ತು? ಹೆಣ್ಣು ತನ್ನದೇ ಅಸ್ತಿತ್ವ ಹೊಂದಿದ್ದಳೇ ಅಥವಾ ಗಂಡಿನ ಅಸ್ತಿತ್ವದ ಮೇಲೆ ಅವಳ ಜೀವನ ರಚನೆಯಾಗಿತ್ತೇ ಎಂಬುದನ್ನು ಕುರಿತು ಅಧ್ಯಯನ ಮಾಡಲಾಗಿದೆ. ಅದಕ್ಕೆ ಶಾಸನಗಳನ್ನು ಪ್ರಮುಖ ಆಧಾರವಾಗಿಟ್ಟುಕೊಳ್ಳಲಾಗಿದೆ. ಮಹಿಳೆಯರೆಂದ ತಕ್ಷಣ ನಮ್ಮ ಯೋಚನಾಲಹರಿಯಲ್ಲಿ ಹರಿದುಹೋಗುವವರು ಸಾಮಾನ್ಯ ಮಹಿಳೆಯರು. ಆದರೆ ಶಾಸನಗಳಲ್ಲಿ ಮಹಿಳೆಯರ ಕುರಿತು ಅಧ್ಯಯನ ಎಂದ ತಕ್ಷಣ ಸಂಶೋಧನಾ ವಲಯದಲ್ಲಿರುವ ಎಲ್ಲರಿಗೂ ತಕ್ಷಣಕ್ಕೆ ಕಣ್ಮುಂದೆ ಬರುವುದು ಮೇಲ್ವರ್ಗದ ಮತ್ತು ರಾಣಿಯರು ಧಾರ್ಮಿಕ ಚಟುವಟಿಕೆಗಳಿಗೆ, ದೇವಾಲಯಗಳಿಗೆ ನೀಡಿದ ದಾನ ದತ್ತಿ ಕುರಿತಾಗಿ ಇರುವ ಮಾಹಿತಿ. ಎಲ್ಲೋ ಕೆಲವರು ಆಡಳಿತ ನಡೆಸಿದ್ದರೆಂಬುದು, ಅವರು ಪಡೆದ ಶಿಕ್ಷಣ ಇಷ್ಟೇ.

ಶಾಸನಗಳಲ್ಲಿ ಉಲ್ಲೇಖಿತವಾದ ವಿಚಾರಗಳೆಲ್ಲ ರಾಜರ ಪರವಾಗಿ ಇರುವಂತಹವು. ಅವು ರಾಜರಿಗೆ ಮತ್ತು ಸಮಾಜಕ್ಕೆ ಸಂಬಂಧಿಸಿದ ನಕಾರಾತ್ಮಕ ವಿಚಾರಗಳ ಸೊಲ್ಲನ್ನು ಎತ್ತುವುದಿಲ್ಲ ಮತ್ತು ಎತ್ತಕೂಡದು. ಇನ್ನು ಸ್ತ್ರೀಯರ ವಿಚಾರ ಹೇಳುವುದಾದರೆ ಅವರಿಗೆ ದೊರೆತ ಸ್ಥಾನವೆಷ್ಟೋ ಅವರ ಕುರಿತ ಶಾಸನಗಳ ಸಂಖ್ಯೆಯೂ ಅಷ್ಟೇ ರಾಜರು ಮತ್ತು ಮೇಲ್ವರ್ಗದವರ ಕುರಿತಾದ ಮಾಹಿತಿಯನ್ನು ಎತ್ತಿಹಿಡಿಯುವ ಶಾಸನಗಳು ಸಮಾಜದಲ್ಲಿ ಸಾಮಾನ್ಯ ಮಹಿಳೆಯರನ್ನು ಕುರಿತಂತೆ(ಸತಿ ಸ್ಮಾರಕ ಹೊರತುಪಡಿಸಿ) ಹೇಗೆ ತಾನೆ ಅವು ವಿಚಾರಗಳನ್ನು ಪ್ರಸ್ತಾಪಿಸಲು ಸಾಧ್ಯ. ಆದರೂ ನಿರ್ಲಕ್ಷಿತ ಮತ್ತು ಸಾಮಾನ್ಯ ಮಹಿಳೆಯರ ವಿಷಯಗಳನ್ನು ಕುರಿತಾಗಿ ಶಾಸನಗಳಲ್ಲೇ ಮಾಹಿತಿಯನ್ನು ಗುರುತಿಸಿ ಅಂತಹ ಅಂಶಗಳನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಶಾಸನಗಳಲ್ಲಿ ಗಮ್ಯವೆಂದು ಪರಿಗಣಿಸಿದ ವಿಚಾರವನ್ನು ಇಲ್ಲಿ ಅಗಮ್ಯವಾಗಿ ಪರಿಗಣಿಸುವ ಮೂಲಕ ಸತ್ಯಾಸತ್ಯತೆಯನ್ನು ವಿಮರ್ಶಾತ್ಮಕವಾಗಿ

ಅಧ್ಯಯನ ಮಾಡಲಾಗಿದೆ. ಸ್ತ್ರೀಯರಿಗೆ ಇತಿಹಾಸದಲ್ಲಿ ಉನ್ನತ ಸ್ಥಾನಮಾನಗಳನ್ನು ಕಲ್ಪಿಸಿಕೊಡಲಾಗಿತ್ತು. ಅವರೆಲ್ಲ ಪುರುಷರಂತೆ ಆಡಳಿತದ ವಿವಿಧ ವಿಭಾಗಗಳಲ್ಲಿ ಉನ್ನತ ಸ್ಥಾನ ಹೊಂದಿದ್ದರು. ದಾನ ದತ್ತಿ ನೀಡುತ್ತಿದ್ದರಿಂದ, ಧಾರ್ಮಿಕ ಸ್ವಾತಂತ್ರ್ಯವಿತ್ತು. ರಾಣಿಯರಿಗೆಶಿಕ್ಷಣ ದೊರೆಯುತ್ತಿದ್ದರಿಂದ, ಸ್ತ್ರೀಯರು ಮುಕ್ತವಾಗಿ ಶಿಕ್ಷಣವನ್ನು ಪಡೆಯುತ್ತಿದ್ದರು. ಒಟ್ಟಿನಲ್ಲಿ ಅವರಿಗೆ ಪುರುಷರ ಸರಿಸಮಾನ ಸ್ಥಾನ ಮಾನ ಕೊಡಲಾಗಿತ್ತು ಎಂದು ಹೇಳಿ ಉಪಸಂಹಾರ ಮಾಡಲಾಗುತ್ತದೆ.

೦೧] ಆದಿಮಾನವ ಒಂದು ಕಡೆ ನೆಲೆ ನಿಂತಿದ್ದೇ ಸ್ತ್ರೀ ಕೃಷಿ ಸಂಶೋಧನೆ ಕಾರಣದಿಂದ. ಅವಳು ತನ್ನ ಸುತ್ತಲಿನ ಅಲ್ಪ ಸ್ಥಳದಲ್ಲೇ ಆಹಾರಕ್ಕೆ ಅವಶ್ಯಕ ಸಸ್ಯಗಳನ್ನು ಬೆಳೆದಳು. ಮಾನವ ಒಂದು ಕಡೆ ನೆಲೆ ನಿಲ್ಲಲು ಸಂತಾನ ಲಾಲನೆ ಪಾಲನೆಯಷ್ಟೇ ಇದೂ ಒಂದು ಪ್ರಮುಖ ಕಾರಣ. ಸಂತಾನದ ಮಹತ್ವ ಅರಿತು ಮಗುವಿನ ಪಾಲನೆಗೆ ಕುಟುಂಬ ಕಟ್ಟಿಕೊಂಡಳು. ಆಗಲೂ ಪುರುಷ ಕುಟುಂಬದಾಚೆ ಆಹಾರ ಸಂಗ್ರಹಣೆಯಲ್ಲೇ ನಿರತನಾಗಿದ್ದು ಅಪ್ರಧಾನನಾಗಿಯೇ ಉಳಿದಿದ್ದ. ಈ ಕಾಲಘಟ್ಟದಲ್ಲಿಯೂ ಸ್ತ್ರೀ ಪ್ರಧಾನಳಾಗಿ ವ್ಯವಸ್ಥೆಯ ಕೇಂದ್ರಬಿಂದುವಾಗಿದ್ದಳು. ಇಲ್ಲಿಯೂ ಮಾನವ ತನ್ನ ಪ್ರಾಥಮಿಕ ಅಗತ್ಯತೆಗಳನ್ನು ಪೂರೈಸಿಕೊಳ್ಳುವುದರಲ್ಲಿ ನಿರತನಾಗಿದ್ದರಿಂದ ಲಿಂಗ ಭಿನ್ನತೆ ಅರಿವು ಮೂಡದ ಕಾರಣಕ್ಕೆ ಜೀವನದಲ್ಲಿ ಸ್ಥಿತಪ್ರಜ್ಞತೆಯನ್ನು ಕಾಣಬಹುದು.

೦೨] ಕಬ್ಬಿಣ ಬಳಕೆಯಿಂದ ಆಯುಧ ತಯಾರಿಸಿ ಅರಣ್ಯವನ್ನು ಕೃಷಿಯೋಗ್ಯ ಭೂಮಿಯನ್ನಾಗಿಸುವಲ್ಲಿ ಯಶಸ್ವಿಯಾಗಿದ್ದರಿಂದ ಕೃಷಿ ಹೆಣ್ಣಿನ ಕೈ ತಪ್ಪಿ ಹೋಯಿತು. ಅವಳೇ ಕೇಂದ್ರವಾಗಿದ್ದ ವ್ಯವಸ್ಥೆ, ನಿಧಾನವಾಗಿ ಪುರುಷ ತನ್ನ ಕಡೆ ಕೇಂದ್ರೀಕರಿಸುವತ್ತ ತೊಡಗಿದ. ಕೃಷಿ ಯಜಮಾನಿಕೆ ಕೈ ತಪ್ಪಿ ಹೋದದ್ದೇ ಸ್ತ್ರೀ ಸ್ಥಾನ ಕಳೆದುಕೊಳ್ಳುವಂತೆ ಮಾಡಿತು. ಕೃಷಿ ಒಂದು ಪ್ರಬಲವಾದ ಆರ್ಥಿಕ ಶಕ್ತಿ. ಇಂಥ ಆರ್ಥಿಕ ಬಲ ಅವಳ ಕೈಬಿಟ್ಟು ಹೋಯಿತು. ಸ್ತ್ರೀ ಆರ್ಥಿಕವಾಗಿ ದೌರ್ಬಲ್ಯ ಹೊಂದಿದ್ದೇ ಮುಂದಿನ ಸಾಮಾಜಿಕ ರಚನೆಯಲ್ಲಿ ತನ್ನ ಸ್ಥಾನವನ್ನು ನಿಧಾನವಾಗಿ ಕಳೆದುಕೊಳ್ಳುವಂತಾಯಿತು.

೦೩] ಆರ್ಥಿಕ ಪ್ರಾಬಲ್ಯ ಹೊಂದಿದ ಪುರುಷಸಮಾಜ ಸ್ತ್ರೀಯರನ್ನು ಸೀಮಿತ ಕಾರ್ಯಕ್ಕೆ ನಿಗದಿ ಮಾಡಿತು. ಸ್ತ್ರೀ ಸಮಾಜ ರಚನೆಯ ಹಂತದಲ್ಲೇ ಸಮಾಜದಿಂದ ದೂರ ಉಳಿಯಬೇಕಾಗಿ ಬಂದಾಗ ಪುರುಷ ಸಾಮಾಜಿಕ ಸಂರಚನೆಯಲ್ಲಿ ತಾನೇ ಮುಖ್ಯವಾಗಿದ್ದರಿಂದ ತನ್ನ ವಿಚಾರಗಳಿಗೆ ಇಲ್ಲಿ ಆದ್ಯತೆಯನ್ನು ಕೊಟ್ಟು ಪುರುಷ ತಾನು ಪ್ರಧಾನವಾಗಿ ಇರುವಂತೆ ನೋಡಿಕೊಂಡಿದ್ದಾನೆ.

ಧರ್ಮವಾಗಲಿ, ಅರ್ಥವಾಗಲಿ, ಆಡಳಿತ, ಅಧಿಕಾರ ಇವೆಲ್ಲ ರಚನೆಯಾಗುವ ಕಾಲಕ್ಕೆ ಪುರುಷನೇ ಪ್ರಧಾನನಾಗಿದ್ದರಿಂದ ಇಂದು ಅವೆಲ್ಲ ಅವನ ಪರವಾಗಿಯೇ ರಚನೆಯಾಗಿವೆ. ಅವನ ಹಿತಾಸಕ್ತಿಯನ್ನೇ ಬಯಸಿವೆ.

೦೪] ತಾನೇ ಪ್ರಧಾನವಾಗಿದ್ದ ಸಂಸ್ಕೃತಿಯಲ್ಲಿ ಜೀವಿಸಿದ್ದ ಹೆಣ್ಣು ಕಾಲಾನಂತರದಲ್ಲಿ ಅವಳ ಸ್ಥಾನ ಹಂತ ಹಂತವಾಗಿ ಕುಸಿಯುತ್ತಾ ಬಂದಿತು. ನಾವು ಇತಿಹಾಸದ ಪ್ರಥಮ ಕಾಲಘಟ್ಟ ನಾಗರಿಕತೆಗಳು ಜಾರಿ ಇದ್ದ ಕಾಲಕ್ಕೆ ಬಂದಾಗ ಸ್ತ್ರೀ ಪ್ರಧಾನಳಾಗಿದ್ದಳೆನ್ನುವುದಕ್ಕೆ ಕುರುಹುಗಳನ್ನು ಹುಡುಕಬೇಕಾಗುತ್ತದೆ. ಅಲ್ಲಿ ಆಗಲೇ ಪುರುಷನ ಪ್ರಾಧಾನ್ಯತೆ ಎದ್ದು ಕಾಣುತ್ತದೆ. ಪುರುಷ ದೈವಗಳು, ಗಂಡಿನ ಯಜಮಾನ್ಯ ಇರುವುದು ಸ್ಪಷ್ಟವಾಗುತ್ತದೆ. ಅದೊಂದು ಆಧುನಿಕತೆಯನ್ನು ನಾಚಿಸುವಂಥ ನಾಗರಿಕತೆ. ಈ ನಾಗರಿಕತೆ ಜನರು ವ್ಯಾಪಾರ, ವ್ಯವಹಾರ, ಇಂಜಿನಿಯರಿಂಗ್ ಇಂಥ ಕ್ಷೇತ್ರಗಳಲ್ಲೆಲ್ಲ ನಮ್ಮ ನವನಾಗರಿಕ ಜನಾಂಗವನ್ನು ಸೆಡ್ಡು ಹೊಡೆದು ನಿಲ್ಲಿಸುತ್ತವೆ. ಅಂದರೆ ಸ್ತ್ರೀ ಒಂದು ವ್ಯವಸ್ಥಿತವಾದ ಸಮಾಜ ರಚನೆಯಾಗುವುದಕ್ಕಿಂಥ ಮೊದಲೇ ಅವಳನ್ನು ಹಿಂದೆ ತಳ್ಳಲಾಗಿತ್ತು.

೦೫] ರಾಜ್ಯ ವ್ಯವಸ್ಥೆಯಲ್ಲಿ ಸ್ತ್ರೀಯರು ಮತ್ತೊಂದು ಅನಿವಾರ್ಯ ಮತ್ತು ದಿಟ್ಟ ಹೆಜ್ಜೆಯನ್ನು ಇಟ್ಟರು. ಅದು ಅನ್ಯಸಂಸ್ಕೃತಿಯೊಂದಿಗೆ ಹೊಂದಿಕೊಂಡು ಹೋಗುವ ಪರಿಸ್ಥಿತಿ. ಇಲ್ಲಿ ಸ್ತ್ರೀ ತನ್ನ ಅಸ್ತಿತ್ವದ ಹುಡುಕಾಟದಲ್ಲಿ ತೊಡಗಿದಳು. ಅವಳ ಗುರುತಿಸುವಿಕೆ ಈಗ ಎಲ್ಲಿ ಎಂಬ ಪ್ರಶ್ನೆ ಎದುರಾಗುತ್ತದೆ. ಇದು ಕೇವಲ ರಾಜ ಮನೆತನದ ಸ್ತ್ರೀಯರಿಗೆ ಮಾತ್ರ ಅನ್ವಯಿಸುವುದಿಲ್ಲ, ಸಾಮಾನ್ಯ ಸ್ತ್ರೀಯರಿಗೂ ಅನ್ವಯಿಸುತ್ತದೆ. ವಿವಾಹಕ್ಕೆ ಸಮ್ಮತಿ ಇಲ್ಲವೇ ಬಲವಂತ. ರಾಣಿಯರಿಗೆ ಈ ವಿಚಾರದಲ್ಲಿ ಸ್ವಾತಂತ್ರ್ಯವಿಲ್ಲವೆಂದ ಮೇಲೆ ಸಾಮಾನ್ಯರ ಹೆಣ್ಣು ಮಕ್ಕಳ ಬಗ್ಗೆ ಯೋಚಿಸಲು ಅಸಾಧ್ಯವಾಗುತ್ತದೆ. ತಾವು ರಚಿಸಿಕೊಂಡ ರಾಜ್ಯವ್ಯವಸ್ಥೆ ತಮ್ಮ ಅಸ್ತಿತ್ವ ಹುಡುಕಾಟಕ್ಕೆ ಎಡೆಮಾಡಿಕೊಟ್ಟಿತು. ಆಕ್ರಮಣ, ಯುದ್ಧ, ತಮ್ಮ ಉಳಿವಿಗಾಗಿ ಮತ್ತು ರಕ್ಷಣೆಗಾಗಿ ಮನುಷ್ಯ ಮನುಷ್ಯನನ್ನೇ ಕೊಲ್ಲುವ ರಾಜಕೀಯ ವ್ಯವಸ್ಥೆ, ಇದು ಪುರುಷ ನಿರ್ಮಿಸಿಕೊಂಡ ಸಮಾಜವಾಗಿದೆ. ಪುರುಷ ಪ್ರಧಾನ ಸಮಾಜ ನಿರ್ಮಾಣ ಮಾಡಿಕೊಂಡ ದುರವಸ್ಥೆ ಇದೆ ಎನ್ನಬಹುದು.

೦೬] ದಕ್ಷಿಣ ಭಾರತದಲ್ಲಿ ಮಾತೃಸಂಸ್ಕೃತಿಯ ಹಿನ್ನೆಲೆ ಇದ್ದ ಶಾತವಾಹನ ದೊರೆಗಳು ತಾಯಿಯ ಮೂಲಕ ಗುರುತಿಸಿಕೊಳ್ಳುತ್ತಿದ್ದುದನ್ನು ನೋಡಿದ್ದೇವೆ. ದಾನ ದತ್ತಿಗಳನ್ನು ನೀಡುವಾಗ ರಾಣಿಯರಲ್ಲಿ ಆರ್ಥಿಕ ಸ್ವಾತಂತ್ರ್ಯ ಕಾಣುತ್ತದೆ. ಭೂಮಿ ಮೇಲೆ ಹಕ್ಕು ಹೊಂದಿದ್ದರೂ ಇಚ್ಚೆ

ಬಂದಂತೆ ದಾನ ದತ್ತಿ ನೀಡುವುದು ಕಂಡು ಬರುವುದಿಲ್ಲವಾದ್ದರಿಂದ ಭೂಮಿ ತನ್ನ ಸ್ವತ್ತಿನಲ್ಲಿದ್ದರೂ ಸ್ತ್ರೀಯರಿಗೆ ಅದರ ಮೇಲೆ ಅಲ್ಪಮಟ್ಟಿನ ಸ್ವಾತಂತ್ರ್ಯವಿದ್ದಂತೆ ತೋರುತ್ತದೆ. ಕ್ರಿ.ಶ. ಒಂದನೇ ಶತಮಾನದಿಂದ ಆರು ಏಳನೇ ಶತಮಾನದವರೆಗೆ ನಮಗೆ ದೊರೆತ ಲಜ್ಜಾಗೌರಿ, ಸಪ್ತಮಾತೃಕೆಯರ ಮೂರ್ತಿಶಿಲ್ಪಗಳು, ಹಲವಾರು ಶಕ್ತಿದೇವತೆಗಳ ಮೂರ್ತಿ ಶಿಲ್ಪಗಳು ದೊರೆತಿವೆ. ಮತ್ತು ಇಂದಿಗೂ ಆಚರಣೆಯಲ್ಲಿರುವ ಗ್ರಾಮೀಣ ಕೃಷಿಕರ ಗ್ರಾಮ ದೇವತೆಗಳು. ಈ ಎಲ್ಲ ಆಧಾರಗಳು ದಕ್ಷಿಣ ಭಾರತ ಮಾತೃಪ್ರಧಾನ ಸಂಸ್ಕೃತಿಯ ದ್ರಾವಿಡರ ನೆಲೆಯಾಗಿದೆ ಎಂಬುದನ್ನು ಮತ್ತಷ್ಟು ಆಧಾರಸಹಿತ ಖಚಿತಪಡಿಸಿದೆ.

೦೭] ಆಡಳಿತದಲ್ಲಿ ಸ್ತ್ರೀಯರಿಗೆ ಸ್ಥಾನ ಕಲ್ಪಿಸಿಕೊಡಲಾಗಿತ್ತು. ಉನ್ನತ ಸ್ಥಾನಗಳಾದ ಪ್ರಾಂತಾಧಿಕಾರಿಯಾಗಿ. ಆಡಳಿತ ನಿರ್ವಹಿಸುತ್ತಿದ್ದರು. ಅರಮನೆ ಆಡಳಿತ ವರ್ಗ, ಆರ್ಥಿಕ ವ್ಯವಸ್ಥೆ, ಇಲ್ಲಿ ಸ್ತ್ರೀಯರ ಭಾಗವಹಿಸುವಿಕೆ, ಅಧಿಕಾರ, ಇವೆಲ್ಲವುಗಳ ಮೇಲೆ ಹಿಡಿತ ಕೇವಲ ಹೆಸರಿಗೆ ಮಾತ್ರ ಇರುವಂತೆ ತೋರುತ್ತದೆ. ಪ್ರಮಾಣದ ದೃಷ್ಟಿಯಿಂದ ಅವಲೋಕಿಸಿದಾಗ ಇತಿಹಾಸದಲ್ಲಿ ಅಷ್ಟೂ ರಾಜರ ಮಧ್ಯೆ ಆಡಳಿತ ನಡೆಸಿದ ರಾಣಿಯರ ಸಂಖ್ಯೆ ಎಷ್ಟು? ಇದಕ್ಕೆ ಉತ್ತರವೇ ಇಲ್ಲ ಎನ್ನಬಹುದು. ಹಾಗೊಂದು ವೇಳೆ ಆಡಳಿತ ನಡೆಸುತ್ತಿದ್ದರೆಂದು ಹೇಳುವ ರಾಣಿಯರು ರಾಜನಿಂದ ದೂರ ಉಳಿದು ಯಾವುದೋ ಅಗ್ರಹಾರ, ಒಂದು ಸಣ್ಣ ಆಡಳಿತ ವಿಭಾಗದಲ್ಲಿದ್ದರು. ಇದರಿಂದ ನಾವು ಕಂಡುಕೊಂಡಿದ್ದೇನೆಂದರೆ ಆಡಳಿತ ದೊರೆತಿರುವುದು ಕೇವಲ ಹೆಸರಿಗೆ ಮಾತ್ರ. ಅದರ ಹಿಂದೆ ಗಂಡಸರೇ ಆಡಳಿತ ನಡೆಸುತ್ತಿದ್ದರು.

೦೮] ಧರ್ಮ ಕೂಡ ಹೆಣ್ಣನ್ನು ಅಸ್ಪೃಶ್ಯಳನ್ನಾಗಿಯೇ ದೂರ ಇಟ್ಟಿದೆ. ಇಡೀ ಅಧ್ಯಯನದಲ್ಲಿ ಧರ್ಮ ಮತ್ತು ಅವಳ ಮಧ್ಯೆ ಇರುವುದು ಮೇಲ್ವರ್ಗದವರಿಗೆ ದಾನ, ದತ್ತಿಗೆ ಸಂಬಂಧಿಸಿದಂತೆ, ಇನ್ನು ಕೆಲ ಸಮುದಾಯದ ಹೆಣ್ಣುಮಕ್ಕಳಿಗೆ ಸೇವೆ, ತಮ್ಮ ಜೀವತಾವಧಿಯವರೆಗೂ ಅರ್ಪಣೆ, ಇದಕ್ಕೆ ಹೊರತಾಗಿ ಧರ್ಮದಲ್ಲಿ ಅವಳ ಭಾಗವಹಿಸುವಿಕೆಗೆ ಅವಕಾಶವಿರಲಿಲ್ಲ. ದೇವಾಲಯದ ಗರ್ಭಗುಡಿಯವರೆಗೆ ಮಾತ್ರ ಅವಳ ಪ್ರವೇಶ, ಉಳಿದಂತೆ ನಿಷಿದ್ಧ. ದೇವರು, ಧರ್ಮ, ಧಾರ್ಮಿಕ ಕಾರ್ಯಗಳು, ಚರ್ಚೆಯನ್ನು ಕುರಿತಂತೆ ಹೆಣ್ಣಿಗೆ ಅರ್ಥವಾಗದ ವಿಚಾರಗಳೆಂದು ಅಂಧತ್ವದಲ್ಲಿಟ್ಟಿದ್ದರು. ಇಂದು ಕೂಡ ಹೆಣ್ಣಿನ ವಿಷಯದಲ್ಲಿ ಧರ್ಮದ ಕಟ್ಟುಪಾಡಿನ ವಿಚಾರದಲ್ಲಿ ಅದೇ ನಿಯಮವನ್ನು ಪಾಲಿಸುತ್ತಿದ್ದಾರೆ. ಹೆಣ್ಣಿಗೆ ದೇವಾಲಯದ ಒಳಪ್ರವೇಶಕ್ಕೆ ನಿಷೇಧವಿದೆ.

೦೯] ಸ್ತ್ರೀಯರು ಹಲವಾರು ಕಟ್ಟುಪಾಡು, ಹಿಡಿತದ ಮಧ್ಯೆವೂ ಹಲವಾರು ಸಮಾಜ ಸೇವಾ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದರ ಮೂಲಕ ಸಾಮಾಜಿಕ ಹೊಣೆಗಾರಿಕೆ

ಮತ್ತು ಪ್ರಜ್ಞೆಯನ್ನು ಕಾಣಬಹುದಾಗಿದೆ. ಕೆರೆ, ಬಾವಿ, ಅರವಟ್ಟಿಗೆಗಳ ನಿರ್ಮಾಣದಲ್ಲಿ ಅವರ ಆಸಕ್ತಿಯನ್ನು ಕಾಣಬಹುದು. ಪ್ರಸ್ತುತ ಜಗತ್ತಿನಲ್ಲಿ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಸರಕಾರ ಹಲವಾರು ಯೋಜನೆಗಳನ್ನು ಹಮ್ಮಿಕೊಳ್ಳುತ್ತಿದೆ. ಅಂದರೆ ಶಿಕ್ಷಣದಲ್ಲಿ ಸಮಾನತೆ ಸಾಧಿಸಿಲ್ಲವೆನ್ನುವುದು ಸತ್ಯದಿಂದ ಕೂಡಿದೆ. ಇನ್ನು ಪ್ರಾಚೀನ ಕಾಲದಲ್ಲಿ ಸ್ತ್ರೀಶಿಕ್ಷಣ ಪೂರ್ಣ ನಿರ್ಲಕ್ಷ್ಯವೆನ್ನುವುದಕ್ಕಿಂತ ಅವರಿಗೆ ನಿಷಿದ್ಧವಾಗಿತ್ತು. ರಾಜಕುಮಾರಿಯರು, ಮೇಲ್ವರ್ಗದವರನ್ನು ಹೊರತುಪಡಿಸಿದಂತೆ ಸಾಮಾನ್ಯ ಹೆಣ್ಣುಮಕ್ಕಳು ವಿದ್ಯೆಯನ್ನು ಹೊಂದುವುದು ಅಪರಾಧವೆಂಬಂತೆ ಭಾವಿಸಲಾಗಿತ್ತು. ಅಂದು ಹೆಣ್ಣಿಗೆ ಶಿಕ್ಷಣ ಪುರುಷ ಸಮಾನವಾಗಿ ದೊರೆತಿದ್ದೇ ಆಗಿದ್ದರೆ ಇಂದು ಮಹಿಳೆಯರು ಸಮಾಜದ ಪ್ರತಿಯೊಂದು ರಂಗದಲ್ಲೂ ಗಂಡಿನ ಸಮಾನ ಸ್ಥಾನ ಹೊಂದುತ್ತಿದ್ದರು.

೧೦] ಉತ್ಪಾದನೆಯಲ್ಲಿ ಹೆಣ್ಣುಮಕ್ಕಳ ಪಾಲೂ ಇದೆ. ಆದರೆ ಅವಳು ಹೆಚ್ಚಾಗಿ ಕೌಟುಂಬಿಕ ವಲಯದಲ್ಲಿ ಗುರುತಿಸಲ್ಪಟ್ಟಿರುವುದರಿಂದ ಅವಳನ್ನು ಅನುತ್ಪಾದಕ ವಲಯದಲ್ಲಿ ಗುರುತಿಸಲಾಗಿದೆ. ಗಂಡು ಕುಟುಂಬದಾಚೆ ದುಡಿಯುವುದರಿಂದ ತನ್ನ ಆದಾಯವನ್ನು ಮಾತ್ರ ಆರ್ಥಿಕ ವಲಯದಲ್ಲಿ ಗುರುತಿಸಿ, ಹೆಣ್ಣನ್ನು ಆರ್ಥಿಕ ಕ್ಷೇತ್ರದಿಂದ ದೂರವಿರಿಸಿದ್ದಾನೆ. ಪ್ರಾಚೀನ ಕಾಲದಲ್ಲಿ ಹೆಚ್ಚಾಗಿ ಗೃಹ ಮತ್ತು ಗುಡಿ ಕೈಗಾರಿಕೆಗಳ ಮೇಲೆ ಅವಲಂಬಿತವಾಗಿದ್ದರಿಂದ ಕುಟುಂಬದ ಹೊಣೆಗಾರಿಕೆ ಜೊತೆಗೆ ಹೆಣ್ಣು ಗೃಹ ಕೈಗಾರಿಕೆಯಲ್ಲೂ ತೊಡಗಿಸಿಕೊಳ್ಳುವುದು ಸಹಜವಾಗಿತ್ತು. ಹಾಗಾಗಿ ಕುಟುಂಬ ಮತ್ತು ಉತ್ಪಾದನಾ ವಲಯದಲ್ಲಿ ಅವಳ ಪಾಲು ಇದ್ದರೂ ಅದರ ಯಜಮಾನಿಕೆ ಪುರುಷನದ್ದಾಗಿದ್ದರಿಂದ ಅವಳನ್ನು ವೃತ್ತಿಕ್ಷೇತ್ರದಲ್ಲಿ ಅಷ್ಟಾಗಿ ಗುರುತಿಸಿಲ್ಲವೆಂಬುದನ್ನು ಕಂಡುಕೊಂಡೆವು.

೧೧] ಇಂದಿನ ಸಮಾಜದಲ್ಲೂ ಹೆಣ್ಣಿಗೆ ಅಸುರಕ್ಷತೆಯ ಭಯ ಕಾಡುತ್ತಿದೆ. ಅಪಹರಣ, ಅತ್ಯಾಚಾರ, ಕೊಲೆ ಹೀಗೆ ಸುರಕ್ಷಿತತೆ ಇಲ್ಲದೆ ಮುಂಬರುವ ಭಯದ ದಿನಗಳಲ್ಲೇ ಜೀವನ ನಡೆಸುತ್ತಿದ್ದಾಳೆ. ಪ್ರಾಚೀನ ಕಾಲದಲ್ಲೂ ಸ್ತ್ರೀಯರನ್ನು ಹೊತ್ತೊಯ್ಯುತ್ತಿದ್ದರು ಎಂಬುದು ನಮಗೆ ಪೆಣ್ಬುಯ್ಯಲ್ ಶಾಸನಗಳಿಂದ ತಿಳಿದುಬರುತ್ತದೆ. ಮಹಿಳೆಯರಿಗೆ ಯಾವ ಕಾಲಕ್ಕೂ ಪೂರ್ಣ ರಕ್ಷಣೆ ಇಲ್ಲ ಎಂಬುದು ಇದರಿಂದ ಅರ್ಥವಾಗುತ್ತದೆ. ಜೊತೆಗೆ ಕುಟುಂಬದಲ್ಲಿ ಸದಾ ಅಭದ್ರತೆಯ ಭಯ, ತನ್ನಿಂದ ಸಣ್ಣ ಅಪರಾಧ ಸಂಭವಿಸಲಿ ಇಲ್ಲವೇ ಸಂಭವಿಸದೇ ಇರಲಿ ಪತಿ ಎಲ್ಲಿ ಮತ್ತೊಂದು ವಿವಾಹವಾಗುತ್ತಾನೋ ಎಂಬ ಭಯ. ಏಕೆಂದರೆ ನಮ್ಮ ಧರ್ಮ ಮತ್ತು ಸಮಾಜ ಗಂಡಿಗೆ ಹಲವು ವಿವಾಹಕ್ಕೆ ಸಮ್ಮತಿಯನ್ನು ಕೊಟ್ಟಿದೆ.

೧೨] ಪಾತರದವರು ಒಂಬತ್ತನೇ ಶತಮಾನದಿಂದ ಹದಿನೈದನೇ ಶತಮಾನದವರೆಗೆ ದೇವಾಲಯಗಳಲ್ಲಿ ನೃತ್ಯಸೇವೆ ಮಾಡುವವರಾಗಿದ್ದರು. ಇವರು ಸಂಗೀತ ಮತ್ತು ನೃತ್ಯ ಕಲಾ ಆರಾಧಕರು. ನೃತ್ಯವನ್ನು ತಮ್ಮ ಹುಟ್ಟಿನೊಂದಿಗೆ ಆವಿರ್ಭವಿಸಿಕೊಂಡವರೆಂದರೆ ತಪ್ಪಾಗುವುದಿಲ್ಲ. ಇಂದಿಗೂ ನೃತ್ಯದ ಪರಂಪರೆ ಮುಂದುವರಿದುಕೊಂಡು ಬಂದಿರುವಲ್ಲಿ ಇವರ ವೈಯಕ್ತಿಕ ಜೀವನದ ಬಲಿದಾನವಿದೆ. ಪಾತರದವರು ದೇವರ ಹೆಸರಿನಲ್ಲಿ ಸಾಮಾನ್ಯರಿಗೆ ತಮ್ಮ ನೃತ್ಯಸೇವೆಯ ಜೊತೆಗೆ ಲೈಂಗಿಕ ಸೇವೆಯನ್ನು ಮಾಡಿದವರು. ಇವರ ಕಲಾಸೇವೆ ಮತ್ತು ತ್ಯಾಗಕ್ಕೆ ಇವರಿಗೆ ದೊರೆತದ್ದು ಸಮಾಜದಿಂದ ತಿರಸ್ಕೃತ ಬದುಕು. ಇಷ್ಟಾದರೂ ಇವರು ಸ್ವತಂತ್ರರಾಗಿ ಉಳಿದಿರಲಿಲ್ಲ. ಕೆಲ ಸ್ವಾರ್ಥ ಹಿತಾಸಕ್ತಿಗಳು ಇವರನ್ನು ಸದಾ ತಮ್ಮ ನಿಯಂತ್ರಣದಲ್ಲೇ ಇರಿಸಿಕೊಂಡಿದ್ದರು. ಪಾತರದ ಸಮುದಾಯದವರ ಬಗ್ಗೆ ಇಂದಿನ ಪ್ರತಿಷ್ಠಿತ ನಾಟ್ಯ ಕಲಾವಿದರೆಂದು ತಮ್ಮನ್ನು ಗುರುತಿಸಿಕೊಂಡಿರುವ ಎಲ್ಲರಿಗೂ ಒಂದು ಕೃತಜ್ಞತಾ ಭಾವನೆ ಅವರ ಮನದಲ್ಲಿರಲಿ.

೧೩] ಸಮಾಜದಲ್ಲಿ ವೇಶ್ಯೆಯರು ಇರದೇ ಹೋಗಿದ್ದರೆ ಗೃಹಿಣಿಯರು ಸುರಕ್ಷಿತವಾಗಿರುತ್ತಿರಲಿಲ್ಲ ಎಂದು ವಿದ್ವಾಂಸರೊಬ್ಬರ ಅಭಿಪ್ರಾಯವಾಗಿದೆ. ಇದು ಎಷ್ಟು ವಿವೇಚನಯುಕ್ತವಾಗಿದೆ ಎಂದರೆ ವೇಶ್ಯೆಯರು ಸಮಾಜದಲ್ಲಿ ಲೈಂಗಿಕ ಸೇವೆ ಸಲ್ಲಿಸುವುದರ ಮೂಲಕ ಸಮಾಜದಲ್ಲಿ ಗೃಹಿಣಿಯರಿಗೆ ಒಂದು ರೀತಿ ನೈತಿಕ ಸ್ವಾಸ್ಥ್ಯವನ್ನು ಒದಗಿಸಿದರೆನ್ನುವುದಕ್ಕೆ ಈ ಹೇಳಿಕೆಗೆ ಪುಷ್ಟಿ ಕೊಡುತ್ತದೆ. ಅವರದು ಒಂದು ವೃತ್ತಿ ಎಂದು ಮಾನ್ಯ ಮಾಡಲ್ಪಟ್ಟಿತ್ತು. ಆ ವೃತ್ತಿಯಡಿಯಲ್ಲಿ ಅವರನ್ನು ಗೌರವಿಸಲಾಗುತ್ತಿತ್ತು. ಅವರು ಆರ್ಥಿಕವಾಗಿ ಉತ್ತಮ ಸ್ಥಾನ ಹೊಂದಿದ್ದರು. ದೇವಾಲಯಗಳಿಗೆ ದಾನ ದತ್ತಿಗಳನ್ನು ನೀಡಿದ್ದಾರೆ. ತಮ್ಮನ್ನು ರಾಜವೇಶ್ಯೆಯರೆಂದು ಗುರುತಿಸಿಕೊಂಡಿದ್ದಾರೆ. ಆದರೆ ಕಾಲ ಗತಿಸಿದಂತೆ ದೇವಾಲಯ ಮತ್ತು ಸಮಾಜದಲ್ಲಿ ಸೂಳೆಯರ ಸಂಖ್ಯೆ ಅಧಿಕವಾಗಿ ಅವರಿಗೆ ಇದ್ದ ಗೌರವ ಕಡಿಮೆಯಾಯಿತು. ಸೂಳೆಯರ ಸ್ಥಾನಮಾನ ವಿಜಯನಗರ ಸಾಮ್ರಾಜ್ಯದ ಆಳ್ವಿಕೆ ಕಾಲಕ್ಕೆ ಪೂರ್ಣ ಕೆಳಮಟ್ಟಕ್ಕಿಳಿಯಿತು. ಅವರು ತಮ್ಮ ಚೌಕಟ್ಟಿನಿಂದಾಚೆ ಬಂದರು. ಹಣಕ್ಕಾಗಿ ಅಲ್ಲಿ ಸೂಳೆಗಾರಿಕೆ ಬೀದಿಗೆ ಬಂದು ತಲುಪಿತು. ಪ್ರಸ್ತುತ ವ್ಯವಸ್ಥೆಯಲ್ಲಿ ಅದರ ಕರಾಳಛಾಯೆಯನ್ನು ಇಂದಿಗೂ ನಾವು ನೋಡುತ್ತಿದ್ದೇವೆ.

೧೪] ಇತಿಹಾಸದಲ್ಲಿ ಸಂಪ್ರದಾಯದ ಹೆಸರಲ್ಲಿ ಸ್ತ್ರೀಯರನ್ನು ಅತ್ಯಂತ ದಾರುಣವಾಗಿ ನಡೆಸಿಕೊಂಡಿದ್ದೆಂದರೆ ಸತಿಪದ್ಧತಿಯಲ್ಲಿ. ಹೆಣ್ಣಿಗೆ ಅಧಿಕಾರ, ಸ್ಥಾನ, ಮಾನ ಏನೂ ಕೊಡದೇ ಹೋದರೂ ಕೊನೆಗೆ ಅವಳಿಗೆ ಜೀವಿಸುವ ಹಕ್ಕನ್ನಾದರೂ ಕೊಡಬೇಕಿತ್ತು. ಆದರೆ ಪಿತೃಸತ್ತೆ ಸಮಾಜ ಅವಳ ಜೀವಿಸುವ ಹಕ್ಕನ್ನು ಕಿತ್ತುಕೊಂಡು ಅವಳು ತನ್ನ ಯೌವನದಲ್ಲೇ ಜೀವನವನ್ನು ಪೂರ್ಣಗೊಳಿಸುವಂತೆ ಮಾಡಿದರು. ಸತಿಪದ್ಧತಿ ಪ್ರಾಚೀನ ಕಾಲದಲ್ಲಿತ್ತು ಎನ್ನುವುದಕ್ಕೆ ನಮಗೆ

ಮಾಹಿತಿಗಳು ದೊರೆತಿಲ್ಲವಾದ ಕಾರಣ ಒಂಬತ್ತನೇ ಶತಮಾನದ ನಂತರದ ಕಾಲಾವಧಿಯಿಂದ ಅಧ್ಯಯನ ಮಾಡಿದಾಗ ಆರಂಭದಲ್ಲಿ ಅಷ್ಟೊಂದು ತೀವ್ರ ಸ್ವರೂಪದಲ್ಲಿರಲಿಲ್ಲವೆನ್ನುವುದು ನಮಗೆ ತಿಳಿದುಬಂದಿದೆ. ಹೀಗೆ ಸಮಾಜದಲ್ಲಿ ಜಾರಿಯಿದ್ದ ನೀತಿ ನಿಯಮಗಳೆಲ್ಲ ಸ್ತ್ರೀ ಹಿತಾಸಕ್ತಿಯನ್ನು ಕಡೆಗಣಿಸಿದ್ದವು. ಸತಿ ಪದ್ಧತಿಯಲ್ಲದೆ, ವೇಳೆವಾಳಿ, ಜೋಳವಾಳಿ, ಗರುಡ ಹೋಗುವುದು ಇವೆಲ್ಲ ಪುರುಷರು ತಮ್ಮ ಯಜಮಾನಿಗಾಗಿ ಪ್ರಾಣಾರ್ಪಣೆ ಮಾಡುವಂಥಪದ್ಧತಿಗಳಾದರೂ ಇಲ್ಲಿ ಪತಿಯರು ಪ್ರಾಣಾರ್ಪಣೆ ಮಾಡಿದ ಕಾರಣಕ್ಕೆ ಸತಿಯರು ಅವರನ್ನುಅನುಸರಿಸಬೇಕಿತ್ತು. ಇತಿಹಾಸದುದ್ದಕ್ಕೂ ಕಂಡುಕೊಳ್ಳುವುದೇನೆಂದರೆ ಅಲ್ಲಿ ಘಟಿಸುವ ಯಾವ ಘಟನೆಗಳಿಗೂ ಅವಳು ಕಾರಣಳಲ್ಲ. ಆದರೆ ಅವೆಲ್ಲದರ ಪರಿಣಾಮ ಹೆಣ್ಣಿನ ಮೇಲೆ ಆಗುತ್ತಿತ್ತು.

# ಪರಾಮರ್ಶನ ಗ್ರಂಥಗಳು,

**ಶಾಸನ ಸಂಪುಟಗಳು**

ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು

ಕಲ್ಯಾಣ ಚಾಲುಕ್ಯರ ಶಾಸನಗಳು, ಸಂಪುಟ-೧

ರಾಷ್ಟ್ರಕೂಟರ ಶಾಸನಗಳು, ಸಂಪುಟ ೧ ಮತ್ತು ೨.

EPIGRAPHIA CARNATICA.(E.C)

EPIGRAPHIA INDICA (E.I)

SOUTH INDIAN INSCRIPTION (SII)

**ಪುಸ್ತಕ ಪಟ್ಟಿ :**

ಅಣ್ಣಿಗೇರಿ ಎ.ಎಂ, ಆರ್. ಶೇಷಾಶಾಸ್ತ್ರಿ (ಸಂ); ಶಾಸನ ಸಂಪದ, ೧೯೭೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಇಂದಿರಾ ಆರ್.; ಮಹಿಳೆ-ಸಮಾಜ ಮತ್ತು ಸಂಸ್ಕೃತಿ, ೨೦೦೨, ಕನ್ನಡ ವಿಶ್ವವಿದ್ಯಾಲಯ,ಹಂಪಿ.

ಒಡೆಯರ್, ಡಿ. ಹೆಗಡೆ; ಭಾರತದಲ್ಲಿ ಮಹಿಳಾ ರಾಜಕೀಯ ಪ್ರಾತಿನಿಧ್ಯ, ೨೦೦೭, ಅರ್ಜುನ್ ಪಬ್ಲಿಷಿಂಗ್ ಹೌಸ್, ಮೈಸೂರು.

ಕನಕದಾಸ; ಮೋಹನ ತರಂಗಿಣಿ, ಸಣ್ಣಯ್ಯ ಬಿ.ಎಸ್.(ಸಂ); ಮೋಹನ ತರಂಗಿಣಿ ಸಂಗ್ರಹ, ೧೯೬೨, ಗೀತಾ ಬುಕ್ ಹೌಸ್, ಮೈಸೂರು.

ಕರ್ನಾಟಕ ಪರಂಪರೆ, ಸಂ; (೧) ಆದಿಕಾಲ, ೨೦೦೬, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು.

ಕಮಲಾ ಹಂಪನಾ; ಬೊಗಸೆ(ಮಹಿಳೆ ಸುತ್ತ-ಮುತ್ತ), ೨೦೦೩, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು.

ಕರೀಂಖಾನ್ ಎಸ್. ಕೆ.; ಕನ್ನಡ ಜನಪದ ಗೀತೆಗಳು, ೧೯೯೪, ಪುಸ್ತಕ ಪ್ರಕಾಶಕರು, ಬೆಂಗಳೂರು.

ಕಲವೀರ ಮನ್ವಾಚಾರ; ಮಾತೃದೇವತಾ ಆರಾಧನೆ, (ಅಪ್ರಕಟಿತ ಮಹಾ ಪ್ರಭಂಧ) ೨೦೦೩, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕುಮಾರ ವಾಲ್ಮೀಕಿ; ತೊರವೆ ರಾಮಾಯಣ, ಕೃಷ್ಣಮೂರ್ತಿ ಕೆ.ಎನ್.(ಸಂ); ೧೯೭೭ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕುಮಾರವ್ಯಾಸ; ಕರ್ಣಾಟಕ ಭಾರತ ಕಥಾಮಂಜರಿ, ಪುಟ್ಟಪ್ಪ ಕೆ.ವಿ, ಮಾಸ್ತಿ ವೆಂಕಟೇಶ್ ಅಯ್ಯಂಗಾರ,(ಸಂ), ೨೦೦೦, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಕೌಟಿಲ್ಯ; ಅರ್ಥಶಾಸ್ತ್ರ, ಕೂಡಲಿ ಶೃಂಗೇರಿ ಜಗದ್ಗುರು, ಶ್ರೀ ಸಚ್ಚಿದಾನಂದ ಶಂಕರ ಭಾರತಿ ಸ್ವಾಮಿಗಳು(ಅನು); ೨೦೦೫, ಅಂಕಿತ ಪುಸ್ತಕ, ಬೆಂಗಳೂರು.

ಕಲ್ಬುರ್ಗಿ, ಎಂ. ಎಂ.; ಸಂಸ್ಕೃತಿ-ವಿಕೃತಿ, ೨೦೦೬, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಬೆಂಗಳೂರು.

ಕೃಷ್ಣಮೂರ್ತಿ ಕೆ. ಎಸ್.; ಉಪನಿಷತ್ ಸಾರ, ೨೦೦೪. ಕಾವ್ಯಾಲಯ ಪ್ರಕಾಶನ, ಮೈಸೂರು.
ಚಕ್ರವರ್ತಿ, ಜಿ.ಎನ್.; ಋಕ್ಸಂಹಿತಸಾರ, ೧೯೯೮, ಕನ್ನಡ ಸಾಹಿತ್ಯ ಅಕಾಡಮಿ, ಬೆಂಗಳೂರು.
ಚನ್ನಕ್ಕ ಎಲಿಗಾರ; ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ೧೯೯೦, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
ಚನ್ನಕ್ಕ ಪಾವಟೆ; ಕರ್ನಾಟಕ ಶಾಸನೋಕ್ತ ಮಹಿಳೆ, ಸಮೀಕ್ಷೆ–ಸಂಸ್ಕೃತಿ, ೨೦೦೮, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ, ಧಾರವಾಡ.
ಚಿದಾನಂದಮೂರ್ತಿ, ಎಂ.; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೨, ಸಪ್ನ ಬುಕ್ ಹೌಸ್, ಬೆಂಗಳೂರು.
ಜಯಮ್ಮ ಕರಿಯಣ್ಣ, ಹೆಚ್.; ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೮, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ.
ಜೋತ್ಸ್ನಾ ಕಾಮತ್; ಮಹಿಳೆ ಒಂದು ಅಧ್ಯಯನ, ೧೯೯೯, ನವಕರ್ನಾಟಕ ಪ್ರಕಾಶನ, ಬೆಂಗಳೂರು.
ದೇವಿಪ್ರಸಾದ ಚಟ್ಟೋಪಾಧ್ಯಾಯ; ಮಾತೆಯರು ಮಾನ್ಯರಾಗಿದ್ದಾಗ, ಕುಮಾರಪ್ಪ ಜಿ.(ಅನು); ೧೯೯೭, ನವಕರ್ನಾಟಕ ಪ್ರಕಾಶನ, ಬೆಂಗಳೂರು.
ನರಸಿಂಹಮೂರ್ತಿ, ಎ.ವಿ.; ಕರ್ನಾಟಕದ ಸೇವುಣರ ಇತಿಹಾಸ, ೨೦೧೦, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.
ನರೇಗಲ್ ಎಂ.ಎಸ್.; ಉತ್ತರ ಗದಗ ಜಿಲ್ಲೆ ಶಾಸನಗಳು ಒಂದು ಅಧ್ಯಯನ, ೨೦೦೯, ರವಿ ರಶ್ಮಿ ಪ್ರಕಾಶನ, ಗದಗ.
ನಾಗಯ್ಯ ಜೆ.ಎಂ.; ಆರನೇ ವಿಕ್ರಮಾದಿತ್ಯನ ಶಾಸನಗಳು, ೧೯೯೨, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ.
ನಾಗೇಗೌಡ ಹೆಚ್.ಎಲ್.(ಸಂ); ಪ್ರವಾಸಿ ಕಂಡ ಇಂಡಿಯಾ, ೨೦೦೬, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು.
ನಾವಡ, ಎ.ವಿ.; ಹಲಸಂಗಿ ಹಾಡು, ೨೦೦೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.
ಪರಮಶಿವಮೂರ್ತಿ, ಡಿ. ವಿ.; ಕೃಷ್ಣದೇವರಾಯನ ಶಾಸನಗಳು, ಕನ್ನಡ ಸಂಸ್ಕೃತ ಶಾಸನಗಳು, ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ,
ಪರಮಶಿವಯ್ಯ, ಜೀ.ಶಂ.; ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ೧೯೭೯, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
ಪರಮಶಿವಯ್ಯ, ಜೀ.ಶಂ.; ಈರೋಬಿ ಜನಪದ ಖಂಡಕಾವ್ಯ ಭಾಗ–೨, ೨೦೧೨, ಸಾಗರ ಪ್ರಕಾಶನ, ಬೆಂಗಳೂರು.
ಪಂಪ; ಆದಿ ಪುರಾಣ, ನರಸಿಂಹ ಶಾಸ್ತ್ರಿ, ಕೆ.ಎಲ್.(ಸಂ); ೨೦೦೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಪಂಪ; ಪಂಪಭಾರತ. ಬಸವರಾಜ ಎಲ್. (ಸಂ); ೨೦೦೯, ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು.

ಭಗವತ್ ಶರಣ ಉಪಾಧ್ಯಾಯ; ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ಪ್ರಧಾನ್ ಗುರುದತ್ತ(ಅನು); ೨೦೦೮, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಭೈರಾಕೂರು ವೆಂಕಟೇಶ; ನಲವತ್ತೆಂಟು ಉಪನಿಷತ್ತುಗಳು, ೨೦೦೯, ಸಾಧನ ಪ್ರಕಾಶನ, ಬೆಂಗಳೂರು.

ಮಂಗಳಾ ಪ್ರಿಯದರ್ಶಿನಿ, ಡಿ.; ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ,೨೦೦೭, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮತ್ತೂರು ಕೃಷ್ಣಮೂರ್ತಿ; ಮಹಾಭಾರತದ ಉಪಾಖ್ಯಾನ ಪಂಚಕ, ೨೦೦೬, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

ಮಿತ್ರ ಅ.ರಾ.; ಮಹಾಭಾರತದ ಪಾತ್ರ ಸಂಗತಿಗಳು, ೨೦೦೮, ವಸಂತ ಪ್ರಕಾಶನ, ಬೆಂಗಳೂರು.

ಮೋತಿಚಂದ್ರ; ಸಾರ್ಥವಾಹ, ಎಚ್.ಎಸ್. ಪಾಟೀಲ್(ಅನು), ಪ್ರಾಚೀನ ಭಾರತದ ಪಥ ಪದ್ಧತಿ ೧೯೭೨, ಸಾಹಿತ್ಯ ಅಕಾಡೆಮಿ, ಹೊಸದೆಹಲಿ.

ರನ್ನ: ಸಾಹಸಭೀಮ ವಿಜಯ, ಕುಲಕರ್ಣಿ ಆರ್.ವಿ.(ಸಂ); ೧೯೮೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ರನ್ನ: ಅಜಿತ ತೀರ್ಥಂಕರ ಪುರಾಣ ಚರಿತ, ಹಂಪ. ನಾಗರಾಜಯ್ಯ(ಸಂ); ರನ್ನಸಂಪುಟ, ೨೦೦೬, ಪ್ರಸಾರಾಂಗ ಕನ್ನಡ ವಿದ್ಯಾಲಯ, ಹಂಪಿ.

ರಾಜಾರಾಮ ಹೆಗಡೆ; ಲೌಕಿಕ ಅಲೌಕಿಕ, ೨೦೦೧, ಆನಂದಕಂದ ಗ್ರಂಥಮಾಲೆ, ಮಲ್ಲಾಡಹಳ್ಳಿ

ವೀರಣ್ಣ ರಾಜೂರು (ಸಂ); ಶಿವಶರಣೆಯರ ವಚನ ಸಂಪುಟ-೫, ೧೯೯೩, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ವಿಘ್ನೇಶ. ಎನ್. ಭಟ್.(ಸಂ); ಬಸವತತ್ವ: ಸಾಮಾಜಿಕ ಆಯಾಮಗಳು, ೨೦೦೩, ಬಸವೇಶ್ವರ ಅಧ್ಯಯನ ಕೇಂದ್ರ,

ಶಿವಾನಂದ ವಿರಕ್ತಮಠ; ಮಹಿಳೆ ಮತ್ತು ಧರ್ಮ, ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶೆಟ್ಟರ್. ಷ.; ಶಂಗಂ ತಮಿಳಿಗಂ ಮತ್ತು ಕನ್ನಡ ನಾಡು-ನುಡಿ, ೨೦೦೭, ಅಭಿನವ ಪ್ರಕಾಶನ, ಬೆಂಗಳೂರು.

ಶೆಟ್ಟರ್, ಷ.; ಸೋಮನಾಥಪುರ, ೨೦೦೮ ಅಭಿನವ ಪ್ರಕಾಶನ, ಬೆಂಗಳೂರು.

ಶೇಷ ನವರತ್ನ; ಮನುಸ್ಮೃತಿ, ೨೦೦೫, ಸಮಾಜ ಪುಸ್ತಕಾಲಯ, ಧಾರವಾಡ,

ಶೇಷ ನವರತ್ನ; ಋಗ್ವೇದ ಒಂದು ಅಧ್ಯಯನ, ೨೦೦೩. ಸಮಾಜ ಪುಸ್ತಕಾಲಯ, ಧಾರವಾಡ.

ಶೇಠ ಬಿ.ಎಸ್.; ಕರ್ನಾಟಕದಲ್ಲಿ ಸತಿ ಪದ್ಧತಿ. ೧೯೯೧, ವೀರಶೈವ ಅಧ್ಯಯನ ಅಕಾಡಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

ಶ್ರೀಮತಿ ಎಚ್.ಎಸ್.; ಚಹರೆ, ೨೦೦೬, ಇಳಾ ಪ್ರಕಾಶನ, ಬೆಂಗಳೂರು.
ಶ್ರೀಮತಿ ಎಚ್.ಎಸ್.; ಗರ್ಭಾಶಯ-ಮಹಿಳೆಯ ಶಕ್ತಿ ಕೇಂದ್ರ, ೨೦೦೨, ಕನ್ನಡ ವಿಶ್ವವಿದ್ಯಾಲಯ, ಹಂಪಿ.
ಶೈಲಜಾ ಹಿರೇಮಠ; ಪಾತರದವರು, ೧೯೯೯, ಕನ್ನಡ ವಿಶ್ವವಿದ್ಯಾಲಯ, ಹಂಪಿ.
ಸತ್ಯನಾರಾಯಣ, ರಾ.; ಭಾರತೀಯ ಸಂಗೀತದಲ್ಲಿ ಪರಿಬಾಷಾ ಪ್ರಯೋಗ, ೧೯೮೬, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ. ಮೈಸೂರು.
ಸುಂಕಾಪೂರ ಎಂ.ಎಸ್.; ಎಲ್ಲ ಪುರಾತನರ ವಚನಗಳು, ಭಾಗ-೨, ೨೦೦೨, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
ಸುಂದರ ಅ.; ಕರ್ನಾಟಕ ಚರಿತ್ರೆ, ಸಂಪುಟ, ೧೯೯೭, ಕನ್ನಡ ವಿಶ್ವವಿದ್ಯಾಲಯ ಹಂಪಿ.
ಸುನಂದಮ್ಮ ಆರ್.; ಮಹಿಳಾ ಸಂಸ್ಕೃತಿ,೨೦೦೫, ಸಮತಾ ಅಧ್ಯಯನ ಕೇಂದ್ರ, ಮೈಸೂರು.
ಸುಜ್ಞಾನಮೂರ್ತಿ ಬಿ.(ಸಂ); ಪೆಮಿನಿಸ್ಟ್ ಸ್ಟಡಿ ಸರ್ಕಲ್, ನಮಗೆ ಗೋಡೆಗಳಿಲ್ಲ ಸ್ತ್ರೀವಾದಿ ಅರಿವು, ಓಲ್ಗಾ ಲೇಖನ, ೨೦೦೯, ಲಡಾಯಿ ಪ್ರಕಾಶನ, ಗದಗ.
ಹಾಲತಿ ಸೋಮಶೇಖರ; ಮಹಿಳಾ ಚಳುವಳಿ-ಸಮಾಜ ಮತ್ತು ಸಂಸ್ಕೃತಿ ಹಿನ್ನಲೆ. ೨೦೦೭, ವಿಸ್ಮಯ ಪ್ರಕಾಶನ, ಮೈಸೂರು.

**ಇಂಗ್ಲಿಷ್ ಪುಸ್ತಕಗಳು**

Balasubramaniam, C.; The Status of Women In Tamilnadu During The Sangam Age, 1976, University of Madras,
Ghurye,G. S.; Indian Costume, popular prakashan, Bombay.
Ismail, K.; Karnataka Temples; Their Role in Socio Economic life, 1984, Sandeep Prakshan, New Delhi,
John Goy; Indian Temple Sculpture, 2007, West land books pvt ltd,Chnnai,

**ನಿಘಂಟುಗಳು**

ಇಂಗ್ಲಿಷ್ ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾಲಯ.
ಕನ್ನಡ ನಿಘಂಟು ಸಂಪುಟಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ಸಿರಿಗನ್ನಡ ಅರ್ಥಕೋಶ, ಶಿವರಾಮ ಕಾರಂತ

**ಪತ್ರಿಕೆ**

ಶಿವಪ್ರಕಾಶ, ಹೆಚ್.ಎಸ್.; ತಂತ್ರ ಮಾಂತ್ರಿಕತೆಗಳ ಒಳಹೊರಗು, ಪ್ರಜಾವಾಣಿ ದಿನಪತ್ರಿಕೆ, ೨೭ ಸಪ್ಟಂಬರ್ ೨೦೧೩.








ಬೆಳತೂರು : ದೇಕಬ್ಬೆ ಸತಿ ಶಿಲ್ಪ



ಅಬ್ಬಲೂರು : ಕುಟುಂಬ ಸಮೇತ ಸಿಡಿದೆಲೆ



ಬಳ್ಳಿಗಾವೆ : ಸತಿ ಶಿಲ್ಪ.



ಅಬ್ಬಲೂರು : ಪೆಣ್ಬುಯಲ್



ಜಲಸಂಗ್ವಿ: ಮದನಿಕಾ/ಸಾಲಬಂಜಿಕಾ



ಬೇಲೂರು: ವಾದ್ಯ ಮತ್ತು ನೃತ್ಯ ಶಿಲ್ಪ

